# ಹೊಸತು




ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಶ್ರೀಹರಿ, ರವಿ ಹೆಗ್ಗಡಿ, ಕಮಲಂ ಅರಸು, ವಿ. ಗೋಪಾಲ್, ಸ್ಮಿತಾ ಕೌಶಿಕ್, ಗೋಪಿ, ಜಿಎಂಬೊ, ವಿ. ಆರ್. ಸಿ. ಶೇಖರ್

**ಮುಖಪುಟ :** ಕಾಶ್ಮೀರ ಪ್ರವಾಹ, ಬಿಪಿನ್‌ಚಂದ್ರ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಇತ್ತೀಚೆಗೆ ನಡೆದ ಲೋಕಸಭಾ ಚುನಾವಣೆಯಲ್ಲಿ ನರೇಂದ್ರ ಮೋದಿ ಮಾಡಿದ ಘೋಷಣೆಗಳೆಷ್ಟೋ ಮತ್ತು ಮೋದಿಯ ಮುಖವಾಡ ಧರಿಸಿ ಅವು ವೇದ ಘೋಷವೆಂದೇ ಭಾವಿಸಿ ಖುಷಿಪಟ್ಟವರೆಷ್ಟೋ. ಮೋದಿ ಪ್ರಧಾನಿ ಪಟ್ಟಕ್ಕೇರಿದರೆ ಒಳ್ಳೆಯ ದಿನಗಳು ಬರುತ್ತವೆ ಎಂಬ ಘೋಷಣೆಯೂ ಅವುಗಳಲ್ಲಿ ಒಂದು. ಮೋದಿಯ ನೂರು ದಿನಗಳ ಆಳ್ವಿಕೆ ನೋಡಿದ್ದಾಗಿದೆ. ಒಳ್ಳೆಯ ದಿನಗಳು ಬಂದಿವೆ ಎಂಬುದಂತೂ ಈಗ ಖಚಿತವಾಗಿದೆ. ಶ್ರೀಕೃಷ್ಣ ಪರಮಾತ್ಮ ಸುಳ್ಳು ಹೇಳಿರಬಹುದು. ಆದರೆ ಅವತಾರ ಪುರುಷ ಮೋದಿ ಸುಳ್ಳು ಹೇಳಲು ಸಾಧ್ಯವೇ ! ಒಳ್ಳೆಯ ದಿನಗಳು ಬರಲಿವೆ ಎಂದು ಹೇಳಿದ್ದನೇ ಹೊರತು ಯಾರಿಗೆ ಎಂಬುದೇನನ್ನೂ ಹೇಳಿರಲಿಲ್ಲವಲ್ಲ. ಚುನಾವಣೆಯಲ್ಲಿ ಸೋತರೂ ಅರುಣ್ ಜೇಟ್ಲಿ ಮತ್ತು ಸ್ಮೃತಿ ಇರಾನಿಗೆ ಮಂತ್ರಿ ಪದವಿ ದಕ್ಕಿ ಅವರಿಗೆ ಒಳ್ಳೆಯ ದಿನಗಳು ಬಂದಿಲ್ಲವೇ ! ಮೋದಿ ಬಜೆಟ್‌ನಲ್ಲಿ ಲಕ್ಷಾಂತರ ಕೋಟಿ ತೆರಿಗೆ–ಸುಂಕ ವಿನಾಯಿತಿಗಳನ್ನು ಪಡೆದ ಕಾರ್ಪೊರೇಟ್ ಧಣಿಗಳಿಗೆ ಒಳ್ಳೆಯ ದಿನಗಳು ಬಂದಿಲ್ಲವೇ ! ಕೆಂಪು ರತ್ನಗಂಬಳಿ ಹಾಸಿ ಈ ದೇಶವನ್ನು ಸುಲಿಗೆ ಮಾಡಲು ಆಹ್ವಾನಿಸಿರುವ ಜಪಾನ್ ಕಾರ್ಪೊರೇಟ್‌ಗಳಿಗೆ ಒಳ್ಳೆಯ ದಿನಗಳು ಬಂದಿಲ್ಲವೇ ! ಅಣುಸ್ಥಾವರಗಳಿಗೆ ಯುರೇನಿಯಂ ಒದಗಿಸುವ ವ್ಯವಹಾರ ಕುದುರಿಸಿರುವ ಆಸ್ಟ್ರೇಲಿಯದ ಉದ್ಯೋಗಪತಿಗಳಿಗೆ ಒಳ್ಳೆಯ ದಿನಗಳು ಬಂದಿಲ್ಲವೇ ! ಹೀಗೆ ಒಳ್ಳೆಯ ದಿನಗಳನ್ನು ಪಾಲಿಸುತ್ತಿರುವ ಪ್ರಧಾನ ಸೇವಕನ ಬಗ್ಗೆ ಸಾಮಾನ್ಯ ಜನರಿಗೆ ಅಸಮಾಧಾನವಾಗಿರುವುದು ಎಷ್ಟು ಸರಿ ! ಒಳ್ಳೆಯ ದಿನಗಳು ಬಂದಿವೆ ನೋಡಿದಿರಾ !

* * *

ಸ್ವತಂತ್ರ ಭಾರತದ ಅತಂತ್ರ ಜನರನ್ನು ಉದ್ದೇಶಿಸಿ ಮೋದಿ ಸಾಹೇಬರು ಕೆಂಪು ಕೋಟೆಯಿಂದ ಮಾಡಿದ ಭಾಷಣ ಹತ್ತು ಹಲವಾರು ಪಂಡಿತರಿಗೆ ಪ್ರಧಾನ ಚರ್ಚೆಯ ಗ್ರಾಸವಾಗಿದ್ದು. ಅದರ ಬಗ್ಗೆ ಅಂದಿನ ಭಾಷಣಕ್ಕಿಂತ ದೀರ್ಘ ಲೇಖನಗಳು ಉಕ್ಕಿ ಹರಿದದ್ದು ತಿಳಿದ ವಿಷಯವೇ. ತಾನು ದೇಶದ ಪ್ರಧಾನ ಸೇವಕನೆಂದು ಸಾರಿದ್ದನ್ನು ಕೇಳಿ ರಾಷ್ಟ್ರೀಯ ಸ್ವಯಂ ಸೇವಕರು ರೋಮಾಂಚನಗೊಂಡರೆಂದು ಸುದ್ದಿ. ಈ ಪ್ರಧಾನ ಸೇವಕನ ನೂರು ದಿನಗಳ ಕೆಲಸವೇನೆಂದು ನೋಡುವ ಸಾಹಸ ಮಾಡಿದಲ್ಲಿ ದೇಶದ ನೆಲ, ಜಲ, ಖನಿಜ ಸಂಪತ್ತು, ಅರಣ್ಯ, ವಿಮಾ ಕ್ಷೇತ್ರ, ಬ್ಯಾಂಕಿಂಗ್ ಕ್ಷೇತ್ರ, ರೈಲ್ವೇ ಸಂಪರ್ಕ, ರಕ್ಷಣಾ ವ್ಯವಸ್ಥೆ, ಮಾನವ ಸಂಪನ್ಮೂಲ ಎಲ್ಲವನ್ನೂ ದೇಶೀಯ ಹಾಗೂ ವಿದೇಶಿ ಕಂಪನಿಗಳ ಸುಲಿಗೆಗೆ ಸಾಲಾಗಿ ನಿಲ್ಲಿಸಿರುವುದು. ಇದು ಮೋದಿ ಸರ್ಕಾರದ ಸಶಕ್ತ ಭಾರತದ ನಿರ್ಮಾಣಕ್ಕೆ ಮೊದಲ ಕೊಡುಗೆ. ಇದಕ್ಕೆ ಟಾಟಾ, ಬಿರ್ಲಾ, ಮಹೀಂದ್ರ, ಅಂಬಾನಿ, ಅದಾನಿ ಮತ್ತಿತರರ ಕಂಠಪೂರ್ತಿ ಶ್ಲಾಘನೆ. "ಭಾರತ ಮಾರಾಟಕ್ಕಿದೆ" ಎಂಬ ಜಾಹೀರಾತು ಕೂಡ ಶೀಘ್ರದಲ್ಲೇ ಮಾಧ್ಯಮಗಳಲ್ಲಿ ರಾರಾಜಿಸಬಹುದು. ಆಗ ನಮ್ಮ ಪ್ರಧಾನ ಸೇವಕರನ್ನು ಪ್ರಧಾನ ಮಾರಾಟಗಾರರೆಂದು ಕರೆಯಬಹುದೇನೊ !

* * *

ಎಚ್.ಎಂ.ಟಿ. ಕೈಗಡಿಯಾರ ಕೊಳ್ಳಲು ಜನರು ಕೈಗಡಿಯಾರಗಳ ಅಂಗಡಿಗಳಿಗೆ ಧಾವಿಸುತ್ತಿದ್ದಾರೆಂದು ಪತ್ರಿಕಾ ಸುದ್ದಿ. ಹಿಂದೂಸ್ಥಾನ್ ಮೆಷೀನ್ ಟೂಲ್ಸ್ (ಎಚ್.ಎಂ.ಟಿ.) ಕೈಗಡಿಯಾರ ತಯಾರಿಸುತ್ತಿದ್ದ ಬೆಂಗಳೂರು ಮತ್ತು ತುಮಕೂರು ಘಟಕಗಳ ಕೇಂದ್ರ ಸರ್ಕಾರದ ದಿವ್ಯ ಉದಾಸೀನದಿಂದಾಗಿ ರೋಗಗ್ರಸ್ತಗೊಂಡು ಆಸ್ಪತ್ರೆ ಸೇರಿ ಅದೆಷ್ಟೋ ವರ್ಷವಾಗಿತ್ತು. ಈಗ ಅದು ತನ್ನ ಕೊನೆಯುಸಿರೆಳೆಯುತ್ತಿದೆ ಎಂದು ತಿಳಿದುಬಂದಿದೆ. ದೇಶೀಯ ಕೈಗಡಿಯಾರಗಳ ಬೇಡಿಕೆ ಪೂರೈಸಲು ಜಪಾನಿನ ಸಿಟಿಝನ್ ಕೈಗಡಿಯಾರ ಕಂಪನಿಯ ಸಹಯೋಗದೊಂದಿಗೆ ಸ್ಥಾಪಿಸಲ್ಪಟ್ಟ ಎಚ್.ಎಂ.ಟಿ.ಗೆ ಪುನಃ ಜೀವ ಕೊಡಲು ಪಟ್ಟ ಪ್ರಯತ್ನಗಳಿಗೆ ಕೇಂದ್ರ ಸರ್ಕಾರ ಸ್ಪಂದಿಸದ ಕಾರಣ ಈ ಘಟಕಗಳಲ್ಲಿ ದುಡಿಯುತ್ತಿದ್ದ ಕಾರ್ಮಿಕರು ಬೀದಿಗೆ ಬೀಳುವಂತಾಗಿದೆ.

*(೬ನೇ ಪುಟಕ್ಕೆ)*



# ಸಂಪಾದಕೀಯ




ತಿಂಗಳ ಪತ್ರಿಕೆ

**ಹೊಸತು**

ವೈಚಾರಿಕತೆಯ ಹಾಗೂ ಸೃಜನಶೀಲತೆಯ

ನವಕರ್ನಾಟಕ ಪ್ರಕಾಶನ

ಸಂಪುಟ-೧೬ ಸಂಚಿಕೆ-೩ ಅಕ್ಟೋಬರ್ ೨೦೧೪

■ *ಗೌರವ ಸಂಪಾದಕ*

ಜಿ. ರಾಮಕೃಷ್ಣ

■ *ಸಂಪಾದಕ*

ಸಿದ್ದನಗೌಡ ಪಾಟೀಲ

■ *ಸಹಸಂಪಾದಕರು*

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

■ *ವ್ಯವಸ್ಥಾಪಕ*

ಎ. ಆರ್. ಉಡುಪ

■ *ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

■ *ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ : ೨೮೯೭೪೭೨೬

■ *ಹೊಸತು ಕಚೇರಿಯ ವಿಳಾಸ*





**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**


## ಕನ್ನಡ ನಾಡಿಗೆ ಭೂಗಳ್ಳರ ಕನ್ನ

**ಕ**ರ್ನಾಟಕದಲ್ಲಿ ಯಾವುದೇ ಪಕ್ಷದ ಸರಕಾರ ಬಂದರೂ ಆಡಳಿತದ ನೀತಿ, ವಿಧಾನದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ ಎಂಬುದು ರಾಜ್ಯದ ಜನತೆಯ ಬಹುದಿನದ ಅನುಭವ. ಆದರೆ ಈ ಬಾರಿ ಸಿದ್ದರಾಮಯ್ಯನವರು ಮುಖ್ಯಮಂತ್ರಿಯಾದಾಗ ನೀತಿಯಲ್ಲಿ ಬದಲಾವಣೆಯನ್ನು ನಿರೀಕ್ಷಿಸಲಾಗದಿದ್ದರೂ ಶೈಲಿಯಲ್ಲಾದರೂ ಬದಲಾವಣೆ ಕಾಣಬಹುದೆಂದು ನಿರೀಕ್ಷಿಸಲಾಗಿತ್ತು. ಆದರೆ ಅಧಿಕಾರಕ್ಕೆ ಬಂದವರೆಲ್ಲ, ಯಾವ ಪಕ್ಷವಾದರೂ ಸರಿ ಒಂದೇ ಮಣ್ಣಿನ ವಿವಿಧ ಮೂರ್ತಿಗಳು ಎಂಬುದನ್ನು ಸಿದ್ದರಾಮಯ್ಯನವರು ಸಾಬೀತು ಪಡಿಸುತ್ತಿದ್ದಾರೆ. ರಾಜ್ಯದಲ್ಲಿ ಭೂಕಬಳಿಕೆಯ ಅಕ್ರಮಗಳ ಕುರಿತು ಸರಕಾರದ ಕ್ರಮಗಳನ್ನು ಗಮನಿಸಿದರೆ ಮೇಲಿನ ಅಭಿಪ್ರಾಯಕ್ಕೆ ಸಾಕ್ಷಿ ದೊರಕುತ್ತದೆ. ಈಗಾಗಲೇ ರಾಜ್ಯದಲ್ಲಿ ಸರಕಾರಿ ಭೂಮಿಯನ್ನು ಒತ್ತುವರಿ ಮಾಡಿಕೊಂಡ ಭೂಮಾಫಿಯಾದ ವಿವರಗಳನ್ನು ಬೆಂಗಳೂರಿಗೆ ಸಂಬಂಧಿಸಿದಂತೆ ಎ. ಟಿ. ರಾಮಸ್ವಾಮಿ ವರದಿ ಹಾಗೂ ರಾಜ್ಯಕ್ಕೆ ಸಂಬಂಧಿಸಿದಂತೆ ವಿ. ಬಾಲಸುಬ್ರಮಣ್ಯ ವರದಿಗಳು ಕನ್ನಡಿಯಂತೆ ಈ ಸರಕಾರದ ಮುಂದಿವೆ. ಕೇವಲ ಒತ್ತುವರಿ ಮಾತ್ರವಲ್ಲ ನಕಲಿ ದಾಖಲೆಗಳ ಮೂಲಕ ಭೂಕಬಳಿಕೆಯನ್ನು ಮಾಡಿಕೊಂಡು ನೋಂದಣಿ ಸಹ ಮಾಡಿಕೊಂಡವರ ವಿವರಗಳೂ ಲಭ್ಯ ಇವೆ. ಬೆಂಗಳೂರು ನಗರ ಒಂದರಲ್ಲಿಯೇ ಸುಮಾರು ೨೦ ಸಾವಿರ ಎಕರೆ ಭೂಮಿಯನ್ನು, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲೂ ಅಷ್ಟೇ ಪ್ರಮಾಣದ ಸರಕಾರಿ ಭೂಮಿಯನ್ನು ಭೂಮಾಫಿಯಾ ಕಬಳಿಸಿದೆಯೆಂದು, ರಾಜ್ಯದಲ್ಲಿ ಒಟ್ಟು ನಾಲ್ಕು ಲಕ್ಷ ಎಕರೆ ಭೂಮಿಯನ್ನು ನಕಲಿ ದಾಖಲೆ ಸೃಷ್ಟಿಸಿ ಭೂಮಿ ಕಬಳಿಸಿ ಸರಕಾರಿ ದಾಖಲೆಗಳ ಪ್ರಕಾರ ಅಧಿಕೃತ ಮಾಲೀಕರಾಗಿದ್ದಾರೆ. ಇದರ ಮೌಲ್ಯವೇ ಸುಮಾರು ೪ ಲಕ್ಷ ಕೋಟಿ ರೂಪಾಯಿಗಳಷ್ಟಾಗುತ್ತದೆ ಎಂದು ಎ. ಟಿ. ರಾಮಸ್ವಾಮಿಯವರು ದಾಖಲೆ ಸಮೇತ ಹೇಳುತ್ತಾರೆ. ವಿ. ಬಾಲಸುಬ್ರಮಣ್ಯ ಅವರು ರಾಜ್ಯದಲ್ಲಿ ಸುಮಾರು ೧೧ ಲಕ್ಷ ಎಕರೆ ಸರಕಾರಿ ಜಮೀನು ಒತ್ತುವರಿ ಆಗಿದೆ ಎನ್ನುವುದಕ್ಕೆ ದಾಖಲೆ ಕೊಟ್ಟಿದ್ದಾರೆ. ಇತ್ತೀಚೆಗೆ ಸರಕಾರವೇ ಒಟ್ಟು ೧೩ ಲಕ್ಷ ಎಕರೆ ಜಮೀನು ರಾಜ್ಯದಲ್ಲಿ ಒತ್ತುವರಿಯಾಗಿದೆಯೆಂದು ನ್ಯಾಯಾಲಯದ ಮುಂದೆಯೇ ಒಪ್ಪಿಕೊಂಡಿದೆ. ರಾಜ್ಯದಲ್ಲಿ ಒತ್ತುವರಿ ಮತ್ತು ಭೂಕಬಳಿಕೆಯ ಒಟ್ಟು ಮೌಲ್ಯ ದೇಶದ ದೊಡ್ಡ ದೊಡ್ಡ ಹಗರಣಗಳ ಮೌಲ್ಯವನ್ನೂ ಮೀರಿಸಿದೆ. ಇಂಥ ಅಪಾರ ಪ್ರಮಾಣದ ಹಗರಣ ನಡೆದಿರುವಾಗ ಈ ರಾಜ್ಯದ ಮುಖ್ಯಮಂತ್ರಿ, ಸರಕಾರದ ಕ್ರಮವೇನು ಎಂದು ಸಹಜವಾಗಿಯೇ ಜನ ಪ್ರಶ್ನಿಸುತ್ತಾರೆ. ಅಕ್ರಮ ಗಣಿಗಾರಿಕೆ, ಗಣಿ ಹಗರಣಗಳ ವಿರುದ್ಧ ಸಿದ್ದರಾಮಯ್ಯ ಪಂಚೆ ಮಡಿಚಿಕೊಂಡು ಬೆಂಗಳೂರಿನಿಂದ ಬಳ್ಳಾರಿಗೆ ಕಾಲ್ನಡಿಗೆ ಜಾಥಾ ಮಾಡಿದ್ದರು. ಆಗ ಅವರು ವಿರೋಧ ಪಕ್ಷದ ನಾಯಕರಾಗಿದ್ದರು. ಈಗ ಅವರೇ ಮುಖ್ಯಮಂತ್ರಿ. ಖಂಡಿತ ಸಿದ್ದರಾಮಯ್ಯನವರು ಇಂಥ ಭೂಹಗರಣದಲ್ಲಿ ಭಾಗಿಯಾಗಿಲ್ಲ. ಅಷ್ಟು ವಿಶ್ವಾಸ ಇನ್ನೂ ಅವರ ಬಗೆಗಿದೆ. ಆದರೆ ಅಧಿಕಾರಕ್ಕೇರಿ ನೂರು ದಿನ ದಾಟಿದರೂ ರಾಜ್ಯದ ಅಪಾರ ಭೂಸಂಪತ್ತು ಲೂಟಿಯಾದ ಈ ವರದಿಗಳ ಕುರಿತು ಮುಖ್ಯಮಂತ್ರಿಗಳು ಮತ್ತು ಸರಕಾರ ಯಾಕೆ ಮಾತನಾಡುತ್ತಿಲ್ಲ ಎನ್ನುವ ಪ್ರಶ್ನೆ ರಾಜ್ಯದ ಜನತೆಯ ಮುಂದಿದೆ.

ರಾಜ್ಯದಲ್ಲಿ ನಡೆದ, ನಡೆಯುತ್ತಿರುವ ಈ ಭೂಮಿ ಹಗರಣದಲ್ಲಿ ಆಳುವ ಹಾಗೂ ವಿರೋಧಪಕ್ಷಗಳಾದ ಕಾಂಗ್ರೆಸ್, ಬಿ. ಜೆ. ಪಿ. ಹಾಗೂ ಜೆ. ಡಿ. ಎಸ್. ಎಲ್ಲ ಪಕ್ಷಗಳವರೂ ಭಾಗಿಯಾಗಿದ್ದಾರೆ ಎನ್ನುವುದು ಈ ಎರಡೂ ವರದಿಗಳಿಂದ ಮೇಲುನೋಟಕ್ಕೇ ಕಂಡುಬರುತ್ತದೆ. ಇವರಲ್ಲದೆ ಉನ್ನತ ಹಂತದಿಂದ ಗ್ರಾಮದವರೆಗಿನ ಸರಕಾರಿ ಅಧಿಕಾರಿಗಳೂ, ಗಣ್ಯರೂ, ಪ್ರಭಾವಿಗಳೂ, ಬಿಲ್ಡರ್‌ಗಳೂ ಹೀಗೆ ಹಲವಾರು ಶಕ್ತಿಗಳು ಈ ಹಗರಣದ ರೂವಾರಿಗಳಾಗಿದ್ದಾರೆ. ಇಂಥವರನ್ನು ಎದುರುಹಾಕಿಕೊಳ್ಳುವುದು ಸಿದ್ದರಾಮಯ್ಯನವರಿಗೆ ಸಾಧ್ಯವಾಗಲಿಕ್ಕಿಲ್ಲ. ಆದರೆ ಶ್ರೀ. ಎಚ್. ಎಸ್. ದೊರೆಸ್ವಾಮಿಯಂಥ ಹಿರಿಯ ಸ್ವಾತಂತ್ರ್ಯ ಹೋರಾಟಗಾರರ ನಾಯಕತ್ವದಲ್ಲಿ ಬೆಂಗಳೂರು ನಗರದ ಪುರಭವನದ ಮುಂದೆ ಭೂಕಬಳಿಕೆ ವಿರುದ್ಧ, ಸೆಪ್ಟೆಂಬರ್ ೮ರಿಂದ ನಡೆಯುತ್ತಿರುವ ಹೋರಾಟಕ್ಕೆ ಪ್ರತಿಕ್ರಿಯಿಸಲೂ ಮುಖ್ಯಮಂತ್ರಿಗಳು ಹೆದರುತ್ತಾರೆಂದು ಈ ರಾಜ್ಯದ ಜನತೆ ನಿರೀಕ್ಷಿಸಿರಲಿಲ್ಲ. ಮುಖ್ಯಮಂತ್ರಿಗಳಿಗೆ ಕೆಲಸದ ಒತ್ತಡಗಳಿರಬಹುದು ಆದರೆ ವಿಧಾನ ಸಭೆಯಿಂದ ಕೂಗಳತೆ ದೂರದಲ್ಲಿ ನಡೆಯುತ್ತಿರುವ ಈ ಹೋರಾಟಗಾರರ ಹತ್ತಿರ ಬಂದು ಮಾತನಾಡಲಾಗದಷ್ಟು ಸಮಯ ಅವರಿಗಿಲ್ಲ ಎಂಬುದನ್ನು ನಂಬುವುದು ಸರಿಯಲ್ಲ. ಸಿದ್ದರಾಮಯ್ಯನವರು ಮುಖ್ಯಮಂತ್ರಿಯಾದಾಗ ಭ್ರಷ್ಟರನ್ನು, ಆರೋಪಿತರನ್ನು ನಿಮ್ಮ ಮಂತ್ರಿ ಮಂಡಲಕ್ಕೆ ಸೇರಿಸಿಕೊಳ್ಳಬೇಡಿ ಎಂದು ದೊರೆಸ್ವಾಮಿಯವರು ಬರೆದ ಒಂದು ಪತ್ರಕ್ಕೆ ಸಿದ್ದರಾಮಯ್ಯನವರು ತಕ್ಷಣ ಸ್ಪಂದಿಸಿದ್ದರು. ಆದರೀಗ ಶ್ರೀ. ಎಚ್. ಎಸ್. ದೊರೆಸ್ವಾಮಿಯವರ ಜೊತೆ ಶ್ರೀ. ಎ. ಟಿ. ರಾಮಸ್ವಾಮಿ ಹಾಗೂ ಹಲವಾರು ಸಂಘ ಸಂಸ್ಥೆಗಳು ಸೇರಿ ಧರಣಿ ಸತ್ಯಾಗ್ರಹ ನಡೆಸುತ್ತಿವೆ. ಮಾಜಿ ಲೋಕಾಯುಕ್ತರಾದ ನ್ಯಾಯಮೂರ್ತಿ ಸಂತೋಷ ಹೆಗಡೆಯವರು ನಿರಂತರವಾಗಿ ಭಾಗವಹಿಸುತ್ತಿದ್ದಾರೆ. ನಗರದ ಕನ್ನಡಪರ ಸಂಘಟನೆಗಳು, ದಲಿತ ಸಂಘಟನೆಗಳು, ಮಹಿಳಾ ಹಾಗೂ ಇತರ ಸಾಹಿತ್ಯಿಕ, ಸಾಂಸ್ಕೃತಿಕ ಸಂಘಟನೆಗಳು ಎ. ಐ. ಟಿ. ಯು. ಸಿ. ಮುಂತಾದ ಕಾರ್ಮಿಕ ಸಂಘಟನೆಗಳು ಈ

ಹೋರಾಟಕ್ಕೆ ಬೆಂಬಲಿಸಿವೆ. ಭಾರತ ಕಮ್ಯುನಿಸ್ಟ್ ಪಕ್ಷ ಹಾಗೂ ಆಮ್ ಆದ್ಮಿ ಪಕ್ಷ ಮತ್ತು ಎಸ್. ಯು. ಸಿ. ಐ. ಪಕ್ಷಗಳು ಆರಂಭದಿಂದ ಈ ಚಳುವಳಿಯಲ್ಲಿ ಭಾಗಿಯಾಗಿವೆ. ದಿನೇ ದಿನೇ ಚಳುವಳಿ ವಿಸ್ತರಣೆಯಾಗುತ್ತಿದೆ. ಈ ಹೋರಾಟವನ್ನೇ ಮುಂದಿಟ್ಟುಕೊಂಡು ಮುಖ್ಯಮಂತ್ರಿಗಳು ಭೂ ಒತ್ತುವರಿ ಮತ್ತು ಕಬಳಿಕೆಯ ಅಪರಾಧಗಳನ್ನು ಆದ್ಯತೆಯ ವಿಷಯವಾಗಿಸಿಕೊಂಡು ಈಗಿರುವ ಕಾನೂನುಗಳಿಂದಲೇ ಅಪರಾಧಿಗಳಿಗೆ ಶಿಕ್ಷೆ ಕೊಡಿಸುವ ಕೆಲಸ ಮಾಡಬಹುದು. ರಾಜ್ಯದ ಭೂಸಂಪತ್ತನ್ನು ರಕ್ಷಿಸಬಹುದು. ಆದರೆ ಮುಖ್ಯಮಂತ್ರಿಗಳು ಚಳುವಳಿಯ ಸ್ಥಳಕ್ಕೆ ಹೋಗಿ ಅಥವಾ ಮುಖಂಡರನ್ನೇ ಕರೆಸಿಕೊಂಡು ಮಾತನಾಡುವ ಸೌಜನ್ಯ ತೋರಿಲ್ಲ (೨೩ನೇ ಸೆಪ್ಟೆಂಬರ್‌ವರೆಗೆ) ಎನ್ನುವುದು ಪ್ರಜಾಸತ್ತೆಗೆ ಅಪಮಾನ. ಕಾನೂನು ಮಂತ್ರಿ ಜಯಚಂದ್ರ ಅವರು ಹೋರಾಟದ ಸ್ಥಳಕ್ಕೆ ಬಂದು ಚಳುವಳಿ ಕೈಬಿಡಲು ಮನವಿ ಮಾಡುತ್ತಾರೆ. ಆದರೆ ಭೂಕಬಳಿಕೆ ಮಾಡಿದವರ ಮೇಲೆ ಏನು ಕ್ರಮ ಕೈಗೊಂಡಿದ್ದೀರಿ ಎಂದರೆ ಅಸಹಾಯಕತೆ ವ್ಯಕ್ತಪಡಿಸುತ್ತಾರೆ. ಚಳುವಳಿ ನಡೆದ ಹತ್ತಾರು ದಿನಗಳ ನಂತರ ಮುಖ್ಯಮಂತ್ರಿ ಸಿದ್ದರಾಮಯ್ಯನವರು ಒತ್ತುವರಿ ಜಮೀನನ್ನು ವಾಪಸ್ಸು ಪಡೆದಿದ್ದೇವೆ. ಇನ್ನು ಐದಾರು ಸಾವಿರ ಎಕರೆ ಮಾತ್ರ ಉಳಿದಿದೆ ಎಂಬ ಹೇಳಿಕೆ ಕೊಡುತ್ತಾರೆ. ಇದು ಶುದ್ಧ ಸುಳ್ಳು. ಎಲ್ಲೋ ಕೆಲವು ಕಡೆ ಬಡವರು, ಅಸಹಾಯಕರು ಮಾಡಿಕೊಂಡ ಒತ್ತುವರಿಯನ್ನು ತೆರವು ಮಾಡಿಸಿದ್ದ ಒತ್ತುವರಿಯ ಶೇಕಡ ಏಳೆಂಟು ಭಾಗ ಬಿಟ್ಟರೆ ಬಲಾಢ್ಯರು, ಪ್ರಭಾವಶಾಲಿಗಳು ಕಬಳಿಸಿದ ಜಮೀನು ಹಾಗೇ ಇದೆ. ಇದಕ್ಕೆ ಶ್ರೀ. ಎಚ್. ಎಸ್. ದೊರೆಸ್ವಾಮಿಯವರು ನೇರವಾಗಿ ಮುಖ್ಯಮಂತ್ರಿಗಳಿಗೆ ಪತ್ರ ಬರೆದು; ನೀವು ಒತ್ತುವರಿ, ಕಬಳಿಕೆಯಾದ ಜಮೀನನ್ನು ಸರಕಾರಕ್ಕೆ ಹಿಂಪಡೆದಿದ್ದರೆ, ಎಲ್ಲಿ, ಎಷ್ಟು ಜಮೀನು ಹಿಂಪಡೆದಿರಿ. ಅದನ್ನು ಕಬಳಿಸಿದವರು ಯಾರು, ಹೇಗೆ ಕಬಳಿಸಿದ್ದರು, ಅವರು ಭೂಮಿ ಕಬಳಿಸಲು ಸಹಾಯ ಮಾಡಿದ ಅಧಿಕಾರಿಗಳು, ರಾಜಕಾರಣಿಗಳು ಯಾರು, ಅವರಿಗೇನು ಶಿಕ್ಷೆ ಕೊಟ್ಟಿದ್ದೀರಿ ಅದನ್ನು ಪತ್ರಿಕೆಗಳ ಮೂಲಕ ಹೇಳಿ ಎಂದು ಕೇಳಿದ್ದಾರೆ. ಮುಖ್ಯಮಂತ್ರಿಗಳಿಂದ ಇನ್ನೂ ಉತ್ತರವಿಲ್ಲ.

ಸೂರಿಲ್ಲದ ಬಡವರು, ಅಸಹಾಯಕರು ಹೊಟ್ಟೆಪಾಡಿಗೆ, ವಸತಿ ಹಾಗೂ ಕೃಷಿಗೆ ಸರಕಾರಿ ಭೂಮಿಯನ್ನು ಅಲ್ಪಸ್ವಲ್ಪ ಒತ್ತುವರಿ ಮಾಡಿಕೊಂಡಿದ್ದಾರೆ. ಕನಿಷ್ಠ ಬದುಕಿಗಾಗಿ ಅವರು ಮಾಡಿರುವ ಒತ್ತುವರಿ ಅವರ ಹಕ್ಕು ಮತ್ತು ಅದನ್ನು ಸಕ್ರಮ ಮಾಡಿಕೊಡುವುದು ಸರಕಾರದ ಜವಾಬ್ದಾರಿ. ಇದನ್ನು ಭೂಕಬಳಿಕೆ ಹೋರಾಟ ಸಮಿತಿಯೂ ಸ್ಪಷ್ಟಪಡಿಸಿದೆ. ಆದರೆ ಸರಕಾರಿ ಜಮೀನನ್ನು, ಪಾರ್ಕ್‌ಗಳನ್ನು, ಕೆರೆಗಳನ್ನು, ರಸ್ತೆಗಳನ್ನು ಅರಣ್ಯಪ್ರದೇಶ, ಗುಡ್ಡಬೆಟ್ಟಗಳನ್ನೇ ಒತ್ತುವರಿ ಮಾಡಿಕೊಂಡವರು, ಭೂಮಿ ಕಬಳಿಸಿ ಸುಳ್ಳು ಹೆಸರಿನಲ್ಲಿ ನೋಂದಣಿ ಮಾಡಿಸಿಕೊಂಡವರು ಸಾಮಾನ್ಯರಲ್ಲ. ಅವರು ಹೆಚ್ಚಿನ ಸಂಖ್ಯೆಯಲ್ಲಿ ವಿಧಾನ ಸೌಧದಲ್ಲಿದ್ದಾರೆ. ಹೊರಗಿದ್ದವರು ಆಳುವ ವಿರೋಧಪಕ್ಷಗಳಿಗೆ ಚುನಾವಣೆಯಲ್ಲಿ ಹಣ, ಹೆಂಡ ಕೊಟ್ಟಿದ್ದಾರೆ, ಮೇಲಿನಿಂದ ಕೆಳಹಂತದ ಭ್ರಷ್ಟ ಅಧಿಕಾರಿಗಳನ್ನು ನಿಯಂತ್ರಿಸುತ್ತಿದ್ದಾರೆ. ಇಂಥವರನ್ನು ನಿಯಂತ್ರಿಸುವುದು, ಅವರ ಈ ಕಳ್ಳ ಆಸ್ತಿಗೆ ಕಾನೂನಿನ ಕೈ ತಗಲಿಸುವುದು ಸಾಮಾನ್ಯ ಕೆಲಸವಲ್ಲ. ಈಗಾಗಲೇ ಬಿ.ಜೆ.ಪಿ.ಯ ಶಾಸಕ ಸಿ. ಟಿ. ರವಿಯವರು ಒತ್ತುವರಿದಾರರ ಪರವಾಗಿ ಧ್ವನಿ ಎತ್ತಿದ್ದಾರೆ. 'ಸಣ್ಣಹಿಡುವಳಿದಾರರ ಜಮೀನು ಖಾಯಂಗೊಳಿಸಬೇಕು ಹಾಗೂ ಹತ್ತು ಎಕರೆ ಮೇಲಿನ ಒತ್ತುವರಿಯನ್ನು ಹಣ ಕಟ್ಟಿಸಿಕೊಂಡು ಖಾಯಂ ಮಾಡಬೇಕು ಅಥವಾ ಲೀಜಿಗೆ ಕೊಡಬೇಕು' ಎಂದು ಹೇಳಿದ್ದಾರೆ. ಇದಕ್ಕಿಂತ ನಿರ್ಲಜ್ಜ ಸಂಗತಿ ಬೇರಿಲ್ಲ. ಬಡವರು ಹೊಟ್ಟೆಪಾಡಿಗಾಗಿ ಮಾಡಿಕೊಂಡ ಒತ್ತುವರಿಯ ಜೊತೆಗೆ ಹತ್ತು ಎಕರೆಗಿಂತ ಹೆಚ್ಚಿನ ಒತ್ತುವರಿದಾರರಿಗೂ ಇವರು ರಿಯಾಯಿತಿ ಬಯಸಿದ್ದಾರೆ. ಈ ರಾಜ್ಯದಲ್ಲಿ ಕೋಟ್ಯಾಂತರ ಜನ ತುಂಡು ಭೂಮಿಯೂ ಇಲ್ಲದ 'ಚೋಮ'ಗಳಿದ್ದಾರೆ. ಅವರ ಪರವಾಗಿ ಚಿಂತಿಸದೇ ಒತ್ತುವರಿದಾರರ ಪರವಾಗಿ ದೇಶವನ್ನು ಆಳುತ್ತಿರುವ, ರಾಜ್ಯವನ್ನಾಳಿದ ಒಂದು ಪಕ್ಷದ ವ್ಯಕ್ತಿ ಈ ರೀತಿ ಹೇಳುವುದು ಏನನ್ನು ತೋರಿಸುತ್ತದೆ.

ಈ ರಾಜ್ಯದಲ್ಲಿ ಭೂಸುಧಾರಣೆ ಕಾನೂನು ಜಾರಿಗೆ ತಂದು ಇವತ್ತಿಗೂ ಜನರ ಸ್ಮರಣೆಯಲ್ಲಿರುವ ಮುಖ್ಯಮಂತ್ರಿ ದೇವರಾಜ ಅರಸರಂತಾಗಬೇಕೋ ಅಥವಾ ಹತ್ತಾರು ಮುಖ್ಯಮಂತ್ರಿಗಳ ತರಹ ಮುಖ್ಯಮಂತ್ರಿಯಾಗಿ, ಮಾಜಿ ಮುಖ್ಯಮಂತ್ರಿಯಾಗಿ ಜನಮನದಿಂದ ದೂರವಾಗಿರಬೇಕೋ ಎಂಬುದನ್ನು ಸಿದ್ದರಾಮಯ್ಯನವರು ಯೋಚಿಸಬೇಕು. ರಾಜ್ಯದ ಅಪಾರ ಮೌಲ್ಯದ ೧೩ ಲಕ್ಷ ಎಕರೆ ಸರಕಾರಿ ಜಮೀನು ರಕ್ಷಿಸುವುದು ಸಾಮಾನ್ಯ ಕೆಲಸವಲ್ಲ. ಅದೊಂದು ಹೋರಾಟ. ಅಧಿಕಾರ ಇದ್ದರೂ, ಹೋದರೂ ಚಿಂತೆಯಿಲ್ಲ ಈ ಹೋರಾಟ ನಡೆಸುತ್ತೇನೆಂದು ಸಿದ್ದರಾಮಯ್ಯನವರು ತೀರ್ಮಾನಿಸಲಿ. ರಾಜ್ಯದ ಈ ಅಮೂಲ್ಯ ಸಂಪತ್ತನ್ನು ರಕ್ಷಿಸಲು ಭ್ರಷ್ಟ ರಾಜಕಾರಣಿಗಳು ಅಡ್ಡಿಯಾಗುತ್ತಾರೆ. ಮಾಜಿ ಪ್ರಧಾನಿ ದೇವೇಗೌಡರಂಥವರು ಪತ್ರಿಕೆ ಮೂಲಕ ಮಾತನಾಡುತ್ತಾರೆ. ಅವರದೇ ಪಕ್ಷದ ಶಾಸಕರಾಗಿದ್ದ ಎ. ಟಿ. ರಾಮಸ್ವಾಮಿ ಅವರ ವರದಿಯ ಜಾರಿಗಾಗಿ ಅವರ ಪಕ್ಷ ಶಾಸನಸಭೆಯ ಒಳಗೆ ಹೋರಾಡುವುದಿಲ್ಲವೆಂದರೇನರ್ಥ. ಬಿ. ಜೆ. ಪಿ.ಯವರು ಗುಡ್ಡಬೆಟ್ಟಗಳನ್ನೇ ನುಂಗಿದ್ದವರು, ಅವರ ಗಂಟಲು ಖಾಲಿ ಇಲ್ಲ. ಕಾಂಗ್ರೆಸ್‌ನವರು ಅಧಿಕಾರ ಇಲ್ಲದಾಗ ಹಗರಣಗಳ ಕುರಿತು ಮಾತನಾಡುತ್ತಾರೆ. ಅಧಿಕಾರ ಸಿಕ್ಕಾಗ ಪಾಲುದಾರರಾಗುತ್ತಾರೆ. ಇಂಥ ಸಂದರ್ಭದಲ್ಲಿ ಜನಾಂದೋಲನವೇ ಇವರಿಗೆ ಪಾಠ ಕಲಿಸಬೇಕು.

'ಕರ್ನಾಟಕ ಭೂಕಬಳಿಕೆಯ (ನಿಷೇಧ) ವಿಧೇಯಕ ೨೦೦೭' ಜಾರಿಗೆ ಬರಬೇಕು, ಭೂ ಅಕ್ರಮಗಳ ವಿಚಾರಣೆಗೆ ವಿಶೇಷ ನ್ಯಾಯಾಲಯಗಳ ರಚನೆಯಾಗಬೇಕು. ರಾಜ್ಯದ ಸರಕಾರಿ ಭೂಮಿ ಒತ್ತುವರಿ, ಕಬಳಿಕೆ ಮಾಡಿದವರಿಗೆ, ಅವರಿಗೆ ಸಹಕರಿಸಿದವರಿಗೆ ಶಿಕ್ಷೆಯಾಗಬೇಕು. ಈಗಾಗಲೇ ನೆರೆಯ ಆಂಧ್ರ ಪ್ರದೇಶದಲ್ಲಿ ಇಂಥ






■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

■ ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ – ೫೮೫ ೧೦೨
✆ : ೦೮೪೭೨-೨೨೪೩೦೨

ಕಾನೂನು ಜಾರಿಗೆ ಬಂದು ಅಲ್ಲಿನ ಭೂಒತ್ತುವರಿ ವ್ಯಾಜ್ಯಗಳನ್ನು ತಕ್ಷಣ ವಿಚಾರಣೆಗೊಳಪಡಿಸಿ ರಾಜ್ಯದ ಭೂಸಂಪತ್ತನ್ನು ರಕ್ಷಿಸಲು ಸಾಧ್ಯವಾಗಿದೆ. ನಮ್ಮ ರಾಜ್ಯದಲ್ಲಿ ಅಂಥ ಕಾನೂನಿಗೆ ರಾಜ್ಯ ಹಾಗೂ ಕೇಂದ್ರ ಸರ್ಕಾರ ತೀವ್ರ ಪ್ರಯತ್ನ ಮಾಡಬೇಕು. ಈಗ ಈ ವಿಧೇಯಕ ಕೇಂದ್ರ ಸರ್ಕಾರದ ಮುಂದಿದೆ. ಅಲ್ಲಿಯ ವರೆಗೆ 'ಅಪಾಯಕಾರಿ ಚಟುವಟಿಕೆ ತಡೆಗಟ್ಟುವಿಕೆ ಅಧಿನಿಯಮ ೧೯೮೫'ರಡಿ ಇವರ ಮೇಲೆ ಕ್ರಮಕೈಗೊಳ್ಳಬೇಕು. ಭೂಗಳ್ಳರ ಕೈಸೇರಿದ ರಾಜ್ಯದ ಭೂಸಂಪತ್ತನ್ನು ಮರಳಿ ಪಡೆಯಬೇಕೆನ್ನುವ ಹೋರಾಟ ತೀವ್ರವಾಗಬೇಕು. ಬೆಂಗಳೂರು ನಗರ ಮಾತ್ರವಲ್ಲ ರಾಜ್ಯದಾದ್ಯಂತ ಇಂಥ ಚಳುವಳಿ ವಿಸ್ತರಿಸಿ ರಾಜ್ಯದ ನೆಲ, ಜಲ ರಕ್ಷಣೆಗೆ ಜನತೆ ಮುಂದಾಗಬೇಕು.

ಸಿದ್ಧನಗೌಡ ಪಾಟೀಲ

## ಜಮ್ಮು - ಕಾಶ್ಮೀರದ ಪ್ರವಾಹ ದುರಂತ

**ಕ**ಳೆದ ಸೆಪ್ಟೆಂಬರ್ ತಿಂಗಳ ಮೊದಲ ವಾರದಲ್ಲಿ ಜಮ್ಮು-ಕಾಶ್ಮೀರದಲ್ಲಿ ಸಂಭವಿಸಿದ ಪ್ರವಾಹ ದುರಂತ ಅಭೂತಪೂರ್ವವಾದ್ದು. ಅನಾಹುತದಲ್ಲಿ ಸಾವಿಗೀಡಾದವರ ಸಂಖ್ಯೆ ಇನ್ನೂರಕ್ಕೂ ಹೆಚ್ಚು ಮಂದಿ, ನಿರಾಶ್ರಿತರಾದವರ ಸಂಖ್ಯೆ ಲಕ್ಷಾಂತರ, ಜಲಾವೃತಗೊಂಡಿದ್ದ ಪ್ರದೇಶಗಳಲ್ಲಿ ಸಿಕ್ಕಿಕೊಂಡಿದ್ದು ರಕ್ಷಿತರಾದವರ ಸಂಖ್ಯೆಯೇ ಎರಡೂವರೆ ಲಕ್ಷಕ್ಕೂ ಅಧಿಕ ಮಂದಿ. ಈ ದುರಂತದಿಂದ ಸಂಭವಿಸಿರುವ ಅಪಾರವಾದ ನಷ್ಟವನ್ನು ಇನ್ನೂ ಅಂದಾಜು ಮಾಡಿಲ್ಲ. ಒಂದು ಅಂದಾಜಿನ ಪ್ರಕಾರ ಈ ಪ್ರದೇಶದ ವಾಣಿಜ್ಯ ವಹಿವಾಟುಗಳಿಗಾಗಿರುವ ನಷ್ಟವೇ ಹೆಚ್ಚು ಕಡಿಮೆ ಆರು ಸಾವಿರ ಕೋಟಿ ರೂಪಾಯಿಗಳು. ಸುಮಾರು ಮೂವತ್ತು ಸಾವಿರ ಸೈನಿಕರು ಪ್ರವಾಹಪೀಡಿತ ಜನರಿಗೆ ನೆರವೀಯುವುದರಲ್ಲಿ ನಿರತರಾಗಿದ್ದರು. ಇನ್ನೂ ರಕ್ಷಣಾ ಕಾರ್ಯ ಮುಂದುವರೆಯುತ್ತಿದೆ. ಅರವತ್ತು ವರ್ಷಗಳಲ್ಲಿ ರಾಜ್ಯದಲ್ಲಿ ಇಂಥ ದುರಂತ ಸಂಭವಿಸಿರಲಿಲ್ಲ. ಕಾಶ್ಮೀರ ಪ್ರವಾಸದಲ್ಲಿದ್ದ ಸಾವಿರಾರು ಮಂದಿ ಸಾಕಷ್ಟು ಬವಣೆ ಅನುಭವಿಸಿದರು, ಇವರ ಪೈಕಿ ನಮ್ಮ ರಾಜ್ಯದಿಂದ ಹೋಗಿದ್ದವರೂ ನೂರಾರು ಜನ. ಕಾಶ್ಮೀರದ ಈ ದುರಂತದಲ್ಲಿ ಸಂಕಷ್ಟ ಅನುಭವಿಸುತ್ತಿರುವ ಸಂತ್ರಸ್ತರಿಗೆ ಸಹಾನುಭೂತಿ ವ್ಯಕ್ತಪಡಿಸುವುದರೊಂದಿಗೆ, ಅವರ ನೆರವಿಗೆ ದೇಶದ ಜನತೆ ಸ್ಪಂದಿಸುವುದು ಅಗತ್ಯ. ಆದಷ್ಟು ಬೇಗನೆ ರಾಜ್ಯ ಸಹಜ ಸ್ಥಿತಿಗೆ ಮರುಳಲೆಂದು ಆಶಿಸೋಣ.

ಉತ್ತರಾಖಂಡದ ಜಲಪ್ರಳಯ ಸಂಭವಿಸಿದ ಹದಿನೈದು ತಿಂಗಳ ನಂತರ ಕಾಶ್ಮೀರ ದುರಂತ ಸಂಭವಿಸಿದೆ. ಇನ್ನೂ ಕೂಡ ಆ ಅನಾಹುತದ ಬಗ್ಗೆ ವರದಿ ಬಂದಿಲ್ಲ. ಕಾಶ್ಮೀರದ ಪ್ರವಾಹ ಕುರಿತ ವರದಿ ಯಾವಾಗ ಬರುತ್ತದೋ! ಉತ್ತರಾಖಂಡದ ಪ್ರವಾಹದ ವಿಚಾರದಲ್ಲಿ ಮುನ್ಸೂಚನೆ ಇದ್ದರೂ ಸರಕಾರ ಯಾವುದೇ ಕ್ರಮ ಕೈಗೊಳ್ಳಲಿಲ್ಲ. ಕಾಶ್ಮೀರದಲ್ಲಿ ಧಾರಾಕಾರವಾಗಿ ವಿಪರೀತ ಮಳೆಯಾಗುತ್ತಿದ್ದರೂ ಕೇಂದ್ರ ಹಾಗೂ ರಾಜ್ಯ ಸರಕಾರದ ಯಾವ ಸಂಸ್ಥೆಯೂ ಪ್ರವಾಹ ಭೀತಿಯ ಮುನ್ಸೂಚನೆ ನೀಡುವ ಗೊಡವೆಗೆ ಹೋಗಲಿಲ್ಲ. ಮುಖ್ಯವಾಗಿ ಭಾರತೀಯ ಪವನ ವಿಜ್ಞಾನ ಕೇಂದ್ರ ಯಾವುದೇ ಸೂಚನೆಯನ್ನು ನೀಡದಿದ್ದುದು ಅದರ ವಿಫಲತೆ. ದೇಶದ ಜನಸಂಪನ್ಮೂಲಗಳನ್ನು ಕುರಿತು ಮೇಲ್ವಿಚಾರಣೆ ನಡೆಸುವುದರಲ್ಲಿ ತಂತ್ರಜ್ಞಾನ ಹೊಂದಿರುವ ಕೇಂದ್ರ ಜಲಮಂಡಳಿ ಪ್ರವಾಹಕ್ಕೆ ಈಡಾಗಬಹುದಾದ ನದಿ ಪಾತ್ರದಲ್ಲಿ ಇರುವ ಪ್ರದೇಶಗಳಿಗೂ ಎಚ್ಚರಿಕೆಯ ಸೂಚನೆ ನೀಡಲಿಲ್ಲ. ಹಾಗಾಗಿ ರಾಜಧಾನಿ ಶ್ರೀನಗರದಲ್ಲಿರುವ ಜನರಿಗೆ ತಮ್ಮ ಗೃಹಗಳಲ್ಲಿ ನೀರು ತುಂಬಿಕೊಳ್ಳುವವರೆಗೆ ಏನೂ ಗೊತ್ತಾಗಲೇ ಇಲ್ಲ. ಪ್ರವಾಹ ಅಪಾಯಮಟ್ಟಕ್ಕೇರಿದಾಗಲೇ ಸರಕಾರ ಎಚ್ಚೆತ್ತುಗೊಂಡದ್ದು. ಅಸಾಧಾರಣವಾದ ಮಳೆಯ ಕಾರಣದಿಂದಾಗಿ ಝೀಲಮ್ ಮತ್ತು ಚಿನಾಬ್ ನದಿಗಳು ಉಕ್ಕಿ ಹರಿಯತೊಡಗಿದುವು. ಮಾಧ್ಯಮಗಳಲ್ಲಿ ಪ್ರಸಾರಗೊಂಡ ದೃಶ್ಯಗಳನ್ನು ನೋಡಿದವರಿಗೆ ಇಡೀ ರಾಜ್ಯವೇ ಜಲಾವೃತವಾಗಿರುವಂತೆ ಕಂಡಿತು. ಜನವಸತಿ ಇರುವ ಅನೇಕ ಕಡೆಗಳಲ್ಲಿ ಪ್ರವಾಹದ ನೀರು ಸೂರನ್ನು ತಗಲುವ ಮಟ್ಟಕ್ಕೇರಿತ್ತು. ರಾಜ್ಯದ ಆಡಳಿತ ನಿರ್ವಹಿಸುವ ಸರಕಾರಿ ಕಚೇರಿಯೇ ಜಲಾವೃತಗೊಂಡಿದ್ದು ಮುಖ್ಯಮಂತ್ರಿ ಒಮರ್ ಅಬ್ದುಲ್ಲಾ ಸುರಕ್ಷಿತ ಸ್ಥಳದಿಂದ ಕಾರ್ಯ ನಿರ್ವಹಿಸಬೇಕಾಯಿತು. ಇದರಿಂದ ಪ್ರವಾಹದ ಅನಾಹುತದ ಪ್ರಮಾಣವನ್ನು ಊಹಿಸಿಕೊಳ್ಳಬಹುದು. ಲಕ್ಷಗಟ್ಟಲೆ ಜನ ಅನ್ನ ನೀರಿಲ್ಲದೆ ಮನೆಯ ತಾರಸಿಗಳ ಮೇಲೆ ರಕ್ಷಣೆಗಾಗಿ ಕಾಯುತ್ತಿದ್ದರು. ಸೇನಾಪಡೆಯವರು ನೂರಾರು ದೋಣಿಗಳನ್ನು ತಂದು ರಕ್ಷಣಾ ಕಾರ್ಯದಲ್ಲಿ ತೊಡಗಿಕೊಂಡರು. ಸುಮಾರು ಇನ್ನೂರು ಹೆಲಿಕಾಪ್ಟರುಗಳು ಸಂತ್ರಸ್ತರಿಗೆ ಆಹಾರ ಒದಗಿಸುವುದರಲ್ಲಿ, ಅವರನ್ನು ಸುರಕ್ಷಿತ ಸ್ಥಳಗಳಿಗೆ ಒಯ್ಯುವುದರಲ್ಲಿ ನಿರತವಾಗಿದ್ದುವು. ಸೇನಾಪಡೆ ನಿರ್ವಹಿಸಿದ ಕಾರ್ಯ ನಿಜಕ್ಕೂ ಪ್ರಶಂಸನೀಯ. ಲಕ್ಷಾಂತರ ಮಂದಿ ಸಂತ್ರಸ್ತರನ್ನು ಬಚಾವ್ ಮಾಡಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಪ್ರವಾಹ ಪ್ರದೇಶದಲ್ಲಿ ಸಂಭವಿಸಿರುವ ಅನಾಹುತವನ್ನು ವಿಮಾನದಲ್ಲಿ ಕುಳಿತು ವೀಕ್ಷಿಸಿದ ಪ್ರಧಾನಿ ನರೇಂದ್ರ ಮೋದಿ ಹತ್ತು ಸಾವಿರ ಕೋಟಿ ಪರಿಹಾರವನ್ನು ಪ್ರಕಟಿಸಿ ಹೋದರು. ಪ್ರಮುಖ ರಾಜಕಾರಣಿಗಳು, ರಾಜಕೀಯ ಪಕ್ಷಗಳು ತಕ್ಷಣ ಕಾರ್ಯಪ್ರವೃತ್ತರಾಗದಿದ್ದುದು ಜಮ್ಮು-ಕಾಶ್ಮೀರ ಜನರಲ್ಲಿ ಆಕ್ರೋಶ ಉಂಟುಮಾಡಿದೆ. ಕೆಲವು ಪ್ರದೇಶಗಳಲ್ಲಿ ಜನರು ಕಲ್ಲು ತೂರಿ ತಮ್ಮ ಪ್ರತಿಭಟನೆ ವ್ಯಕ್ತಗೊಳಿಸಿದ್ದಾರೆ. ಪ್ರವಾಹ ಪರಿಸ್ಥಿತಿ ಈಗ ಸುಧಾರಿಸುತ್ತಿದ್ದು, ಜನ ಪುನರ್ವಸತಿಗಾಗಿ ತಮ್ಮ ವಾಸಸ್ಥಳಗಳಿಗೆ ಮರಳುತ್ತಿದ್ದಾಗ್ಯೂ ಪರಿಹಾರ ಕಾರ್ಯ ನಿರೀಕ್ಷಿತ ಪ್ರಮಾಣವನ್ನು ತಲುಪಿಲ್ಲ. ದೇಶದ ಎಲ್ಲ ರಾಜ್ಯಗಳಿಂದ ಪ್ರವಾಹಪೀಡಿತ ಸಂತ್ರಸ್ತರ ನೆರವಿಗಾಗಿ ಧನ ಧಾನ್ಯಗಳು, ಕಂಬಳಿ ಮತ್ತು ವಸ್ತ್ರಗಳು ಬಂದುಬೀಳುತ್ತಿವೆ. ಅದರ ಸದ್ವಿನಿಯೋಗ ಮಾಡುವುದು ಸರಕಾರ ಮತ್ತು ಸಾರ್ವಜನಿಕ ಸಂಸ್ಥೆಗಳ ಹೊಣೆ. ಸರಕಾರ ಪರಿಹಾರ ನೀಡಿಕೆಯಲ್ಲಿ ತಾರತಮ್ಯ ತೋರದೆ ಸಂತ್ರಸ್ತರೆಲ್ಲರಿಗೂ ದೊರಕುವಂತೆ ಮಾಡಬೇಕಾಗಿದೆ. ನಗರಪ್ರದೇಶಗಳಲ್ಲಿ ಪ್ರವಾಹ ಹಿಂದಕ್ಕೆ ಸರಿದು ಪರಿಸ್ಥಿತಿ ಸುಧಾರಿಸುತ್ತಿದ್ದ ಹಾಗೆ ಸಾಂಕ್ರಾಮಿಕ ರೋಗ ಹರಡುವ ಭೀತಿ ಆವರಿಸಿದೆ. ಯಾವುದೇ ಪ್ರವಾಹ ಪೀಡಿತ ಪ್ರದೇಶದಲ್ಲೂ ಅಂಥ ಸಂಭವವೇ ಹೆಚ್ಚು. ಸರಕಾರ ಎಚ್ಚೆತ್ತು ಅದನ್ನು ಎದುರಿಸಲು ಸೂಕ್ತಕ್ರಮ ತೆಗೆದುಕೊಳ್ಳಬೇಕಾಗಿದೆ. ಈಗಾಗಲೇ ಅನ್ಯಾಕ್ರಾಂತ ಭಾವನೆ ಹೊಂದಿರುವ ಜಮ್ಮು-ಕಾಶ್ಮೀರ ಜನರಿಗೆ ಈ ಸಂಕಷ್ಟದ ಸಂದರ್ಭದಲ್ಲಿ ಸರಕಾರ ಹಾಗೂ ದೇಶದ ಜನತೆ ಎಲ್ಲ ರೀತಿಯ ಬೆಂಬಲ ನೀಡುವುದು ಜರೂರಾಗಿ ಆಗಬೇಕಾದ ಕೆಲಸ.

ಜಮ್ಮು-ಕಾಶ್ಮೀರ ಪ್ರದೇಶದಲ್ಲಿ ಸಂಭವಿಸಿದ ಜಲಪ್ರಳಯದಲ್ಲಿ ನೈಸರ್ಗಿಕ ವಿಕೋಪದ ಪ್ರಮಾಣ ಎಷ್ಟು, ಮಾನವನ ನಿರ್ಲಕ್ಷ್ಯದ, ಅಭಿವೃದ್ಧಿಯ ಹೆಸರಿನಲ್ಲಿ ಪರಿಸರ ಹಾನಿಯ ಪ್ರಮಾಣ ಎಷ್ಟು ಎಂದು ಅಂದಾಜು ಮಾಡುವ ಕಾಲ ಸನ್ನಿಹಿತವಾಗಿದೆ. ಝೀಲಮ್ ಮತ್ತು ಚಿನಾಬ್ ನದಿಯ ಎರಡೂ ಪ್ರದೇಶಗಳಲ್ಲಿ ನಡೆದಿರುವ ಒತ್ತುವರಿ, ಪರಿಸರ ರಕ್ಷಣೆಯ ನಿಯಮಗಳನ್ನು ಉಲ್ಲಂಘನೆ ಮಾಡಿ ಕೈಗೊಂಡಿರುವ ಹಲವು ಜಲವಿದ್ಯುತ್ ಕೇಂದ್ರಗಳ ಸ್ಥಾಪನೆಯ ಪಾತ್ರ ಎಷ್ಟು ಎನ್ನುವುದನ್ನು ಪರಿಶೀಲಿಸಬೇಕಾಗಿದೆ. ಆಗಿರುವ ಅನಾಹುತಗಳಿಗೆ ಇವುಗಳ ಪಾತ್ರ ಕಡಿಮೆಯೇನಲ್ಲ. ದೇಶದ ಸರ್ವೋಚ್ಚ ನ್ಯಾಯಾಲಯ ಈಗಾಗಲೇ ಪರಿಹಾರ ಹಾಗೂ ಕಾರಣಗಳ ಬಗ್ಗೆ ಕೇಂದ್ರ ಹಾಗೂ ರಾಜ್ಯ ಸರಕಾರದಿಂದ ವರದಿ ಅಪೇಕ್ಷಿಸಿದೆ. ಸರಕಾರ ಸಂಭವಿಸಿದ ದುರಂತ ಕುರಿತು ಸಮರ್ಪಕವಾದ ತನಿಖೆ ನಡೆಸಿ, ಅನಗತ್ಯವಾಗಿ ತಡಮಾಡದೆ ವರದಿಯನ್ನು ಜನತೆಯ ಮುಂದೆ ಇರಿಸಲಿ. ಮತ್ತೊಂದು ಅನಾಹುತ ಸಂಭವಿಸುವವರೆಗೆ ಕಾಯುವ ತಾಮಸ ನೀತಿ ಬೇಡ. ಕಾಶ್ಮೀರದ ಜನ ಅರವತ್ತಕ್ಕೂ ಹೆಚ್ಚು ವರ್ಷಗಳಿಂದ ಒಂದಲ್ಲೊಂದು ದುರಂತವನ್ನು, ಅನಿರೀಕ್ಷಿತ ಘಟನೆಗಳನ್ನು ಅನುಭವಿಸುತ್ತ ಬಂದಿದ್ದಾರೆ. ಒಂದು ಕಡೆ ಪ್ರತ್ಯೇಕವಾದಿಗಳ ಉಪಟಳ, ಉಗ್ರಗಾಮಿಗಳ, ಭಯೋತ್ಪಾದಕರ ಹಠಾತ್ ದಾಳಿ, ಗಡಿಪ್ರದೇಶಗಳಲ್ಲಿ ಪಾಕಿಸ್ತಾನಿ ಸೈನಿಕರ ಅಟ್ಟಹಾಸ ಇವುಗಳಿಂದ ಬೇಸತ್ತಿದ್ದಾರೆ. ಈ ಬವಣೆಗಳಿಂದ ಮುಕ್ತಿಯೇ ಇಲ್ಲವೇನೋ ಎಂಬ ಭಾವನೆ ಜನತೆಯನ್ನು ಆವರಿಸಿಕೊಂಡಿದೆ. ಇದರ ಮೇಲೆ ಈಗ ಸಂಭವಿಸಿರುವ ಪ್ರವಾಹ ತಂದಿರುವ ಅನಾಹುತ ಬೇರೆ. ಜಮ್ಮು-ಕಾಶ್ಮೀರ ಜನರ ಈ ಸಂಕಷ್ಟದ ಸಮಯದಲ್ಲಿ ಅವರಿಗೆ ಎಲ್ಲ ರೀತಿಯ ನೆರವು ನೀಡಿ ಸಹಾನುಭೂತಿ ವ್ಯಕ್ತಪಡಿಸುವುದರ ಜೊತೆಗೆ ನಾವೂ ನಿಮ್ಮೊಂದಿಗಿದ್ದೇವೆ ಎಂದು ಹೇಳೋಣ.

***ಈ ತಿಂಗಳು (೩ನೇ ಪುಟದಿಂದ)***

ಇದು ಒಳ್ಳೆಯ ಮಾರುಕಟ್ಟೆ ಮತ್ತು ಒಳ್ಳೆಯ ಉತ್ಪಾದನೆಯಿದ್ದ ಸಂಸ್ಥೆಯೊಂದರ ದುರಂತ ಕಥೆ. ತಮ್ಮ ಸ್ವಾತಂತ್ರ್ಯೋತ್ಸವ ಭಾಷಣದಲ್ಲಿ "ಮೇಕ್ ಇನ್ ಇಂಡಿಯಾ" ಎಂದು ಕೂಗಿದ ಭಾರತದ ಪ್ರಧಾನ ಸೇವಕ ಮೋದಿ ಎಚ್.ಎಂ.ಟಿ. ಕೈಗಡಿಯಾರ ಘಟಕಗಳ ಚರಮಗೀತೆಯನ್ನು ಇಷ್ಟರಲ್ಲೇ ಹಾಡಲಿದ್ದಾರೆಂಬುದು ಸುತ್ತುತ್ತಿರುವ ಸುದ್ದಿ.

✶ ✶ ✶

ಒಂದು ಕಾಲದಲ್ಲಿ, ಅಂದರೆ ೧೯೫೦ರ ದಶಕದಲ್ಲಿ ಹಿಂದೂಸ್ಥಾನ್ ಮೆಷೀನ್ ಟೂಲ್ಸ್ (ಎಚ್.ಎಂ.ಟಿ.) ಸಾರ್ವಜನಿಕ ಕ್ಷೇತ್ರದ ಪ್ರತಿಷ್ಠಿತ ಉದ್ಯಮಗಳಲ್ಲೊಂದು. ಬೆಂಗಳೂರಿನಲ್ಲಿ ಸ್ಥಾಪನೆಗೊಂಡ ಈ ಕಾರ್ಖಾನೆ ಯಂತ್ರಗಳನ್ನು ತಯಾರಿಸಬಲ್ಲ ಯಂತ್ರಗಳು. 'ಮದರ್ ಮೆಷೀನ್ಸ್ ದಟ್ ಬಿಲ್ಡ್ಸ್ ಅದರ್ ಮೆಷೀನ್ಸ್' ಎನ್ನುವುದು ಅದರ ಘೋಷವಾಕ್ಯವಾಗಿತ್ತು. ಸ್ಥಾಪನೆಯಾದ ಕೆಲವರ್ಷಗಳ ನಂತರ ಅದು ಕೈಗಡಿಯಾರಗಳ ತಯಾರಿಕೆಯನ್ನೂ ಕೈಗೆತ್ತಿಕೊಂಡಿತು. ಎಚ್.ಎಂ.ಟಿ. ಕೈಗಡಿಯಾರ ಕಟ್ಟಿಕೊಳ್ಳುವುದು ಆಗ ಪ್ರೆಸ್ಟೀಜ್ ಪ್ರಶ್ನೆಯಾಗಿತ್ತು. ಈಗ ಈ ಸಾರ್ವಜನಿಕ ವಲಯದ ಉದ್ಯಮ ಸಾವಿನ ಅಂಚಿನಲ್ಲಿದೆ. ಮೆಷೀನ್ ಟೂಲ್ಸ್ ವಿಭಾಗ ಎಂದೋ ಕಣ್ಮುಚ್ಚಿತು. ಈಗ ಗಡಿಯಾರ ತಯಾರಿಕೆ ಕೂಡ ನಿಲ್ಲುತ್ತದೆ. ಕೆಲಸಗಾರರಿಗೆ ಸಂಬಳ ಕೊಡಲೂ ಹಣವಿಲ್ಲದ ಈ ಉದ್ಯಮ ರಿಯಲ್ ಎಸ್ಟೇಟ್ ದಂಧೆಗಿಳಿದು ಪಥ ಸಾಗಿಸುತ್ತಿದೆ. ಎಂಥ ದಾರುಣ ಸ್ಥಿತಿ ಬಂತು! ಇನ್ನು ಮುಂದಿನ ದಿನಗಳಲ್ಲಿ ಎಲ್ಲ ಸಾರ್ವಜನಿಕ ಒಡೆತನದ ಉದ್ಯಮಗಳೂ ಇದೇ ಗತಿ ಕಾಣುವುದೇನೊ !

✶ ✶ ✶

ಎಪ್ಪತ್ತೈದು ವರ್ಷಗಳ ಹಿಂದೆ ಎರಡನೇ ಮಹಾಯುದ್ಧವನ್ನೂ ಪ್ರಾರಂಭಿಸಿ ಇಡೀ ಜಗತ್ತನ್ನು ಮಾರಣಹೋಮದಲ್ಲಿ ಮುಳುಗಿಸಿದ ಅಡಾಲ್ಫ್ ಹಿಟ್ಲರ್ ಯಾರಿಗೆ ತಾನೆ ಗೊತ್ತಿಲ್ಲ. ಸರ್ವಾಧಿಕಾರ, ಕ್ರೌರ್ಯ, ದೌರ್ಜನ್ಯಗಳಿಗೆ ಹೆಸರಾದವರನ್ನು ಹಿಟ್ಲರ್ ಎಂದು ಕರೆಯುವ ವಾಡಿಕೆ ಈಗಲೂ ಇದೆ. ಪ್ರಪಂಚವನ್ನೇ ನಡುಗಿಸಿದ ಹಿಟ್ಲರ್ ಜನಿಸಿ ನೂರ ಇಪ್ಪತ್ತೈದು ವರ್ಷ ಆಯಿತು. ಈತ ಜರ್ಮನಿಯ ಛಾನ್ಸಲರ್ (ಪ್ರಧಾನಿ) ಆಗಿ ಅಧಿಕಾರ ಗ್ರಹಣ ಮಾಡಿದ್ದು ಒಂದು ರೋಚಕ ಕಥೆ. ಜರ್ಮನ್ ಸಾಮ್ರಾಜ್ಯದ ಭಾಗವಾಗಿದ್ದ ಆಸ್ಟ್ರಿಯದ ಗಡಿನಾಡಿನ ಪಟ್ಟಣವೊಂದರಲ್ಲಿ ಹುಟ್ಟಿದ ಹಿಟ್ಲರ್ ಅಂಥ ಅನುಕೂಲಸ್ಥ ಕುಟುಂಬದಿಂದ ಬಂದವನೇನಲ್ಲ. ಅವನ ತಂದೆ ಒಬ್ಬ ಕಿರಿಯ ಸುಂಕದ ಅಧಿಕಾರಿಯಾಗಿದ್ದ. ಅಷ್ಟೇನೂ ಒಳ್ಳೆಯ ವಿದ್ಯಾರ್ಥಿಯಲ್ಲದ ಹಿಟ್ಲರ್ ಜರ್ಮನಿ, ಜರ್ಮನರ ಬಗ್ಗೆ ಅತೀವವಾದ ಅಂಧಾಭಿಮಾನ ಬೆಳೆಸಿಕೊಂಡಿದ್ದ. ಜರ್ಮನರು ಎಲ್ಲರಿಗಿಂತಲೂ ಸರ್ವಶ್ರೇಷ್ಠರು ಎಂದು ದೃಢವಾಗಿ ನಂಬಿದ್ದ. ಜರ್ಮನ್ ಸೇನೆಯಲ್ಲಿ ಕಾರ್ಪೊರಲ್ ಆಗಿ ಜೀವನ ಪ್ರಾರಂಭಿಸಿದ ಈತ ಮೊದಲನೇ ಮಹಾಯುದ್ಧದಲ್ಲಿ ಜರ್ಮನಿಯ ಸೋಲಿನಿಂದ ಪರಿತಪಿಸಿದ. ಒಳ್ಳೆಯ ವಾಕ್ಪಟುತ್ವ ಹೊಂದಿದ್ದ ಈತ ಕೆಲ ಸೈನಿಕರನ್ನು ಕೂಡಿಸಿ ಪುಟ್ಟ ರಾಜಕೀಯ ಪಕ್ಷವನ್ನು ಪ್ರಾರಂಭಿಸಿದ. ಇದೇ ಮುಂದೆ ಜರ್ಮನ್ ನ್ಯಾಷನಲ್ ಸೋಷಲಿಸ್ಟ್ ಪಾರ್ಟಿಯಾಗಿ, ನಾಜ಼ಿ ಪಾರ್ಟಿ ಆಗಿ ಬೆಳೆಯಿತು. ಹಿಟ್ಲರ್‌ನನ್ನು ೧೯೨೯ರವರೆಗೆ ಮಹಾನ್ ರಾಜಕಾರಣಿ ಎಂದು ಯಾರೂ ಪರಿಗಣಿಸಿರಲಿಲ್ಲ. ನಾಜ಼ಿಗಳು ೧೯೩೦ರಲ್ಲಿ ಜರ್ಮನಿಯ ಚುನಾವಣೆಗಳಲ್ಲಿ ಪ್ರಚಂಡ ಜಯಗಳಿಸಿ ಅಧಿಕಾರಕ್ಕೇರಿದರು. ಜನರನ್ನು ಮೋಡಿಯಾಗಿಸುವ, ಹುರಿದುಂಬಿಸುವ ಅದ್ಭುತ ಭಾಷಣಕಾರನಾಗಿದ್ದ ಹಿಟ್ಲರ್ ಮೂರೇ ವರ್ಷಗಳಲ್ಲಿ ಪಕ್ಷದ ನೇತಾರನಾಗಿ ಬೆಳೆದು ಅಧಿಕಾರ ಗ್ರಹಣ ಮಾಡಿದ. ಅಧಿಕಾರ ವಹಿಸಿಕೊಂಡನಂತರ ಕೆಲವೇ ತಿಂಗಳುಗಳಲ್ಲಿ ಪಕ್ಷ ಹಾಗೂ ಆಡಳಿತದ ಮೇಲೆ ಭದ್ರವಾದ ಹಿಡಿತ ಸಾಧಿಸಿದ. ಜರ್ಮನರ ಶ್ರೇಷ್ಠತೆಯನ್ನು ಪ್ರತಿಷ್ಠೆಯನ್ನಾಗಿಸಿದ ಅವನು ಬಹುಬೇಗ ಸರ್ವಾಧಿಕಾರಿಯಾದ. ಎರಡನೇ ಮಹಾಯುದ್ಧ ಕಾಲದಲ್ಲಿ ಹಿಟ್ಲರ್ ನಡೆಸಿದ ದೌರ್ಜನ್ಯ, ಕಗ್ಗೊಲೆಗಳು ಈಗಲೂ ಮೈ ನಡುಗಿಸುತ್ತವೆ. ಅದರ ವಿವರಣೆ ಇಲ್ಲಿ ಅನಗತ್ಯ. ಅಧಿಕಾರಕ್ಕೇರಿದ ಮೇಲೆ ಅಲ್ಪಸಂಖ್ಯಾತರಾಗಿದ್ದ ಯೆಹೂದ್ಯರ ಮೇಲೆ ಆತ ಎಸಗಿದ ಕ್ರೌರ್ಯಕ್ಕೆ ಮಿತಿಯೇ ಇರಲಿಲ್ಲ, ನರಹಂತಕ ಹಿಟ್ಲರ್‌ನ ನಂತರ ಎಷ್ಟೋ ಸರ್ವಾಧಿಕಾರಿಗಳು ಪ್ರಪಂಚದಲ್ಲಿ ಬಂದುಹೋಗಿದ್ದಾರೆ. ಅಧಿಕಾರ ಕೇಂದ್ರೀಕರಣ ಅಧಿಕವಾದಾಗ, ಕುರುಡು ದೇಶಾಭಿಮಾನ ಪ್ರಚೋದನೆಯಾದಾಗ ಅನಾಹುತ ತಪ್ಪಿದ್ದಲ್ಲ ಎನ್ನುವುದಕ್ಕೆ ಹಿಟ್ಲರ್ ಉದಾಹರಣೆ. ನಮ್ಮ ದೇಶದ ಅಧಿಕಾರದ ಚುಕ್ಕಾಣಿ ಹಿಡಿದಿರುವ 'ನಮೋ' ಹಾಗಾಗದಿರಲಿ.

✶ ✶ ✶

ಕಾಂಗ್ರೆಸ್ಸಿನ ಸೋಲಿಗೆ ಕಾರಣ ಕಾಂಗ್ರೆಸ್ಸಿಗರೇ. ಒಳಜಗಳ, ಗುಂಪುಗಾರಿಕೆ, ಅಧಿಕಾರ ಲಾಲಸೆ, ಸಂಚುಗಾರಿಕೆ ಎಲ್ಲ ಆ ಪಕ್ಷದಲ್ಲಿ ಬೇರೂರಿಬಿಟ್ಟಿವೆ. ಇದು ಇವತ್ತು ಹಿಡಿದಿರುವ ರೋಗ ಅಲ್ಲ. ಆನುವಂಶಿಕವಾಗಿ ಬೆಳೆದು ಅಂಟಿಕೊಂಡಿರುವಂಥದ್ದು. ಅಧಿಕಾರದಲ್ಲಿ ಇರುವವರನ್ನು ನಿಷ್ಕ್ರಿಯಗೊಳಿಸುವ ಶಕ್ತಿ ಇದೆ ಈ ರೋಗಕ್ಕೆ. ಕರ್ನಾಟಕದಲ್ಲಿ ಮತ್ತೆ ಅಧಿಕಾರಾರೂಢವಾಗಿರುವ ಸಿದ್ದರಾಮಯ್ಯ ಸರಕಾರ ಅದಕ್ಕೊಂದು ನಿದರ್ಶನ. ಒಂದೂವರೆ ವರ್ಷ ಆಗುತ್ತ ಬಂದರೂ ಸಿದ್ದು ಸೀಟು ಭದ್ರವಾಗಿಲ್ಲ. ಲೋಕಸಭಾ ಚುನಾವಣೆಗಳಲ್ಲಿ ಬಿದ್ದ ಒದೆ ಒಂದು ಕಡೆಯಾದರೆ ಪರಮೇಶ್ವರ–ಸಿದ್ದರಾಮರ ಜಟಾಪಟಿ ಇನ್ನೊಂದು ಕಡೆ. ಶಾಸನಸಭೆ ಚುನಾವಣೆಯಲ್ಲಿ ಸೋತ ಪರಮೇಶ್ವರಗೆ ಉಪ ಮಂತ್ರಿಯಾಗುವ ಕನಸು ಉತ್ತರೀಯದಲ್ಲಿ ಕೆಂಡ ಕಟ್ಟಿಕೊಳ್ಳಲು ಮುಖ್ಯಮಂತ್ರಿಗೆ ಮುಜುಗರ. ಹಾಗಾಗಿ ಸಂಪುಟ ವಿಸ್ತರಣೆಯೂ ಇಲ್ಲದೆ, ಪುನಾರಚನೆಯೂ ಇಲ್ಲದೆ ಸಚಿವಾಕಾಂಕ್ಷಿಗಳ ಸ್ಥಿತಿ ಅಂಬೋ ಆಗಿಬಿಟ್ಟಿದೆ. ಶಾಸಕರು ಅವರ ಬೆಂಬಲಿಗರು ಕಾದು ಕಾದು ಬೆಂಡಾಗಿ ಹೋಗಿದ್ದಾರೆ. ಕೆಲ ದಿನಗಳ ಹಿಂದೆ ಶಾಸಕರ ದೊಡ್ಡ ದಂಡೇ ದೆಹಲಿಯಲ್ಲಿರುವ ಕರ್ನಾಟಕ ಭವನದಲ್ಲಿ ಬೀಡುಬಿಟ್ಟಿತ್ತು. ಮುಖ್ಯಮಂತ್ರಿಗಳು, ಪ್ರದೇಶ ಕಾಂಗ್ರೆಸ್ ಅಧ್ಯಕ್ಷರೂ ಸೋತು ಸುಣ್ಣವಾಗಿರುವ ಹೈಕಮಾಂಡ್ ಜೊತೆ ಸಲ್ಲಾಪ ನಡೆಸಿ ಬರಿಗೈಯ್ಯಲ್ಲಿ ವಾಪಸ್ಸಾಗುವುದೂ ಮಾಧ್ಯಮಗಳವರಿಗೆ ಬಿಸಿ ಸುದ್ದಿ. ಇದೇ ದೊಡ್ಡ ತಲೆನೋವಾಗಿರುವಾಗ ಆಡಳಿತದ ಕಡೆಗೆ ಸಚಿವರು ಗಮನ ನೀಡುವುದಾದರೂ ಹೇಗೆ. ಅಯ್ಯೋ ಪಾಪ ಎನಿಸುತ್ತದೆ ಅವರನ್ನು ನೋಡಿದರೆ. ರಾಜ್ಯದಲ್ಲಿ ಹಲವೆಡೆ ಮಳೆ ಸುರಿದು, ಬೆಳೆ, ಆಸ್ತಿಪಾಸ್ತಿಗಳಿಗೆ ಹಾನಿಯಾಗಿರುವುದರ ಕಡೆಗೆ ಗಮನ ಕೊಡುವವರು ಯಾರು. ಎಲ್ಲ ಅಧಿಕಾರಿಗಳ ದರ್ಬಾರು. ಬಡರೈತರ ಸ್ಥಿತಿ ಕಂಗಾಲಾಗಿರುವಾಗ, ಬಡಜನರ ಸ್ಥಿತಿ ಹದಗೆಟ್ಟಿರುವಾಗ ಅವರು ಕಾಂಗ್ರೆಸ್ಸಿಗೆ ಬೆಂಬಲಿಸುವುದಾದರೂ ಹೇಗೆ ಸಾಧ್ಯ.

ಸಂಪುಟದ ವಿಚಾರ ಒಂದು ಬಗೆಯಾದರೆ ನಿಗಮ ಮಂಡಳಿಗಳ ನೇಮಕಾತಿ ಬವಣೆ ಇನ್ನೊಂದು ಬಗೆ. ಅದು ಹೇಗೋ ಏನೋ ಅಕಾಡೆಮಿಗಳಿಗೆ ನೇಮಕವನ್ನು ತಡವಾಗಿಯಾದರೂ ಮುಖ್ಯಮಂತ್ರಿಗಳು ಮಾಡಿ ಮುಗಿಸಿದರು. ಕೊಸರು ಬಾಕಿ ಎನ್ನುವಂತೆ ಸಿನಿಮಾ ಅಕಾಡೆಮಿಯ ಅಧ್ಯಕ್ಷರ ಸ್ಥಾನ ಮಾತ್ರ ಇನ್ನೂ ಖಾಲಿ. ನಿಗಮ ಮಂಡಲಿಗಳ ಅಧ್ಯಕ್ಷರ ನೇಮಕ ಪಕ್ಷದ ನಿಷ್ಠಾವಂತರು ಎನಿಸಿಕೊಂಡಿರುವ ಕಾರ್ಯಕರ್ತರಿಗೆ ನೀಡುವ ಬೋನಸ್. ಇದಕ್ಕೆ ಕಾಂಗ್ರೆಸ್ ಯಾ ಅಧಿಕಾರಕ್ಕೆ ಬರುವ ಪಕ್ಷದಲ್ಲಿ ಎಲ್ಲಿಲ್ಲದ ಪೈಪೋಟಿ, ಕಿತ್ತಾಟ. ತಮ್ಮ ಅಧಿಕಾರಾವಧಿಯಲ್ಲಿ ಸಾಧ್ಯವಿದ್ದಷ್ಟು ಕಮಾಯಿಸಬಹುದಾದ ಈ ಹುದ್ದೆ ಮುಂದೆ ಎಮ್ಮೆಲ್ಯೆಯೋ ಕಾರ್ಪೊರೇಟರೋ ಆಗಲು ಮೆಟ್ಟಿಲು. ಅದಕ್ಕಾಗಿ ಕಾಯುತ್ತಿರುವವರು ಬಹಳ ಮಂದಿ. ಸಿದ್ದರಾಮಯ್ಯನವರಿಗೆ ಇದೂ ಕಗ್ಗಂಟಾಗಿ ಕುಳಿತಿದೆ. ಇದು ಯಾವಾಗ ಬಗೆಹರಿಯುವುದೋ ಆ ಪರಮೇಶ್ವರನೇ ಬಲ್ಲ.

✶ ✶ ✶

ಕೇಂದ್ರದಲ್ಲಿ ಮೋದಿ ಮೋಡಿ ಪ್ರಾರಂಭವಾಗಿ ನೂರು ದಿನಗಳ ಮೇಲಾಯಿತು. ಸರಕಾರದ ಸಾಧನೆಯನ್ನು ಅಳತೆ ಮಾಡಲು ಈ ಕಾಲಾವಧಿ ಏನೇನೂ ಸಾಲದು ಎನ್ನುವುದೇನೋ ನಿಜ. ಆದರೆ ಸರಕಾರ ಯಾವ ದಿಶೆಯಲ್ಲಿ ಅಡಿಯಿರಿಸುತ್ತಿದೆ ಎನ್ನುವುದನ್ನು ಸ್ವಲ್ಪವಾದರೂ ಅಂದಾಜು ಮಾಡಬಹುದು. ಅಧಿಕಾರ ವಹಿಸಿಕೊಂಡಮೇಲೆ ಪ್ರಧಾನಿ ನರೇಂದ್ರ ಮೋದಿ ಪಕ್ಷದ ಮೇಲೆ ಹಿಡಿತ ಸಾಧಿಸಿದ್ದಾರೆ. ಭಾಜಪದ ಹಿರಿಯ ನಾಯಕರನ್ನೆಲ್ಲ ಮೂಲೆಗುಂಪಾಗಿಸಿ ತಮ್ಮ ನಿಷ್ಠಾವಂತ ಭಂಟ ಅಮಿತ್ ಷಾನನ್ನು ಅಧ್ಯಕ್ಷ ಪಟ್ಟಕ್ಕೆ ತಂದಿದ್ದಾರೆ. ಈಗ ಭಾಜಪದಲ್ಲೆಲ್ಲ ಆರೆಸ್ಸೆಸ್‌ದೇ ಪಾರುಪತ್ಯ. ನಿಧಾನವಾಗಿ ನಮೋ ಆಡಳಿತದ ಮೇಲೆ ತಮ್ಮ ನಿಯಂತ್ರಣ ಸಾಧಿಸುತ್ತಿದ್ದಾರೆ. ಸಂಪುಟದ ಸಚಿವರಿಗೆ, ಸಚಿವಾಲಯಗಳಿಗೆ ಪೂರ್ಣ ಸ್ವಾತಂತ್ರ್ಯ ಇದೆಯೆಂದು ಪ್ರಚಾರ ನಡೆಸಿದರೂ ಪ್ರಧಾನ ಮಂತ್ರಿಗಳ ಮಂತ್ರಾಲಯದ ಪರವಾನಗಿ ಇಲ್ಲದೆ ಮುಂದೆ ಸಾಗುವಂತಿಲ್ಲ. ಸ್ವಾತಂತ್ರ್ಯ ದಿನದಂದು ಭಾಷಣ ಮಾಡಿದ್ದು ಸಿದ್ಧಪಡಿಸಿದ್ದಲ್ಲ. ತುಂಬಾ ಕ್ಯಾಷುಅಲ್ ಆಗಿ ಅವರು ಯೋಜನಾ ಆಯೋಗವನ್ನು ರದ್ದುಗೊಳಿಸುವ ಪ್ರಸ್ತಾಪ ಮಾಡಿದರು. ಅರವತ್ತು ವರ್ಷಗಳಿಗೂ ಹೆಚ್ಚು ಕಾಲದಿಂದ ಅಸ್ತಿತ್ವದಲ್ಲಿರುವ ಯೋಜನಾ ಆಯೋಗದ ಸ್ಥಾನದಲ್ಲಿ ಬೇರೇನು ಎಂಬುದು ಇನ್ನೂ ಸ್ಪಷ್ಟವಾಗಿಲ್ಲ. ಯೋಜನಾ ಆಯೋಗದ ರದ್ದತಿ ಈಗ ಚರ್ಚೆಯಲ್ಲಿದೆ. ಸಂಪುಟದಲ್ಲಿ ಯಾರ ಗಮನಕ್ಕೂ ತರದೆ ಮುಖ್ಯವಾದ ತೀರ್ಮಾನ ಏಕಾಏಕಿ ತೆಗೆದುಕೊಳ್ಳುವುದು ಪ್ರಧಾನಿಯವರ

ವೈಖರಿಯೇನೋ! ಈಗಾಗಲೇ ಪ್ರಧಾನಿ ಸಾಕಷ್ಟು ವಿದೇಶೀ ಪ್ರವಾಸವನ್ನು ಏಕಾಂಗಿಯಾಗೇ ಕೈಗೊಂಡಿದ್ದಾರೆ. ಅಬ್ಬರದ ಪ್ರಚಾರವಿಲ್ಲದೆ ತಮ್ಮ ಅಜೆಂಡಾವನ್ನು ಕಾರ್ಯರೂಪಕ್ಕೆ ತರುತ್ತಿದ್ದಾರೆ. ಅದರಲ್ಲಿ ಹಿಂದಿ ಹೇರಿಕೆಯೂ ಒಂದು. ಶಿಕ್ಷಕರ ದಿನಾಚರಣೆಯ ವೈಖರಿಯನ್ನೇ ಬದಲಿಸಿದ್ದು ಗಮನಿಸಬೇಕಾದ ಸಂಗತಿ. ರಾಧಾಕೃಷ್ಣನ್‌ರ ಹೆಸರಿನಲ್ಲಿ ಆಚರಿಸುವ ಈ ದಿನಾಚರಣೆಯಲ್ಲಿ ಅವರ ಹೆಸರೇ ಇಲ್ಲ. ಎಲ್ಲ ನಮೋಮಯ. ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೆ ವಿಧಿಸಿದ ಶಿಕ್ಷೆಯೋ ಎನ್ನುವಂತೆ ಕಡ್ಡಾಯವಾಗಿ ಎಲ್ಲ ಶಿಕ್ಷಣ ಸಂಸ್ಥೆಗಳಲ್ಲೂ ಮೋದಿ ಭಾಷಣ ಆಲಿಸಲು ವ್ಯವಸ್ಥೆ ಕಲ್ಪಿಸಲಾಯಿತು. ಸರಕಾರಿ ಒಡೆತನದ ದೂರದರ್ಶನ ವಲ್ಲದೆ ಎಲ್ಲ ಟಿ.ವಿ. ಚಾನೆಲ್‌ಗಳೂ ಪ್ರಧಾನಿ ಹಿಂದಿ ಸಲ್ಲಾಪ ಪ್ರಸಾರ ಮಾಡಿದುವು. ದಕ್ಷಿಣ ಭಾರತದ ವಿದ್ಯಾರ್ಥಿಗಳಿಗೆ ಮಾತ್ರ ಅವರ ಭಾಷಣದ ತಲೆಬುಡ ಅರ್ಥವಾಗಲಿಲ್ಲ. ನಡೆದದ್ದು ಶಿಕ್ಷಕ ದಿನಾಚರಣೆಯಲ್ಲ ಮೋದಿ ಮೇಷ್ಟ್ರ ಪ್ರತಿಷ್ಠೆ. ಇನ್ನು ಶಿಕ್ಷಣ ಕ್ಷೇತ್ರದಲ್ಲಿ ಏನೇನಾಗುವುದೋ ನೋಡಬೇಕು.

✶ ✶ ✶

ನಮ್ಮ 'ಪ್ರಧಾನ ಸೇವಕ' ಮೋದಿಯವರು ಎಷ್ಟೊಂದು ಸೇವೆ ನೀಡಲು ತವಕಿಸುತ್ತಾರೆಂದರೆ ಬೇರೆ ಯಾವ ಸಚಿವ ಸಂಪುಟದ ಸದಸ್ಯರೂ ಸೇವೆ ಸಲ್ಲಿಸುವ ಅಗತ್ಯವಿಲ್ಲವೆಂದು ತೀರ್ಮಾನಿಸಿದ್ದಾರೆ. ಯಾಕಾದರೂ ತಾನು ವಿದೇಶಾಂಗ ಸಚಿವೆಯಾದೆನೋ ಎಂದು ಪರಿತಪಿಸುತ್ತಿರುವ ಸುಷ್ಮಾ ಸ್ವರಾಜ್ ಅವರು ನಿರುದ್ಯೋಗದಿಂದ ಬಳಲಿದ್ದಾರೆ. ಮೋದಿಯವರು ವಿದೇಶಗಳಿಗೆ ಹೋಗುವಾಗ ಮತ್ತು ವಿದೇಶದ ಗಣ್ಯರು ನಮ್ಮ ದೇಶಕ್ಕೆ ಬಂದಾಗ ಸುಷ್ಮಾ ತಮ್ಮ ಸಂಪುಟದಲ್ಲಿ ಇದ್ದಾರೆಂದು ನೆನಪಿಸಿಕೊಳ್ಳುವುದಿಲ್ಲ. ನಾವೆಲ್ಲಾ ಪತ್ರಿಕೆ ಗಳಲ್ಲಿ ಬರುವ ಸಮಾಚಾರ ಓದಿ ತಿಳಿಯುವಂತೆ ಸುಷ್ಮಾರವರು ತಿಳಿದುಕೊಳ್ಳಬೇಕಾದ ಫಜೀತಿ ಬಂದಿದೆ. ಮೊನ್ನೆ 'ಸೇವಕ ಮಹಾಶಯ' ಜಪಾನಿನಿಂದ ಹಿಂದಿರುಗಿದಾಗ ಈಕೆ ವಿಮಾನ ನಿಲ್ದಾಣದಲ್ಲಿ ಆತನನ್ನು ಸ್ವಾಗತಿಸಿದಾಗ 'ಓಹೋ, ಈಕೆಯೂ ಇದ್ದಾಳೆ' ಎನ್ನುವ ಮುಖಭಾವ ಆತನದಾಗಿತ್ತು. 'ಒಂದು ದೇಶ, ಒಬ್ಬ ನಾಯಕ' ಎಂಬ ಘೋಷಣೆಯಂತೆ ಈತ 'ಏಕೈಕ ನಾಯಕ'. ವಿದೇಶಗಳಿಗೆ ಪ್ರಧಾನಿ ತೆರಳುವಾಗ ಸಂಪ್ರದಾಯಕ್ಕಾದರೂ ವಿದೇಶಾಂಗ ಸಚಿವರನ್ನು ಜೊತೆಯಲ್ಲಿ ಕರೆದೊಯ್ಯಬೇಕು. ಏನೇನು ಚರ್ಚೆಗೆ ಬಂತು, ಏನು ಒಪ್ಪಂದಗಳಾದವು, ಎಂಬುದರ ತಿಳಿವಳಿಕೆ ಯಾದರೂ ವಿದೇಶಾಂಗ ಸಚಿವರಿಗೆ ಬೇಡವೆ? ವ್ಯಕ್ತಿಪೂಜೆಗೆ ತಾನೂ ಅರ್ಹನಾದ್ದರಿಂದ ಅದನ್ನು ತನಗೆ ಎಲ್ಲರೂ ಸಲ್ಲಿಸಬೇಕೆಂಬ ಮೋದಿಯವರ ನಿರೀಕ್ಷೆ ಮತ್ತು ಕಾರ್ಯಶೈಲಿ ಪ್ರಜಾಪ್ರಭುತ್ವದಲ್ಲಿ ಸ್ವೀಕಾರಾರ್ಹ ಅಲ್ಲ. ಅವರ ಪಕ್ಷದಿಂದ ಶ್ರೀಮತಿ ಸುಷ್ಮಾ ಅಂಥವರಿಗೆ ಪರಿಹಾರ ದೊರೆಯದು, ಏಕೆಂದರೆ ಪಕ್ಷದ ಅಧ್ಯಕ್ಷ "ಸೂಪರ್ ಮೋದಿ!" ಚೀನಾ ಅಧ್ಯಕ್ಷರು ಪತ್ನಿ ಸಮೇತ ಬಂದಿದ್ದಾಗ್ಯೂ ಅಹಮದಾಬಾದಿಗೆ ಮೋದಿಯವರು ಸುಷ್ಮಾ ಅವರನ್ನು ಕರೆದೊಯ್ಯಲಿಲ್ಲ. ಇದೇನು ಪಕ್ಷದೊಳಗಿನ ವಿಭಾಗಗಳ ಪರಿಣಾಮವೋ ಅಥವಾ 'ನೀನು ಮಂತ್ರಿಯಾಗಿರುವುದು ಬೇಡ' ಎಂದು ಸುಷ್ಮಾ ಅವರಿಗೆ ಸಂದೇಶವೋ ತಿಳಿಯದು. ಮುಖ್ಯವಾಗಿ, ಮೋದಿಯವರು ಸರ್ವಾಧಿಕಾರಿಯ ಮಾದರಿಯಲ್ಲಿ ಏಕವ್ಯಕ್ತಿ ಪ್ರದರ್ಶನ ನಡೆಸುತ್ತಿದ್ದಾರೆ. ರಾಮ ಮಾಧವ ಎಂಬ ವ್ಯಕ್ತಿ ಸಂವಿಧಾನೇತರ ಅಧಿಕಾರಕೇಂದ್ರವಾಗಿ ಕಾರ್ಯಪ್ರವೃತ್ತರಾಗಿದ್ದಾರೆ ಎಂಬುದು ಕೇವಲ ಗಾಳಿ ಮಾತಲ್ಲ. ಸಂಜಯ ಗಾಂಧಿಯ ಶೈಲಿಯೇ ಬೇರೆ, ರಾಮ ಮಾಧವರ ಶೈಲಿಯೇ ಬೇರೆ. ಆದರೆ ಎರಡೂ ಒಂದೇ ತಳಿ.

ಮಾನ್ಯ ಶ್ರೀ. ಎಚ್. ಎಸ್. ದೊರೆಸ್ವಾಮಿ ಮತ್ತು ಶ್ರೀ. ಎ. ಟಿ. ರಾಮಸ್ವಾಮಿಯವರ ನೇತೃತ್ವದಲ್ಲಿ ಒಂದು ಪ್ರತಿಭಟನೆ ನಿರಂತರವಾಗಿ ನಡೆಯುತ್ತಿದೆ. ಅದು ಇನ್ನೂ ತೀವ್ರವಾಗಲಿದೆ. ಕಾನೂನು ಸಚಿವ ಶ್ರೀ. ಜಯಚಂದ್ರ ಆಶ್ವಾಸನೆಗಳನ್ನು ಧಾರಾಳವಾಗಿ ನೀಡುತ್ತಿದ್ದಾರೆ, ಆದರೆ ಕರಾಳಹಸ್ತಗಳ ಹಿಡಿತ ದೆಹಲಿಯವರೆಗೂ ವಿಸ್ತರಿಸಿದೆ. ಇಂದಿನ ಸನ್ನಿವೇಶವು ಹೀಗೇ ಮುಂದುವರಿದರೆ ಇನ್ನು ಕೆಲವು ವರ್ಷಗಳ ನಂತರ ಸರ್ಕಾರವು ಒಂದು ಆಸ್ಪತ್ರೆಯನ್ನೋ ಶಾಲೆಯನ್ನೋ ಕಟ್ಟಬೇಕಾದರೆ ಅದರ ಬಳಿ ಭೂಮಿಯೇ ಇರುವುದಿಲ್ಲ. ಇಂದು ಭೂಕಬಳಿಕೆ ಮಾಡಿಕೊಂಡಿರುವವರಿಂದ ಅದನ್ನು ಕೊಳ್ಳಬೇಕಾದೀತು! ಸರ್ಕಾರಿ ಭೂಮಿಯ ಒತ್ತುವರಿ ಹೊಸ ವಿಷಯವಲ್ಲ. ಚಿಕ್ಕಮಗಳೂರು ಮತ್ತು ಕೊಡಗು ಜಿಲ್ಲೆಗಳಲ್ಲಿ ಕಾಫಿ ಬೆಳೆಗಾರರು ಸತತವಾಗಿ ಬೆಲೆಯನ್ನು ಮುಂದುಮುಂದಕ್ಕೆ ಹಾಕಿಕೊಳ್ಳುತ್ತಲೇ ಬಂದಿದ್ದಾರೆ. ಅವರೇ ಸರ್ಕಾರ ನಡೆಸುವ ಶಕ್ತಿಗಳಾಗಿರುವುದರಿಂದ ಅವರಿಗೆ ಪ್ರತಿಬಂಧಕವೇ ಇಲ್ಲ.

ಈಗ ನಮ್ಮ ರಾಜ್ಯದಲ್ಲಿ ನಡೆಯುತ್ತಿರುವುದು ಅಸಾಮಾನ್ಯವಾದ್ದು. ಇಡೀ ಸರ್ಕಾರಿ ಯಂತ್ರದ ನೇರ ಪಾಲ್ಗೊಳ್ಳುವಿಕೆಯಿಂದ ಭೂಗಳ್ಳರು ನಕಲಿ ದಾಖಲೆಗಳನ್ನು ಸೃಷ್ಟಿಸಿಕೊಂಡು ಆಳುವ ವರ್ಗದ ವಿಭಿನ್ನ ಮಾದರಿಯ ಶಕ್ತಿಕೇಂದ್ರವಾಗಿದ್ದಾರೆ. ಅದನ್ನು ಮಾಡಿರುವವರು ಯಾರೋ ನಿರ್ಗತಿಕ ಭೂರಹಿತರಲ್ಲ, ಅವರಿಗೆ ಈ ಕರಾಮತ್ತು ಸಿದ್ಧಿಸಲಾರದು! ಚಿಕ್ಕ-ಪುಟ್ಟ ಭೂಮಿಯನ್ನು ಹೊಂದಿದವರು ಏಕಾಏಕಿ ಉಧ್ವಸ್ಥರಾಗುತ್ತಾರೆ, ನಕಲಿ ದಾಖಲೆಗಳ ಹಾವಳಿ ಅಷ್ಟು ಜಾಸ್ತಿ ಇದೆ. ಮಾನ್ಯ ಎ. ಟಿ. ರಾಮಸ್ವಾಮಿಯವರು ಇದನ್ನು "ಭೂಮಿತಾಯಿಯ ಮೇಲೆ ನಡೆಯುತ್ತಿರುವ ಅತ್ಯಾಚಾರ"ವೆಂದು ನೊಂದು ಕೊಳ್ಳುತ್ತಾರೆ. ವಿಶೇಷವೇನೆಂದರೆ, ಭೂ ಮಾಫಿಯಾದ ಭಾರಿ ಕುಳಗಳು ಎಸಗಿರುವ ದೌರ್ಜನ್ಯಗಳ ಸಂಪೂರ್ಣ ಮಾಹಿತಿ ಸರ್ಕಾರಕ್ಕಿದೆ. ಅಂದರೆ ಈ "ನಕಲಿ ತಯಾರಿ ಪಟಿಂಗರೇ ನಮ್ಮ ಸರ್ಕಾರ ನಡೆಸುವವರು" ಎಂಬ ಅನುಮಾನ ಕಾಡುತ್ತದೆ. ೧೯೫೭ರ ಮುಂಚಿನ ಭೂ ದಾಖಲೆಗಳು ನಂಬಿಕೆಗೆ ಅರ್ಹವಾದುವು, ಏಕೆಂದರೆ ಆಗ 'ಅತ್ಯಾಚಾರ' ಇನ್ನೂ ಉದ್ಯಮವಾಗಿರಲಿಲ್ಲ. ಅವುಗಳನ್ನು ಆಧಾರವಾಗಿಟ್ಟುಕೊಂಡು ಒಂದು ನಿಗದಿತ ಭೂಮಿಯ ಭಾಗದ ಮಾಲೀಕತ್ವವು ಹೇಗೆ ಬದಲಾಗಿದೆಯೆಂದು ನೋಡಿದರೆ ತಾಳಮೇಳವೇ ಇಲ್ಲ. ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಯಲ್ಲಿ ಕಂದಾಯ ಇಲಾಖೆಗೆ ಸೇರಿದ ೮೩೫೫ ಎಕರೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಸೇರಿದ ೨೦,೦೦೦ ಎಕರೆ ಹೀಗೆ ಭೂಗಳ್ಳರ ವಶಕ್ಕೆ ಹೋಗಿವೆ. ಒತ್ತುವರಿಯಿಂದ ಹೋಗುವುದು ಸ್ವಲ್ಪ, ನಕಲಿ ದಾಖಲೆಗಳ ಸೃಷ್ಟಿಯಿಂದ ಹೋಗುವುದು ಹೇರಳ. ಇಡೀ ರಾಜ್ಯದಲ್ಲಿ ಕಬಳಿಕೆಯಾಗಿರುವುದು ಸುಮಾರು ಎರಡು ಲಕ್ಷ ಎಕರೆ, ಅಂದರೆ ಕನಿಷ್ಠ ಪಕ್ಷ ಎರಡು ಲಕ್ಷ ಕೋಟಿ ರೂಪಾಯಿಗಳ ಮಹಾಸ್ವತ್ತು. ನಮ್ಮ ಪ್ರತಿನಿಧಿ ಗಳಿಗೆ ಇದು ನಾಚಿಕೆ ತರಬೇಕು, ಆದರೆ ತರುವುದಿಲ್ಲ. ರಾಜಾರೋಷವಾಗಿ 'ಕಬಳಿಕೆ ಪ್ರಭು' ಎಂಬ ನಾಮಫಲಕ ಧರಿಸಿಕೊಂಡು ವೈಭವದಿಂದ ಅಡ್ಡಾಡುತ್ತಾರೆ. ಪಕ್ಷಭೇದ ಇಲ್ಲದೆ ನಡೆಯುವ ಹೀನ ದಂಧೆ ಇದು. ಸಿದ್ದರಾಮಯ್ಯ ಅವರ ಪಕ್ಷ ಮತ್ತು ಈಶ್ವರಪ್ಪನವರ ಪಕ್ಷ ಕೈಜೋಡಿಸಿ ರುವುದು ಇದೊಂದೇ ದಂಧೆಯಲ್ಲಿರಬೇಕು!

ಈ ರೀತಿಯ ಭೂ ಚೋರರನ್ನು ನಿಯಂತ್ರಿಸಲೆಂದು ನಮ್ಮ ರಾಜ್ಯದಲ್ಲಿ ಒಂದು ಶಾಸನವನ್ನು ಮಾಡಲಾಯಿತು, ೨೦೦೭ರಲ್ಲಿ ಶಾಸನಸಭೆ ಮತ್ತು ವಿಧಾನ ಪರಿಷತ್ತು ಇದನ್ನು ಅಂಗೀಕರಿಸಿದವು, ರಾಜ್ಯಪಾಲರ ಸಹಿಯೂ ಬಿತ್ತು. ಶಾಸನದ ಮೂಲ ಉದ್ದೇಶವೆಂದರೆ ಭೂ ಕಬಳಿಕೆಯ ಮೊಕದ್ದಮೆಗಳನ್ನು ತೀರ್ಮಾನಿಸಲು ವಿಶೇಷ ನ್ಯಾಯಾಲಯಗಳ ಸ್ಥಾಪನೆ. ಆರು ತಿಂಗಳಲ್ಲಿ ತೀರ್ಮಾನ ಹೊರಬರಬೇಕೆಂಬ ಷರತ್ತು ವಿಧಿಸಲಾಗಿದೆ; ಅಂದರೆ ವರ್ಷಾನುಗಟ್ಟಲೆ ಮುಂದೂಡುತ್ತಾ ಹೋಗಲಾಗದು. ನಕಲಿ ದಾಖಲೆಗಳ ಚರಿತ್ರೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕದ್ದ ಮಾಲನ್ನು ಸರ್ಕಾರವು ಹಿಂಪಡೆಯಲು ಸಾಧ್ಯ. ಇದು ನ್ಯಾಯಾಲಯ ಸ್ಥಾಪನೆಯ ಪ್ರಶ್ನೆಯಾದ್ದರಿಂದ ಕೇಂದ್ರ ಸರ್ಕಾರದ ಅನುಮತಿ ಅಗತ್ಯ. ಏಳು ವರ್ಷಗಳಿಂದ ನಮ್ಮ ರಾಜ್ಯದ ಕಡತ ದೆಹಲಿಯಲ್ಲಿ ಎಲ್ಲೋ ಧೂಳಿನಲ್ಲಿ ಬಿದ್ದಿದೆ. ಮನಮೋಹನ ಸಿಂಗ್ ಮತ್ತು ನರೇಂದ್ರ ಮೋದಿಯವರನ್ನು ಮೀರಿಸುವ ಅಧಿಕಾರಶಾಹಿ ಮತ್ತು ಭೂಮಾಫಿಯಾ ಆ ಕಡತಕ್ಕೆ ಗತಿ ಕಾಣಿಸಿಲ್ಲ. ಕೇಂದ್ರ ಸರ್ಕಾರವು ಸುಮ್ಮನೆ 'ಅಸ್ತು' ಎಂದರೆ ಸಾಕು, ರಾಷ್ಟ್ರಾಧ್ಯಕ್ಷರ ಅಂಕಿತ ದೊರೆಯುತ್ತದೆ. ಈ ಭೂಗಳ್ಳರನ್ನು ಬೇಟೆಯಾಡಲು ಈ ನ್ಯಾಯಾಲಯವು ಒಂದು ಸಾಧನ ವಾಗಬಲ್ಲದು, ಯಾವುದೇ ಭೂಮಿಯ ಮಾಲೀಕತ್ವವು ತನ್ನದೆಂದು ಮಾಲೀಕನು ಸಾಬೀತುಗೊಳಿಸಬೇಕಾಗುತ್ತದೆ, ಅದು ಅವನದಲ್ಲವೆಂದು ಯಾರೂ ಸಾಬೀತುಗೊಳಿಸ ಬೇಕಾಗಿಲ್ಲ. ಅಂದರೆ ಸುಳ್ಳು ದಾಖಲೆಗಳು ಹೊರ ಬರುತ್ತವೆ, ಅದೆಷ್ಟು ಅಧಿಕಾರಿಗಳು, ರಾಜಕಾರಣಿಗಳು, ಏಜೆಂಟರು, ಏನೇನು ಕುತಂತ್ರಗಳಿಂದ "ಭೂಮಾತೆಯ ಅತ್ಯಾಚಾರ"ದಲ್ಲಿ ಭಾಗಿಗಳಾಗಿದ್ದಾರೆ ಎಂಬುದು ತಿಳಿಯುತ್ತದೆ. ಈಗಿನ ಕೇಂದ್ರ ಸರ್ಕಾರವು ೨೦೦೭ರ ಕರ್ನಾಟಕ ರಾಜ್ಯದ ಶಾಸನಕ್ಕೆ ಅಂಗೀಕಾರ ಮುದ್ರೆ ಒತ್ತುತ್ತದೆಯೆ? ಇಂದಿನ ಹೋರಾಟದಲ್ಲಿ ಸಹಜ ವಾಗಿಯೇ ಎರಡು "ದೊಡ್ಡ" ಪಕ್ಷಗಳನ್ನುಳಿದು ಇತರ ರಾಜಕೀಯ ಪಕ್ಷಗಳು, ಅನೇಕ ಸಂಘಟನೆಗಳು ಮತ್ತು ಸರ್ಕಾರೇತರ ಸಂಸ್ಥೆಗಳು ಒಟ್ಟಾಗಿ ಭಾಗಿಗಳಾಗಿವೆ. ಇಷ್ಟು ದೊಡ್ಡ ಪ್ರಮಾಣದ ಕಳ್ಳತನ ನಡೆದಾಗಲೂ ನಾವು ಎಚ್ಚರವಾಗದಿದ್ದರೆ ಮುಂದಿನ ಪೀಳಿಗೆಯ ವರಿಗೆ ಒಂದಂಗುಲ ಸರ್ಕಾರಿ ಭೂಮಿ ಎಂಬುದಿರುವುದಿಲ್ಲ!




## ಮುಖ್ಯಮಂತ್ರಿಯವರಿಗೆ ಎಚ್. ಎಸ್. ದೊರೆಸ್ವಾಮಿಯವರ ಪತ್ರ

ಮುಖ್ಯಮಂತ್ರಿ ಶ್ರೀ ಸಿದ್ದರಾಮಯ್ಯನವರೇ

ಎ. ಟಿ. ರಾಮಸ್ವಾಮಿ ಸಮಿತಿಯ ವರದಿ ಗುರುತಿಸಿರುವ ಎಲ್ಲ ಭೂಗಳ್ಳರಿಂದಲೂ ಭೂಮಿ ವಶಪಡಿಸಿಕೊಂಡಿರುವುದಾಗಿ ಅಂಕಿ-ಅಂಶಗಳ ಸಮೇತ ಪತ್ರಿಕೆಗಳ ಮೂಲಕ ಪ್ರಕಟಿಸಿದ್ದೀರಿ. ಬಾಕಿ ಇರುವುದು ೫೦೦೦ ಎಕರೆ ಮಾತ್ರ ಎಂದು ತಿಳಿಸಿದ್ದೀರಿ.

ಎ. ಟಿ. ರಾಮಸ್ವಾಮಿಯವರು ಪ್ರಸ್ತಾಪಿಸಿರುವ ಭೂಗಳ್ಳರ ವಶದಲ್ಲಿರುವ ಎಲ್ಲ ಭೂಮಿಯನ್ನೂ ಹಿಂಪಡೆದಿದ್ದರೆ ಅವರ ಹೆಸರು, ಹಿಂಪಡೆದ ಜಮೀನಿನ ವಿವರ, ಹೀಗೆ ಭೂಹಗರಣ ನಡೆಸಿದವರಿಗೆ ಆಗಿರುವ ಶಿಕ್ಷೆ ಅವರಿಗೆ ನೆರವಾದ ಅಧಿಕಾರಿಗಳು, ಶಾಸಕರು ಮತ್ತು ಇತರರಿಗೆ ಏನು ಶಿಕ್ಷೆ ವಿಧಿಸಲಾಗಿದೆ ಎಂಬುದರ ವಿವರಗಳನ್ನು ಕೂಡಲೆ ಪತ್ರಿಕೆಗಳಿಗೆ ಬಿಡುಗಡೆ ಮಾಡಿ ಎಂದು ಒತ್ತಾಯಿಸುತ್ತೇನೆ.

ಈ ವಿವರಗಳನ್ನು ನೀಡದಿದ್ದರೆ ನೀವು ಈ ಪ್ರಕರಣಗಳನ್ನು ಮುಚ್ಚಿಹಾಕಿ, ಸತ್ಯಕ್ಕೆ ದೂರವಾದ ಹೇಳಿಕೆ ನೀಡುತ್ತಿರುವುದಾಗಿ ಜನ ಸಹಜವಾಗಿ ಭಾವಿಸುತ್ತಾರೆ.

ಉದಾಹರಣೆಗೆ ನಿಮ್ಹಾನ್ಸ್‌ಗೆ ಸೇರಿದ ಜಮೀನಿನಲ್ಲಿ ಬಹುಮಹಡಿ ಕಟ್ಟಡ ಕಟ್ಟಿಕೊಂಡವರಿಗೆ, ಕೆರೆಗಳನ್ನು ಅಡವಿಟ್ಟು ಬ್ಯಾಂಕಿನಿಂದ ಸಾಲಪಡೆದು, ಬ್ಯಾಂಕಿಗೆ ಪಂಗನಾಮ ಹಾಕಿದವರಿಗೆ, ಕೆರೆ ಅಂಗಳವನ್ನೇ ಹರಾಜಿಗೆ ಇಟ್ಟ ಬ್ಯಾಂಕ್ ಮುಖ್ಯಸ್ಥರಿಗೆ, ಭೂಗಳ್ಳರಿಗೆ, ಕೆರೆ ಜಾಗಕ್ಕೆ ಸಾಲ ನೀಡಿದ ಮೂರ್ಖ ಬ್ಯಾಂಕಿಗೆ, ಈ ಪ್ರಕರಣದಲ್ಲಿ ಆ ಭೂಗಳ್ಳರಿಗೆ ನೆರವಾದ ಅಧಿಕಾರಿಗಳಿಗೆ, ಇಂಜಿನಿಯರ್‌ಗಳಿಗೆ ಏನು ಶಿಕ್ಷೆ ವಿಧಿಸಿದ್ದೀರಿ ? ಅವರನ್ನು ಸೆರೆಮನೆಗೆ ಅಟ್ಟಿದ್ದೀರಾ ? ಯಾರೋ ಪುಣ್ಯಾತ್ಮರು ಉಚ್ಚ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ, ಕೆರೆಯ ಜಮೀನನ್ನು ಸಾರ್ವಜನಿಕರಿಗೆ ಉಳಿಸಿದರು. ಆಗಿದ್ದ ಸರ್ಕಾರ ಈ ಸಂದರ್ಭದಲ್ಲಿ ಕೈಕಟ್ಟಿ ಕೂತಿತ್ತು. ಅವರ ಬಗೆಗೆ ಏನು ಕ್ರಮ ಕೈಗೊಂಡಿದ್ದೀರಿ ? ಕೈಗೊಳ್ಳುವವರಿದ್ದೀರಿ ?

ಇಂತಹ ನೂರೆಂಟು ಪ್ರಕರಣಗಳನ್ನು ನಿಮ್ಮ ಗಮನಕ್ಕೆ ತರಬಲ್ಲೆ. ಇವರೆಲ್ಲರಿಗೂ ನೀವು ರಕ್ಷಣೆ ನೀಡಲು ಬಯಸಿದ್ದೀರಾ ? ಜನರನ್ನು ಮರುಳು ಮಾಡುವ ತಂತ್ರ ಬಳಸುವುದು ನಿಮ್ಮ ಘನತೆಗೆ ಧಕ್ಕೆ ತರುವುದಿಲ್ಲವೇ ?

ದಯವಿಟ್ಟು ಸತ್ಯಕ್ಕೆ ದೂರವಾದ ಹೇಳಿಕೆಗಳನ್ನು ನೀಡಿ ಜನರನ್ನು ಮರುಳುಗೊಳಿಸುವ ಬದಲು, ನಿಜ ಸ್ಥಿತಿಯನ್ನು ಜನತೆಗೆ ತಿಳಿಸಿ. ಪಟ್ಟಭದ್ರ ಭೂಗಳ್ಳರನ್ನು ರಕ್ಷಿಸುವ ಬದಲು, ಅವರ ಕೃತ್ಯಗಳನ್ನು ಬಯಲು ಗೊಳಿಸಿರುವ ಎ. ಟಿ. ರಾಮಸ್ವಾಮಿ ವರದಿ, ಬಾಲಸುಬ್ರಹ್ಮಣ್ಯಂ ವರದಿಗಳನ್ನು ವಸ್ತುನಿಷ್ಠವಾಗಿ ನೋಡಿ, ಭೂಮಿಯ ವಿಚಾರದಲ್ಲಿ ನಡೆದಿರುವ ಎಲ್ಲ ಅತ್ಯಾಚಾರಗಳನ್ನು ಗಮನಿಸಿ ಆ ಅತ್ಯಾಚಾರಿಗಳನ್ನು ಶಿಕ್ಷೆಗೆ ಗುರಿಪಡಿಸುವುದಲ್ಲದೆ, ಅವರು ದೋಚಿರುವ ಸರ್ಕಾರಿ ಭೂಮಿಯನ್ನು ಹಿಂಪಡೆದು ಅವರ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಕೈಗೊಳ್ಳಿ.

ಈ ಹಗರಣಗಳ ತಂಟೆಗೇ ಹೋಗದೆ, ಹೂಡಿರುವ ಸತ್ಯಾಗ್ರಹವನ್ನು ಹಿಂಪಡೆಯಲು ಕೇಳಲು ನಿಮ್ಮ ಆತ್ಮವಾದರೂ ಹೇಗೆ ಒಪ್ಪೀತು ?

ಈ ಪತ್ರಕ್ಕೆ ಸಕಾರಾತ್ಮಕ ಉತ್ತರವನ್ನು ಕೂಡಲೇ ದಯಪಾಲಿಸಬೇಕಾಗಿ ಆಗ್ರಹ.

*ಬೆಂಗಳೂರು* **ಎಚ್. ಎಸ್. ದೊರೆಸ್ವಾಮಿ**




ಸೆಪ್ಟೆಂಬರ್ ತಿಂಗಳ ಸಂಚಿಕೆಯಲ್ಲಿ ಪ್ರಕಟವಾಗಿರುವ ಶ್ರೀ ವಿಷ್ಣುನಾಯಕ ಅವರ ಸುದೀರ್ಘ ಪತ್ರದ ಬಗ್ಗೆ ನನ್ನ ಕೆಲವು ಅನಿಸಿಕೆಗಳು:

ಮೊತ್ತ ಮೊದಲನೆಯದಾಗಿ, ಲೇಖಕರ ಕಟ್ಟಕಡೆಯ ವಾಕ್ಯವಾದ "ನಾವು ಶೀಲವಂತ ಅಪ್ಪಟ ಮನುಷ್ಯರಾಗೋಣ." ಅನ್ನುವ ಮಾತಿಗೆ, ಆ ಮಾತಿನ ಹಿಂದಿನ ಸುಶೀಲ ಭಾವಕ್ಕೆ ಹೃದಯಪೂರ್ವಕ ನಮಸ್ಕಾರ.

ಇನ್ನು ಮಹಿಳೆಯ ಬಗ್ಗೆ ಚಿಂತನೆಗಳನ್ನು ಈ ಲೇಖಕರು ಬಹಳ ಕಾಳಜಿ-ಗೌರವಗಳಿಂದ ನಿರ್ವಹಿಸಿದ್ದಾರೆ. ಆಕೆಯನ್ನು ರಕ್ಷಿಸಬೇಕಾದಲ್ಲಿ ಪುರುಷವರ್ಗ ಬೆಳೆಸಿಕೊಳ್ಳಲೇಬೇಕಾದಂಥ ಸದ್ಭಾವಗಳನ್ನು ವಿವರಿಸಿದ್ದಾರೆ. ಒಟ್ಟಾರೆ ಈ ಲೇಖನ ಒಂದು ಅತ್ಯುತ್ತಮ ಮೌಲ್ಯ ವಿಶ್ಲೇಷಣೆ.

ಹೆಣ್ಣು ಅನುಭವಿಸುತ್ತಲೇ ಬಂದಿರುವ ಕ್ರೌರ್ಯ, ಹಿಂಸೆ, ಅತ್ಯಾಚಾರಗಳನ್ನು ಕೊನೆಗೊಳಿಸಲು ಒಂದು ಸುಲಭ ಮಾರ್ಗವಿದೆ. ಅದೆಂದರೆ... "ನಾವೆಲ್ಲ ಮಹಿಳೆಯನ್ನು ಗೌರವಿಸೋಣ." ಆಲೋಚನೆ ಮಾಡಿನೋಡಿ. ಹೆಣ್ಣನ್ನು, ಹೆಣ್ತನವನ್ನು ಗೌರವಿಸಿಬಿಟ್ಟರೆ, ಭ್ರೂಣಹತ್ಯೆ ಸಂಭವಿಸುವುದಿಲ್ಲ; ವರದಕ್ಷಿಣೆ ಸಾವು ನಡೆಯುವುದಿಲ್ಲ; ಅತ್ಯಾಚಾರ, ಸಹಗಮನಗಳೂ ಹೆಸರಿಗೇ ಇರುವುದಿಲ್ಲ. ಎಷ್ಟು ಸುಲಭ ಅಲ್ಲವೇ ?

ಅಂದ ಹಾಗೆ ಈ ಸರಳ ಸೂತ್ರವನ್ನು ಪಾಲಿಸಲು ಎಷ್ಟು ಜನ ಪುರುಷರು ತಯಾರಾಗಿದ್ದೀರಿ ? ...ಕೈಯೆತ್ತಿ ನೋಡೋಣ ?

*ಬೆಂಗಳೂರು* ***ಭಾರತೀ ಕಾಸರಗೋಡು***

ಆಗಸ್ಟ್ ೨೦೧೪ರ 'ಹೊಸತು'ವಿನಲ್ಲಿ ತಮ್ಮ ಸಂಪಾದಕೀಯದಲ್ಲಿ ಮೂಡಿಬಂದಿರುವ ಕನ್ನಡ ಮಾಧ್ಯಮ ಕ್ಷೇತ್ರದಲ್ಲಿ ಜನಪರವಾದ ನಿಲುವಿನೊಂದಿಗೆ ಹದಿನೈದು ವರ್ಷ ಪೂರೈಸಿ ಬದ್ಧತೆಯಿಂದ ಹದಿನಾರನೇ ವರ್ಷಕ್ಕೆ 'ಹೊಸತು' ಮಾಸಪತ್ರಿಕೆ ಕಾಲಿಡುತ್ತಿರುವುದು ಕನ್ನಡ ಕಣ್ಮಣಿಗಳಿಗೆ, ಸಾಹಿತ್ಯಾಸಕ್ತರಿಗೆ, ಓದುಗ ಅಭಿಮಾನಿಗಳಿಗೆ, ರಾಜ್ಯ, ರಾಷ್ಟ್ರೀಯ ರಾಜಕೀಯ ವಿದ್ಯಮಾನಗಳನ್ನು ಎಚ್ಚರಿಕೆಯ ಗಂಟೆಯನ್ನಾಗಿ ಬಾರಿಸುತ್ತಾ, ಬಿಂಬಿಸುತ್ತಾ, ತಳಪಾಯದಿಂದ ಎತ್ತರೆತ್ತರಕ್ಕೆ ಬೆಳೆದಿರುವ, ಬೆಳೆಯುತ್ತಿರುವ ಕಾರ್ಪೊರೇಟ್ ವಲಯದವರು ಮಾಧ್ಯಮವನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಂಡು ತಮ್ಮ ಇತರೆ ವ್ಯಾಪಾರ ಮತ್ತು ತಮ್ಮ ಪರವಾದ ರಾಜಕೀಯಕ್ಕೆ ಪೂರಕವಾಗಿ ಬಳಸಿಕೊಳ್ಳುತ್ತಿರುವುದನ್ನು ಸರಿಯಾಗಿಯೇ ಗುರುತಿಸಿದೆ. ಇದು ಅತ್ಯಂತ ಅಪಾಯಕಾರಿ ಹಾಗೂ ಆತಂಕಕಾರಿ ಸಂಗತಿ. ಇವುಗಳನ್ನು, ಅಂದರೆ ಕಾರ್ಪೊರೇಟ್ ಕಂಪನಿಗಳು ಮಾಧ್ಯಮ ಕ್ಷೇತ್ರದ ಮೇಲೆ ಬಹುತೇಕವಾಗಿ ನಿಯಂತ್ರಣ ಸಾಧಿಸಿ ಮಾಧ್ಯಮಗಳನ್ನು ತಮ್ಮ ಪರವಾದ ರಾಜಕೀಯಕ್ಕೆ ಪೂರಕವಾಗಿ, ವ್ಯಾಪಾರೀಕರಣಗೊಳಿಸಿಕೊಳ್ಳುವುದಲ್ಲದೆ ಉದ್ಯಮ ಪ್ರೇರಿತ ಮಾಧ್ಯಮಗಳೂ ಇಂದು ಸೃಷ್ಟಿಸುತ್ತಿರುವ ವಾತಾವರಣವನ್ನು ಗಮನಿಸಿದಾಗ, ಜನತೆ, ಜನತೆಯ ಬದುಕು, ಮಾಧ್ಯಮಗಳಿಗೆ ಕೇಂದ್ರವಾಗದೆ ತಮ್ಮದೇ ವ್ಯಾಪಾರೀಕರಣಕ್ಕೆ ಮತ್ತು ಮಾರುಕಟ್ಟೆ ಸಂಸ್ಕೃತಿಗೆ ಪೂರಕವಾಗಿ, ಪ್ರಚೋದಕಗಳಾಗಿ ಕೆಲಸ ಮಾಡುತ್ತಿರುವುದು ತುಂಬ ಆತಂಕಕಾರಿ ಸಂಗತಿ.

ಮಾಧ್ಯಮಗಳು ಕೇವಲ ಮಾಹಿತಿ ಕೇಂದ್ರಗಳಾಗದೆ, ರಂಜನೆಯ ವಾಹಕಗಳಾಗದೆ, ಜನಪರ ಚಿಂತನೆಯತ್ತ, ಸಮಾಜ ಪ್ರಗತಿಯತ್ತ ಮುನ್ನಡೆವ ಕ್ರಮಕ್ಕೆ ಪೂರಕವಾಗಿರಬೇಕಿದೆ. ಯಾವುದು ಜನಪರ, ಯಾವುದು ಜನಪರವಲ್ಲ ಎಂಬುದನ್ನು ನಿರ್ಧರಿಸದೆ ಗೊಂದಲಗಳನ್ನು ಸೃಷ್ಟಿಸುವಲ್ಲಿ ಕಾರ್ಪೊರೇಟ್ ವಲಯಗಳು ಯಶಸ್ವಿಯಾಗಿವೆ. ವ್ಯಾಪಾರಿ ಮನೋಭಾವದ ಕಾರ್ಪೊರೇಟ್ ಮಾಧ್ಯಮಗಳು ತಾವು ಹೇಳಿದ್ದೇ ಸತ್ಯ, ತಾವು ಪ್ರತಿಪಾದಿಸಿದ್ದೇ ಮೌಲ್ಯ ಎಂದು ಓದುಗರನ್ನು, ವೀಕ್ಷಕರನ್ನು ದಾರಿತಪ್ಪಿಸುತ್ತಿರುವುದು ತುಂಬ ಆತಂಕಕಾರಿ ವಿಷಯ.

ಇನ್ನು ಮೋದಿ ಸರಕಾರದ ಬಜೆಟ್ ಮೇಲೆ ಶ್ರೀ. ಸಿ. ಆರ್. ಕೃಷ್ಣರಾವ್‌ರವರ ಬತ್ತಳಿಕೆಯ ಪ್ರಹಾರವೂ ಕಾರ್ಪೊರೇಟ್ ವಲಯದ ಬೆಂಬಲ ದಿಂದ ಅಧಿಕಾರದ ಚುಕ್ಕಾಣಿ ಹಿಡಿದಿರುವುದರ ಮೇಲೆ ಬಿದ್ದಿದೆ. ಭರವಸೆಯ ಮಹಾಪೂರವನ್ನೇ ಹರಿಸಿ, ಹಳೆಯ ಸಂಸ್ಕೃತಿಯನ್ನೇ ಮುಂದುವರಿಸಿ ಬುಲೆಟ್ ಟ್ರೇನ್‌ಗಳನ್ನು ತರುವ ಯೋಜನೆ ಪ್ರಕಟಿಸಿದ್ದಾರೆ. ಕರ್ನಾಟಕದ ಮಟ್ಟಿಗೆ ಹೊಸ ರೈಲು ಮಾರ್ಗಗಳು ಕನಸಾಗಿಯೆ ಉಳಿದಿವೆ. ಅತ್ತ ರೈಲು ಪ್ರಯಾಣ ದರ ಹೆಚ್ಚಳ, ಇತ್ತ ವಿದ್ಯುತ್ ಬಳಕೆ ದರ ಹೆಚ್ಚಳ – ತರಕಾರಿ, ದವಸ–ಧಾನ್ಯಗಳ ಬೆಲೆ ಹೆಚ್ಚಳ – ಇವುಗಳ ವಿರುದ್ಧ ಹೋರಾಡಿ ಭಾರತೀಯ ಪ್ರಜೆ ಎಂದು ನಿಚ್ಚಳವಾಗುತ್ತಾನೊ ?

*ಹೂವಿನಹಡಗಲಿ* ***ಗುಗ್ರಿ ಪಂಚಾಕ್ಷರಿ***

✉ "ಸ್ವಾತಂತ್ರ್ಯೋತ್ಸವ–೬೮ ಮತ್ತು 'ಹೊಸತು' " ೧೬ರ ಸಂಭ್ರಮದೊಂದಿಗೆ ಪ್ರಕಟಣೆಗೊಂಡ ಆಗಸ್ಟ್ ೨೦೧೪ರ ಸಂಚಿಕೆಯು ತುಂಬ ಆಕರ್ಷಕವಾಗಿತ್ತು.

ಸಂಪಾದಕೀಯದಲ್ಲಿ ಸಿದ್ದನಗೌಡ ಪಾಟೀಲರು ಬರೆದ 'ಹೊಸತು'ಗೆ ಹದಿನಾರು ಓದಿದ ನಂತರ ಖುಷಿಯಾಯಿತು. ಹದಿನಾರರ ಹರೆಯ ಹೊಂದಿರುವ ಪತ್ರಿಕೆಯು ಯುವಕ–ಯುವತಿಯರಿಗೆ ಕನ್ನಡಾಭಿಮಾನವನ್ನು ಬೆಳೆಸುವ, ದೇಶಭಕ್ತಿಯನ್ನು ಕೆರಳಿಸುವ, ಸಾಹಿತ್ಯ ಪ್ರೇಮವನ್ನು ಉಕ್ಕಿಸುವ ಚೈತನ್ಯದ ಚಿಲುಮೆಯಾಗಲಿ ಎಂದು ಹಾರೈಸುತ್ತೇನೆ !

ಸಿ. ಆರ್. ಕೃಷ್ಣರಾವ್‌ರವರು ತಮ್ಮ 'ಮೋದಿ ಸರಕಾರದ ನಿರಾಶಾದಾಯಕ ಬಜೆಟ್' ಎಂಬ ಲೇಖನದಲ್ಲಿ ವಿಷಯವನ್ನು ವಾಸ್ತವಿಕವಾಗಿ ವಿಮರ್ಶಿಸಿದ್ದಾರೆ. ಯಾವುದೇ ಸರಕಾರ ಬಂದರೂ ಬೆಲೆ ಏರಿಕೆಯನ್ನು ತಡೆಯಲಾಗದಷ್ಟು ಇಂದಿನ ರಾಜಕಾರಣಿಗಳು ಅಸಮರ್ಥರಾಗಿದ್ದಾರೆ ಎಂಬುದು ಸ್ಪಷ್ಟ. ಕೇಂದ್ರ ಸರಕಾರ ಹಾಗೂ ರಾಜ್ಯ ಸರ್ಕಾರ ಗಳೆರಡೂ ಸಾಮಾನ್ಯ ಬಡಜನರ ಬಗ್ಗೆ ಮಲತಾಯಿ ಧೋರಣೆ ಹೊಂದಿರುವುದು ಅಕ್ಷರಶಃ ಸತ್ಯ.

*ಸಿಂದಗಿ* ***ಕಾ. ಗಿ. ಹತ್ತಳ್ಳಿ***

ಕಾವ್ಯಲೋಕ

# ನನಗಿಷ್ಟು ಜಾಗ ಕೊಡು

ನಿನ್ನ ಮನದೋಟದಲ್ಲಿ
ಹೂವಾಗಿ ಅರಳಿ ಪ್ರೀತಿಯ
ಪರಿಮಳವ ಬೀರುವೆ
ನನಗಿಷ್ಟು ಜಾಗ ಕೊಡು
ಅದು ಮುಳ್ಳಿರದ ಜಾಗವಾಗಿರಲಿ

ಹಗಲೆನ್ನದೆ ಇರುಳೆನ್ನದೆ
ಹೊಟ್ಟೆ ಪಾಡಿಗಾಗಿ ನೀ ದುಡಿಯುವಾಗ
ನಿನ್ನ ಬೆವರ ಹನಿಯಾಗಿ ಬರುವೆ
ನನಗಿಷ್ಟು ಜಾಗ ಕೊಡು
ಆ ಬೆವರ ಹನಿ ಉ(ಮು)ಪ್ಪಾಗದಿರಲಿ



ನೋವಿನಲ್ಲಿ ಬೆಳೆದ ನಿನಗೆ
ಕಣ್ಣೀರಲ್ಲೇ ಕೈ ತೊಳೆದ ನಿನಗೆ
ಜೀವನವೇ ಬೇಸರವಾದಾಗ
ನವಚೈತನ್ಯವ ಕೊಡಲು
ನಿನ್ನ ತುಟಿಯಲ್ಲಿ ನಗುವಾಗಿ ಬರುವೆ
ನನಗಿಷ್ಟು ಜಾಗ ಕೊಡು
ಅದು ಶವದ ತುಟಿ ಮೇಲಿನ ನಗುವಾಗದಿರಲಿ

ನಾಡಾದರೂ ಕಾಡಾದರೂ
ಉಪವಾಸವಾದರೂ ವನವಾಸವಾದರೂ
ಹೆಜ್ಜೆ ಹೆಜ್ಜೆಗೂ ಜೀವನದಿ ಜೊತೆಯಾಗಿ ಬರುವೆ
ನಿನ್ನ ಬಾಳಲ್ಲಿ ಸಂಗಾತಿಯಾಗುವೆ
ಹೃದಯದಲ್ಲಿ ನನಗಿಷ್ಟು ಜಾಗ ಕೊಡು
ಆ ಸಮುದ್ರದಲ್ಲಿ ನಾನೊಬ್ಬಳೇ ನದಿಯಾಗಿರಲಿ

**ಸುವರ್ಣ. ಶಿ. ಕಂಬಿ**
ಪತ್ರಿಕೋದ್ಯಮ ಮತ್ತು ಸಮೂಹ ಸಂವಹನ ವಿಭಾಗ
ಕರಾಮವಿವಿ ಜ್ಞಾನಶಕ್ತಿ ಆವರಣ, ತೊರವಿ
ವಿಜಾಪುರ – ೫೮೬ ೧೦೮



# ಋಗ್ವೇದ ಪ್ರವೇಶಿಕೆ



# ಐತಿಹ್ಯ ಮತ್ತು ವಾಸ್ತವ

ಮೃತರನ್ನು ಸೂಕ್ತ ಹಾದಿಯಲ್ಲಿ ನಡೆಸಿಕೊಂಡು ಹೋಗುವವನು ಪೂಷನ್, ಅಂದರೆ ಸೂರ್ಯ. ಶವವನ್ನು ಬೂದಿಗೈಯುವ ಅಗ್ನಿಯು ಮೃತರನ್ನು ಪಿತೃಗಳ ಬಳಿಗೆ ಒಯ್ಯುತ್ತಾನೆ. ಮೃತನ ಸಂಬಂಧಿಗಳು ಶವದ ಕಾಲಿಗೆ ಒಂದು ಮರದ ತುಂಡನ್ನು ಕಟ್ಟುತ್ತಾರೆ. ಮೃತ್ಯುದೇವತೆಯು ಹಿಂದಿರುಗಿ ಅಪ್ರಾಪ್ತ ವಯಸ್ಸಿನ ಇನ್ನಾರನ್ನಾದರೂ ಕೊಂಡೊಯ್ಯದಿರಲಿ ಎಂಬ ಆಶಯವು ಇದರಲ್ಲಿದ್ದಂತಿದೆ. ಯಮ ಮತ್ತು ಪಿತೃಸೂಕ್ತಗಳ (೧೦.೧೪–೧೫) ನಂತರದ ಮೂರು ಸೂಕ್ತಗಳು (೧೬–೧೮) ಶವಸಂಸ್ಕಾರ ವಿಧಿಯಲ್ಲಿ ಬಳಸಲಾಗುವ ಅನೇಕ ಮಂತ್ರಗಳನ್ನು ಒಳಗೊಂಡಿವೆ. ಆದರೆ ಅವು ರಚಿತಗೊಂಡಿದ್ದು ಆ ಉದ್ದೇಶದಿಂದಾಗಿ ಅಲ್ಲ. ಅಗ್ನಿಗೆ ಒಂದು ಮತ್ತು ವಿಶ್ವೇದೇವತೆಗಳಿಗೆ ಎರಡು ಸೂಕ್ತಗಳು ಮೀಸಲಾಗಿವೆ. ಈ ಹದಿನಾರನೆಯ ಕಂತಿನಲ್ಲಿ ಅವನ್ನು ಪರಿಚಯಿಸಿಕೊಳ್ಳೋಣ.

**ಜಿ. ರಾಮಕೃಷ್ಣ**

**ಸಾ**ವಿನ ಸುತ್ತ ಗಾಢವಾದ ವಿಸ್ಮಯಗಳನ್ನು ಹೆಣೆದಿರುವುದು ಮತ್ತು ಅನುಭವಿಸಿರುವುದು ಋಗ್ವೇದಕ್ಕೆ ಸೀಮಿತವಾದುದಲ್ಲ. ಸತ್ತವರು ನೋಡ ಲಾರರು, ಕೇಳಲಾರರು ಮತ್ತು ಮಾತನಾಡಲಾರರು. ಆದ್ದರಿಂದ ಶವದ ಮೂಳೆಗಳನ್ನೋ ಬೇರಾವುದೋ ಭಾಗಗಳನ್ನೋ ಆಯ್ದುಕೊಂಡರೆ ಅವುಗಳಲ್ಲಿ ಸಾವಿನ ಲೇಪವಿರುತ್ತದೆ; ಅವನ್ನು ಬಳಸಿಕೊಂಡು ವಿರೋಧಿ ಗಳನ್ನು ಕುರುಡರು, ಕಿವುಡರು ಮತ್ತು ಮೂಕರನ್ನಾಗಿಸ ಬಹುದು ಎಂಬ ಭಾವನೆ ವಿಶ್ವದ ಅನೇಕ ಭಾಗಗಳಲ್ಲಿ ಪ್ರಚಲಿತವಾಗಿದೆ. ಗಲೇಲರಿ ಎಂಬ ದ್ವೀಪದಲ್ಲಿರುವ ಆಚರಣೆಯೊಂದು ಹೀಗಿದೆ : ಯುವತಿಯೊಬ್ಬಳನ್ನು ಪ್ರೀತಿಸುವ ಯುವಕ ಅವಳ ಮನಸ್ಸನ್ನು ಸೂರೆಗೊಳ್ಳಲು ಯಾವುದೋ ಶವವನ್ನು ಸುಟ್ಟಿರುವ ಕಡೆಯಿಂದ ಒಂದು ಹಿಡಿ ಬೂದಿಯನ್ನು ತೆಗೆದುಕೊಂಡುಹೋಗಿ ಪ್ರಿಯಕರಳ ಮನೆಯ ಮೇಲೆ ಹರಡುತ್ತಾನೆ. ಅದೂ ಅವಳ ತಂದೆ–ತಾಯಿ ಮಲಗಿರುವ ಸ್ಥಳದ ಮೇಲೆಯೇ ಆಗಬೇಕು. ಆಗ ಅವರು ನಿದ್ರಾವಶರಾಗುತ್ತಾರೆ ಮತ್ತು ಯುವಕನು ಯುವತಿಯೊಡನೆ ನಿಸೂರಾಗಿ ಸಲ್ಲಾಪದಲ್ಲಿ ಕಾಲ ಕಳೆಯಬಹುದು. ಜೇಮ್ಸ್ ಫ್ರೇಝರ್ ಇಂತಹ ಹತ್ತಾರು ಆಚರಣೆಗಳನ್ನು ವಿವಿಧ ಪ್ರದೇಶ ಗಳಿಂದ ಆಯ್ದು ಪಟ್ಟಿ ಮಾಡಿದ್ದಾನೆ (ದ ಗೋಲ್ಡನ್ ಬೌ, ಪು. ३೦). ಯಾವುದೋ ಒಂದು ಹಿಂದು ಪಂಗಡದ ಆಚರಣೆಯಲ್ಲಿ ಸ್ಮಶಾನದಿಂದ ತಂದ ಬೂದಿಯನ್ನು ಯುವತಿಯ ಮನೆಯ ಬಾಗಿಲಿನ ಮುಂದೆ ಹಾಕಿದರೆ ಸಾಕಂತೆ, ಅದರದೂ ಪರಿಣಾಮ ಯುವಕ–ಯುವತಿಯರ ಪ್ರೇಮ ಸಲ್ಲಾಪಕ್ಕೆ ಯಾವುದೇ ಅಡ್ಡಿ ಇಲ್ಲದಿರುವುದೇ ಆಗಿರುತ್ತದಂತೆ! (ಅದೇ ಪುಟ). ಪ್ರಾಚೀನ ಸ್ಪೇನ್‌ನಲ್ಲಿ ಬೇರೊಂದು ರೀತಿಯ ಆಚರಣೆ ಇದ್ದಿತು : ಮೈಗೆ ಕಪ್ಪು ಬಣ್ಣ ಬಳಿದುಕೊಂಡ ಜನ ಒಂದು ಶವವನ್ನು ಹೂತಿರುವೆಡೆ ಹೋಗಿ ಅದನ್ನು ಹೊರತೆಗೆಯುತ್ತಾರೆ, ಒಂದು ಗವಿಯಲ್ಲಿ ಅದರ ಮೂಳೆಗಳನ್ನು ದೇಹಾಕಾರದಲ್ಲಿ ಜೋಡಿಸುತ್ತಾರೆ. ಅದರ ಮೇಲೆ ಒಂದಷ್ಟು ಎಲೆಗಳನ್ನಿಟ್ಟು ಅದರ ಮೇಲೆ ನೀರು ಸುರಿಯುತ್ತಾರೆ. ಸತ್ತವನ ಆತ್ಮವು ನೀರನ್ನು ಮಳೆಯಾಗಿ ಪರಿವರ್ತಿಸುತ್ತದೆ, ಯಥೇಚ್ಛ ಮಳೆ ಸುರಿಯುತ್ತದೆ (ಪು.೬೧). ಸಾವಿನ ವಿಸ್ಮಯವು ಎಷ್ಟು ವೈವಿಧ್ಯಮಯವಾದ ಕಲ್ಪನೆಗಳಿಗೆ ಹಾದಿ ಮಾಡಿಕೊಟ್ಟಿದೆ ಎಂಬುದು ಪ್ರಾಚೀನ ಸಂಸ್ಕೃತಿಗಳಲ್ಲಿ ಪ್ರಕಟವಾಗಿರುವ ಆಚರಣೆಗಳಿಂದ ತಿಳಿದುಬರುತ್ತದೆ.

ಋಗ್ವೇದದ ಒಂದು ಅಗ್ನಿಸೂಕ್ತದಲ್ಲಿನ (೧೦.೧೬) ಮೊದಲ ಆರು ಮಂತ್ರಗಳನ್ನು ಶವಕ್ಕೆ ಅಗ್ನಿಸ್ಪರ್ಶ ಮಾಡಿದ ತರುವಾಯದಲ್ಲಿ ಪಠಿಸಲಾಗುತ್ತದೆ. ಮೊದಲನೆಯ ಮಂತ್ರದಲ್ಲಿ ಮೃತನನ್ನು ಸುಟ್ಟುಹಾಕ ಬಾರದೆಂದೂ, ಶೋಕದಿಂದ ಆವೃತನಾಗುವಂತೆ ಮಾಡಬಾರದೆಂದೂ ಅಗ್ನಿಯಲ್ಲಿ ಮೊರೆಯಿಡಲಾಗಿದೆ. ಚಿತೆಗೇರಿಸಿ ಬೆಂಕಿ ಹೊತ್ತಿಸಿದನಂತರ ಶವವು ಸುಡದಿರುತ್ತದೆಯೆ ? ಅದು ಕವಿಗೆ ತಿಳಿಯದ ವಿಷಯವೇನೂ ಅಲ್ಲ. ಆದ್ದರಿಂದ ಕೂಡಲೆ





ಹೇಳುತ್ತಾನೆ, ಮೃತನು ಚೆನ್ನಾಗಿ ಸುಟ್ಟುಹೋದ ಮೇಲೆ ಅವನನ್ನು ಪಿತೃಗಳ ಬಳಿಗೆ ಕರೆದೊಯ್ಯಿ, ಎಂದು (೧. ಮಾ ಏನಂ ಅಗ್ನೇ ವಿ ದಹೋ ಮಾ ಅಭಿ ಶೋಚಃ ಮಾಸ್ಯ ತ್ವಚಂ ಚಿಕ್ಷಿ ಪೋ ಮಾ ಶರೀರಂ। ಯದಾ ಶೃತಂ ಕೃಣವೋ ಜಾತವೇದಃ ಅಥ ಈಂ ಏನಂ ಪ್ರ ಹಿಣುತಾತ್ ಪಿತೃಭ್ಯಃ॥). ಜೀವ ಕಳೆದುಕೊಳ್ಳದೆ ಈ ನಮ್ಮ ಲೋಕದಲ್ಲೇ ಚಿರವಾಗಿ ಉಳಿಯಬೇಕೆಂಬ ಲಾಲಸೆಯನ್ನು 'ಅಭಿನಿವೇಶ' ಎನ್ನುತ್ತಾರೆ. ಅದನ್ನು ಹಿಂದೆಯೇ ಪ್ರಸ್ತಾಪಿಸಲಾಗಿತ್ತು. ಅದರ ಭಾವವು ನೇರವಾಗಿಯಲ್ಲದಿದ್ದರೂ ಪ್ರಸ್ತುತ ಮಂತ್ರದಲ್ಲಿ ವ್ಯಕ್ತವಾಗಿದೆ. ಅಗ್ನಿಯು ಮೃತನನ್ನು ಮುಂದಿನ ಗತಿಗೆ ಸಿದ್ಧಗೊಳಿಸಿ ಪಿತೃಗಳಿಗೆ ಅರ್ಪಿಸಿಬಿಡುತ್ತಾನೆ. ಅಲ್ಲಿ ಅವನಿಗೆ ಬೇರೊಂದು ವಿಧದ ಜೀವನವು ಕಾದಿದೆ. ಅದನ್ನು ಪಡೆದಾಗ ಮೃತನು ಸ್ವತಃ ದೇವತೆಗಳನ್ನೇ ತನ್ನ ಅಧೀನಕ್ಕೆ ಪಡೆದುಕೊಳ್ಳಲು ಸಮರ್ಥನಾಗುತ್ತಾನೆ; ಅಂದರೆ, ಅವರನ್ನು ಒಲಿಸಿಕೊಳ್ಳುವುದರಲ್ಲಿ ಯಶಸ್ವಿ ಯಾಗುತ್ತಾನೆ. (೨ : ಶೃತಂ ಯದಾ ಕರಸಿ ಜಾತವೇದಃ ಅಥೇಮೇನಂ ಪರಿ ದತ್ತಾತ್ ಪಿತೃಭ್ಯಃ। ಯದಾ ಗಚ್ಛಾತಿ ಅಸುನೀತಿಂ ಏತಾ ಅಥ ದೇವಾನಾಂ ವಶನೀಃ ಭವತಿ॥). ಇದನ್ನು ಆಕಾಂಕ್ಷೆ ಅಥವಾ ಆಶಯವೆಂದು ನೋಡಬೇಕೇ ವಿನಾ ಋಗ್ವೇದದ ಪ್ರಾಚೀನ ಕವಿಗಳಿಗೆ ಮರಣದ ನಂತರದ ಗತಿಯ ಸೂಕ್ಷ್ಮಾವಲೋಕನವು ಲಭಿಸಿತ್ತು ಎಂದಲ್ಲ. ಮೃತನು ದೇವತೆಗಳ ವಶಕ್ಕೆ ಸಿಲುಕುತ್ತಾನೋ ಅಥವಾ ತಾನೇ ಅವರನ್ನು ವಶಪಡಿಸಿಕೊಳ್ಳುತ್ತಾನೋ ? ಎರಡನೆಯ ಸಾಧ್ಯತೆಯನ್ನು ಮಂತ್ರವು ಹೇಳಿದೆ, ಆದರೆ ಸಾಯಣನು ಮೊದಲ ಸಾಧ್ಯತೆಯನ್ನು ಎತ್ತಿಹಿಡಿಯುವ ರೀತಿಯಲ್ಲಿ ವ್ಯಾಖ್ಯಾನಿಸಿದ್ದಾನೆ. ಮೃತನ ಸ್ವಾಯತ್ತತೆಯನ್ನು ರಕ್ಷಿಸಬೇಕೆನ್ನುವ ಕವಿಯ ಆಶಯವು ಅವನ ಅಧೀನತೆಯನ್ನು ಮಾನ್ಯ ಮಾಡುವುದಿಲ್ಲವಾದ್ದರಿಂದ ಸಾಯಣನ ವ್ಯಾಖ್ಯಾನವು ಸಮಂಜಸವೆನಿಸುವುದಿಲ್ಲ.

ಸತ್ತವರು ಎಲ್ಲಿಗೆ ಹೋಗುತ್ತಾರೆ ಅಥವಾ ಹೋಗಬಹುದು ? ಅದು ನಿಶ್ಚಿತವಾಗಿ ತಿಳಿದಿದ್ದರೆ ಮಾನವ ಜನಾಂಗದ ಸಾಂಸ್ಕೃತಿಕ ಇತಿಹಾಸವು ಬೇರೆಯೇ ಇರುತ್ತಿತ್ತು. ಸದ್ಯಕ್ಕೆ ನಾವು ಊಹೆಗಳಿಂದ ಸಮಾಧಾನ ತಾಳಬೇಕು, ಅಷ್ಟೆ. ಮೂರನೆಯ ಮಂತ್ರ ಹೇಳುತ್ತದೆ : "ನಿನ್ನ ಕಣ್ಣನ್ನು ಸೂರ್ಯನು ಸ್ವೀಕರಿಸಲಿ, ನಿನ್ನ ಆತ್ಮವು ವಾಯುವಿನಲ್ಲಿ ಲೀನವಾಗಲಿ; ಭೂಮಿಯ ಮೇಲೆ ನೀನೆಸಗಿರುವ ಕೃತ್ಯಗಳಿಗನುಸಾರವಾಗಿ ನೀನು ಪೃಥಿವಿಗೆ ಹೋಗು, ಇಲ್ಲವೆ ದ್ಯುಲೋಕಕ್ಕೆ ತೆರಳು." ಆದರೆ, ಅವೆರಡೇ ಸ್ಥಾನಗಳಿಲ್ಲವಾದ್ದರಿಂದ ಮೃತನು ನೀರಿನಲ್ಲೋ ಸಸ್ಯಗಳಲ್ಲೋ ಆಶ್ರಯ ಪಡೆಯುವ ಸಾಧ್ಯತೆಯನ್ನು ಕವಿಯು ತಳ್ಳಿಹಾಕುವುದಿಲ್ಲ. ಈ ಮಂತ್ರದಲ್ಲಿ "ಅಪಃ" ಎಂಬ ಶಬ್ದದ ಪ್ರಯೋಗವಿದೆ. ಅದು ನೀರು ಎಂದಾದರೆ ಶಬ್ದವು 'ಆಪಃ' ಎಂದಿರಬೇಕಿತ್ತು. ಇದನ್ನು ಗಮನಿಸಿ ಸಾಯಣನು 'ಅಪಃ' ಎನ್ನುವುದನ್ನು 'ಅಂತರಿಕ್ಷ ಲೋಕ' ಎಂದು ಅರ್ಥೈಸಿದ್ದಾನೆ. ದೀರ್ಘಸ್ವರವನ್ನು ಹ್ರಸ್ವಗೊಳಿಸುವುದು ಋಗ್ವೇದದ ಮಂತ್ರಗಳಲ್ಲಿ ಅನಾಯಾಸವಾಗಿ ನಡೆಯುತ್ತಿರುತ್ತದೆಂಬುದು ಅವನಿಗೂ ತಿಳಿದಿದೆ. ಆದಾಗ್ಯೂ ಎರಡರಲ್ಲಿ ಯಾವ ಅರ್ಥವನ್ನು ಸ್ವೀಕರಿಸಿದರೂ ಬಾಧಕವಿಲ್ಲ. ಆದರೆ ಪೃಥ್ವಿಯಿಂದ ಹೊರಹೋಗುತ್ತಿರುವ ಮೃತನು ಮತ್ತೆ ಪೃಥಿವಿಗೇ ಹೋಗುವುದೆಂದರೇನು ? ಪೃಥ್ವಿಯ ಮೇಲಿನ ನೀರು ಮತ್ತು ಸಸ್ಯಗಳ ಉಲ್ಲೇಖವೂ ಬಂದಿದೆ; ಪೃಥಿವಿಗೆ ಮರಳಿಹೋಗುವುದೆಂದರೆ ಅದರಲ್ಲಿ ಇವೂ ಸೇರಿವೆ. ಋಗ್ವೇದದಲ್ಲಿ ಇದು ಮೊಟ್ಟಮೊದಲ ಪುನರ್ಜನ್ಮದ ಕಲ್ಪನೆ ಇರಬಹುದೇ ಎನಿಸುತ್ತದೆ, ಆದರೆ ಅದನ್ನು ಸ್ಪಷ್ಟವಾಗಿ ಬೆಳೆಸಿಲ್ಲ. ಕಣ್ಣು ಬೆಳಕನ್ನು ಮತ್ತು ಕಿವಿಯು ಶಬ್ದವನ್ನು ಗ್ರಹಿಸುವ ಸಾಧನಗಳು; ಅದರಲ್ಲೇನೂ ವಿಶೇಷವಿಲ್ಲ. ನಂತರದ ಮಾತು ಸಾಂಸ್ಕೃತಿಕ ಚರಿತ್ರೆಯ ದೃಷ್ಟಿಯಿಂದ ಮಹತ್ವದ್ದು, ಏಕೆಂದರೆ 'ನಿನ್ನ ಕರ್ಮಫಲವನ್ನು ನೀನು ಅನುಭವಿಸಿಯೇ ತೀರಬೇಕು' ಎಂಬ ಕರ್ಮಸಿದ್ಧಾಂತವು ಇಲ್ಲಿ ಅಂಕುರಿಸಿದೆ. ಅದಕ್ಕೆ ತಾತ್ವಿಕ ವಿಶ್ಲೇಷಣೆಯ ಗಹನತೆಯ ಅಗತ್ಯವಿಲ್ಲ. ಕಾರ್ಯ-ಕಾರಣ ಸಂಬಂಧದ ಒಂದು ನಿರೂಪಣೆಯಂತೆಯೂ ಅದನ್ನು ಗಮನಿಸಬಹುದು. ಮುಖ್ಯವಿಷಯವೇನೆಂದರೆ, ಕರ್ಮ, ಪುನರ್ಜನ್ಮ, ಮುಂತಾದ ಪರಿಕಲ್ಪನೆಗಳು ಮೂಡಿರುವುದು ಸಾವಿನ ಅಚಿಂತ್ಯ ರಹಸ್ಯದ ಹಿನ್ನೆಲೆಯಲ್ಲಿ. (೩. ಸೂರ್ಯಂ ಚಕ್ಷುಃ ಗಚ್ಛತು ವಾತಮಾತ್ಮಾ ದ್ಯಾಂ ಚ ಗಚ್ಛ ಪೃಥಿವೀಂ ಚ ಧರ್ಮಣಾ। ಅಪೋ ವಾ ಗಚ್ಛ ಯದಿ ತತ್ರ ತೇ ಹಿತಂ ಓಷಧೀಷು ಪ್ರತಿ ತಿಷ್ಠಾ ಶರೀರೈಃ॥). ಮುಂದಿನ ಮಂತ್ರದಲ್ಲಿ ಪುನರ್ಜನ್ಮದ ಮಾತನ್ನು ಮತ್ತೆ ಎತ್ತಲಾಗಿದೆ, ಆದರೆ ಅದೇ ಹೆಸರಿನಿಂದಲ್ಲ. ಮಂತ್ರದ ಸರಳಾರ್ಥ ಹೀಗಿದೆ : "ಅಗ್ನಿಯೇ, ನಿನಗೆ ಅರ್ಪಿಸಲಾಗಿರುವ ಮೇಕೆಯು ನಿನ್ನದು, ನಿನ್ನ ಶಾಖದಿಂದ ಅದನ್ನು ನೀನು ಭುಂಜಿಸು. ನಿನ್ನ ತೀವ್ರ ಜ್ವಾಲೆಯು, ನಿನ್ನ ಸುಭಗವಾದ ಕಾಂತಿಯು, ಅದನ್ನು ದಹಿಸಲಿ. ಎಲೈ ಜಾತವೇದನೇ, ನಿನ್ನ ಮಂಗಲಕರ ರೂಪಗಳು ಅವನನ್ನು (ಮೃತನನ್ನು) ಸುಕೃತ ಲೋಕಗಳಿಗೆ ಒಯ್ಯಲಿ" (೪ : ಅಜೋ ಭಾಗಸ್ತಪಸಾ ತಂ ತಪಸ್ವ ತಂ ತೇ ಶೋಚಿಃ ತಪತು ತಂ ತೇ ಅರ್ಚಿಃ। ಯಾಸ್ತೇ ಶಿವಾಃ ತನ್ವಃ ಜಾತವೇದಃ ತಾಭಿಃ ವಹ ಏನಂ ಸುಕೃತಾಸು ಲೋಕಂ॥). ಮೇಕೆಯ ವಿವಿಧ ಭಾಗಗಳನ್ನು ಕತ್ತರಿಸಿ, ಅಗ್ನಿಸ್ಪರ್ಶ ಮಾಡುವ ಮುನ್ನ ಅವನ್ನು ಶವದ ಮೇಲೆ ಇರಿಸಲಾಗುವ ಪದ್ಧತಿ ಇದ್ದಿತೆಂದು ಈ ಮಂತ್ರದಿಂದ ಸ್ಪಷ್ಟವಾಗುತ್ತದೆ. ಇಂದಿನ ಆಚಾರವಂತರು ಮೇಕೆಯ ಭಾಗಗಳ ಬದಲು ಹಿಟ್ಟು ಮತ್ತು ಅನ್ನದ ಉಂಡೆಗಳನ್ನಿಡುವ ಪರ್ಯಾಯವನ್ನು ಕಂಡುಕೊಂಡಿದ್ದಾರೆ. ಪಶುಸಂಗೋಪನಾ ಹಂತದಲ್ಲಿದ್ದ ಋಗ್ವೇದದ ಕರ್ತೃಗಳಿಗೆ ಮೇಕೆಯ ಮಾಂಸವು ಅಸಹ್ಯವೇನೂ ಆಗಿರಲಿಲ್ಲ. ಸಾಯಣನಿಗೆ ಇದು ಸ್ವೀಕಾರಾರ್ಹವಲ್ಲ, ಆದ್ದರಿಂದ 'ಅಜ' ಎಂಬ ಪದಕ್ಕೆ ಸುತ್ತಿ ಬಳಸಿ ಏನೋ ಒಂದರ್ಥವನ್ನು ಹೇರಿದ್ದಾನೆ. "ಜನನರಹಿತ ಶರೀರೇಂದ್ರಿಯಾದಿ ಭಾಗ ವ್ಯತಿರಿಕ್ತಃ ಅಂತರಪುರುಷ ಲಕ್ಷಣಃ" ಎಂದವನು ವ್ಯಾಖ್ಯಾನಿಸಿದ್ದಾನೆ. ಇದು ಅವನ ಕಲ್ಪನಾಶಕ್ತಿಗೆ ಒಂದು ಉದಾಹರಣೆ, ಅಷ್ಟೆ. 'ಜನನರಹಿತ'ವಾದುದನ್ನು ಋಗ್ವೇದದ ಕವಿಯೊಬ್ಬ ಊಹಿಸಿಕೊಳ್ಳಬಲ್ಲನೆಂದು ಭ್ರಮಿಸುವುದು ಮೋಜಿನ ಪ್ರಸಂಗ. ಮುಂದಿನ ಮಂತ್ರದಲ್ಲಿ ಮತ್ತೆ ಮೃತನನ್ನು ಪಿತೃಗಳ ಬಳಿಗೆ ಕಳಿಸಬೇಕೆಂದು ಕೋರಲಾಗಿದೆ. ದ್ವಿತೀಯಾರ್ಧದಲ್ಲಿ ಹೇಳಲಾಗಿರುವುದು ಸ್ವಾರಸ್ಯಕರ : "ಹೊಸ ಆಯುಸ್ಸಿನಲ್ಲಿ ಮೃತನು ಹೇರಳವಾಗಿ ಸಂತಾನಾಭಿವೃದ್ಧಿ ಮಾಡಿಕೊಳ್ಳಲಿ, ಅವನು ಬೇರೊಂದು ಶರೀರವನ್ನು ಧರಿಸಲಿ" (೫ : ಆಯುಃ ವಸಾನಃ ಉಪ ವೇತು ಶೇಷಃ ಸಂ ಗಚ್ಛತಾಂ ತನ್ವಾ ಜಾತವೇದಃ). ಮೃತನು ಮತ್ತೊಂದು ಶರೀರವನ್ನು ಹೊಂದುವಂತಾಗಲಿ ಎಂಬುದು ಪುನರ್ಜನ್ಮದ ಆಶಯವಲ್ಲದೆ ಮತ್ತೇನೂ ಅಲ್ಲ. ಪಿತೃಗಳನ್ನು ಸೇರಿಕೊಂಡಾಗ ಅವನು ಪಿತೃವಾಗುತ್ತಾನೆ ಮತ್ತು ಪಿತೃಗಳು ದ್ಯುಲೋಕ ಹಾಗೂ ಪೃಥ್ವಿಯ ಫಲವಂತಿಕೆಗೆ ಕಾರಣರು ಎಂಬ ಭಾವ ಇಲ್ಲಿದೆ.

ಮೃತ್ಯುವನ್ನು "ಕತ್ತಲಿನ ಹಕ್ಕಿ" ಎಂದು ಕರೆದು, ಮೃತನ ಶರೀರವನ್ನು ಇರುವೆ, ಹಾವು, ನರಿ ಇತ್ಯಾದಿಗಳು ಮುಟ್ಟದಂತೆ ಅಗ್ನಿಯು ಶವವನ್ನು ರಕ್ಷಿಸಬೇಕೆಂದು ಮುಂದಿನ ಮಂತ್ರದಲ್ಲಿ ಆಶಿಸಲಾಗಿದೆ (೬ : ಯತ್ತೇ ಕೃಷ್ಣಃ ಶಕುನ ಆತುತೋದ ಪಿಪೀಲಃ ಸರ್ಪ ಉತ ವಾ ಶ್ವಾಪದಃ). ಅಗ್ನಿಯು ಅಂತಹವನ್ನು ಸುಟ್ಟುಹಾಕಬೇಕು ಮತ್ತು ಮೃತನ ಶರೀರವನ್ನು ರಕ್ಷಿಸಬೇಕು. "ಕತ್ತಲಿನ ಹಕ್ಕಿ"ಯೆಂದು ಮೃತ್ಯುವನ್ನು ಉದ್ದೇಶಿಸಿ ಹೇಳುವುದು ಮಾರ್ಮಿಕವಾಗಿದೆ. ಮೃತ್ಯುವು ತಮಸ್ಸಿನ ಛಾಯೆಯನ್ನು ಹೊಂದಿದೆ ಮತ್ತು ವ್ಯಕ್ತಿಯ ಪ್ರಾಣವು ಸರ್‍ರನೆ ಹಾರಿ ಹೋಗುತ್ತದೆ. ಉಪನಿಷತ್ತಿನಲ್ಲಿ ಜೀವಾತ್ಮ-ಪರಮಾತ್ಮರನ್ನು ಹಕ್ಕಿಗಳೆಂದು ಕರೆಯಲಾಗಿದೆ; ಅವುಗಳಲ್ಲಿ ಒಂದು ಸಿಹಿ-ಕಹಿ ಹಣ್ಣುಗಳನ್ನು ಮರದಿಂದ ಕಿತ್ತು ತಿನ್ನುತ್ತದೆ, ಇನ್ನೊಂದು ನಿಶ್ಚಲವಾಗಿ ಎಲ್ಲವನ್ನೂ ಸುಮ್ಮನೆ ಪರಿವೀಕ್ಷಿಸುತ್ತದೆ. ಋಗ್ವೇದದ ಕಪ್ಪು ಹಕ್ಕಿಯ ವಿಸ್ತೃತ ರೂಪವು ಉಪನಿಷತ್ತಿನಲ್ಲಿದೆ ಎನ್ನಬಹುದು (ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ। ತಯೋರನ್ಯಃ ಪಿಪ್ಪಲಂ ಸ್ವಾದು ಅತ್ತಿ...).

ಪಿತೃಗಳನ್ನು ಗೌರವಿಸಿ ತುಷ್ಟೀಕರಿಸಲು ಅಗ್ನಿಯೇ ಪ್ರಶಸ್ತ ಮಾಧ್ಯಮ. ಅವನು ಮಾಂಸವನ್ನು ಭಕ್ಷಿಸುತ್ತಾನೆ, ನಮ್ಮ ಮನೆಗಳಲ್ಲೇ ಅಡ್ಡಾಡುತ್ತಿರುತ್ತಾನೆ (೧೦ : ಯೋ ಅಗ್ನಿಃ ಕ್ರವ್ಯಾತ್ ಪ್ರವಿವೇಶ ವೋ ಗೃಹಂ...). ಋತಕ್ಕೂ ಪ್ರಾಚೀನರಿಗೂ ಇರುವ ಸಂಬಂಧವನ್ನು ನಾವು ಹಿಂದೆಯೇ ಚರ್ಚಿಸಿದ್ದೇವೆ. 'ಅವರ ಕಾಲದ ಋತವು ಎಲ್ಲಿ ಹೋಯಿತು' ಎಂಬ ಪರಿತಾಪವು ಋಗ್ವೇದದ ಕರ್ತೃಗಳನ್ನು ಬಹುವಾಗಿ ಕಾಡಿದೆ. ಪ್ರಸ್ತುತ ಸೂಕ್ತದಲ್ಲೂ ಪಿತೃಗಳನ್ನು 'ಋತವನ್ನು ವರ್ಧಿಸುವವರು' (ಋತಾವೃಧಃ) ಎಂದು ಕರೆಯಲಾಗಿದೆ. ಮುಂದುವರಿದು ಕವಿಯು ಹೇಳುತ್ತಾನೆ : "ಸಂತೋಷದಿಂದ ನಾವು ನಿನ್ನನ್ನು (ಅಗ್ನಿಯನ್ನು) ವಿಧಿವಿಧಾನಗಳ ಆಚರಣೆಗಾಗಿ ಸ್ಥಾಪಿಸಿಕೊಳ್ಳುತ್ತೇವೆ; ಸಂಭ್ರಮದಿಂದ ನಿನ್ನನ್ನು ಹೊತ್ತಿಸುತ್ತೇವೆ. ಇಲ್ಲಿಗೆ ಬರಬೇಕೆಂಬ ಆಸೆಯನ್ನುಳ್ಳ ಪಿತೃಗಳನ್ನು ನೀನು ಕರೆದು ತಾ, ಅವರು ನಾವು ನೀಡುವ ಹವಿಸ್ಸನ್ನು ಭುಂಜಿಸಲಿ" (೧೨ : ಉಶಂತಃ ತ್ವಾ ನಿ ಧೀಮಹಿ ಉಶಂತಃ ಸಮಿಧೀಮಹಿ। ಉಶನ್ನುಶತಃ ಆ ವಹ ಪಿತೄನ್ ಹವಿಷೇ ಅತ್ತವೇ॥). ಕಡೆಯ ಎರಡು ಮಂತ್ರಗಳು ಕವಿತ್ವದ ದೃಷ್ಟಿಯಿಂದ

ಸಾಕಷ್ಟು ರಂಜನೀಯವಾಗಿವೆ. ಅಲ್ಲಿಯೂ ಪುನಃ ಜನ್ಮ ತಾಳಿ ಬರುವ ಆಶಯವು ವ್ಯಕ್ತವಾಗಿದೆ : "ಅಯ್ಯಾ ಅಗ್ನಿ, ಎಲ್ಲವನ್ನೂ ತಣ್ಣಗಾಗಿಸು. (ಶವವನ್ನು ಸುಡುವಾಗ) ಯಾವ ಜಾಗವನ್ನು ನೀನು ಸುಟ್ಟು ಕರಕಲು ಮಾಡಿದೆಯೋ ಅಲ್ಲಿ ಬಿಳಿಯ ಹೂವುಗಳು ಬೆಳೆಯಲಿ, ಎಳಸಾದ ಹುಲ್ಲು ಬೆಳೆಯಲಿ, ಬಹು ಶಾಖೆಗಳಲ್ಲಿ ಎಲೆಗಳು ಕಂಗೊಳಿಸಲಿ" (೧೩ : ಯಂ ತ್ವಮಗ್ನೇ ಸಮದಹಃ ತಮು ನಿರ್ವಾಪಯಾ ಪುನಃ। ಕಿಯಾಂಬು ಅತ್ರ ರೋಹತು ಪಾಕದೂರ್ವಾ ವ್ಯಲ್ಕಶಾ ॥). ಮೃತ್ಯುವನ್ನು ಎದುರುಹಾಕಿಕೊಂಡು ಜಯಿಸಲಾಗದು; ಅದನ್ನು ಅಂಗೀಕರಿಸಿ ಶುಭ ಭವಿಷ್ಯವನ್ನು ರೂಪಿಸಿಕೊಳ್ಳಲು ಮುಂದಾಗಬೇಕು. ಮೃತ್ಯುವಿನ ತಾಪಕ್ಕೆ ಭಿನ್ನವಾಗಿ ಇಲ್ಲಿ ಅಗ್ನಿಯ ಶೈತ್ಯವನ್ನು ಹೆಸರಿಸಲಾಗಿದೆ. ಎಳೆಯ ಹುಲ್ಲು ಮತ್ತು ಅನೇಕ ಎಲೆಗಳಿರುವ ಗಿಡ, ಇವು ಸಾಂತ್ವನ ನೀಡುವ ಸಾಧನಗಳು. ಸಾವಿನೆದುರು ನಾವು ಕೇವಲ ಅಶಕ್ತರು. ಇದ್ದುದರಲ್ಲಿ ಹರ್ಷವನ್ನು ಸ್ವಾಗತಿಸಿ ತಣಿಯಬೇಕು. ಸಾವಿನ ವಿಸ್ಮಯವು ಅಷ್ಟು ಗಾಢವಾದುದು. ಕಡೆಯ ಮಂತ್ರದಲ್ಲಿ ಶೈತ್ಯವನ್ನು ಸ್ವಾಗತಿಸಿ ಉಲ್ಲಾಸ ತಂದುಕೊಳ್ಳ ಬೇಕೆಂಬ ಭಾವವಿದೆ. ಅಗ್ನಿಯನ್ನು ಶೈತ್ಯೋಪಚಾರದ ಸಾಧನವೆಂದು ಪರಿಗಣಿಸುವುದು, ಅನಿವಾರ್ಯ ವಾದುದನ್ನು ಸ್ವಾಗತಿಸಿ ಸಾಂತ್ವನ ಪಡೆದುಕೊಳ್ಳದೆ ಅನ್ಯಮಾರ್ಗವಿಲ್ಲವೆಂಬುದರ ಸೂಚನೆ. ಶವವನ್ನು ದಹಿಸಿದ ನಂತರ ಅದೇ ಜಾಗದಲ್ಲಿ ನೀರು ಸುರಿದು ಅಗ್ನಿಯನ್ನು ಶಮನಗೊಳಿಸುವುದು, ಸಸಿಗಳನ್ನು ನೆಡುವುದು, ಸಾವನ್ನು ಜೀರ್ಣಿಸಿಕೊಂಡುದರ ದ್ಯೋತಕ. ನಂತರ ಅಲ್ಲಿ ಒಂದು ಕಪ್ಪೆಯನ್ನಿಡಲಾಗುತ್ತದೆ. ನೀರಿನಲ್ಲಿ ಇರುವ ಜೀವಿಗಳ ಪ್ರತೀಕ ಅದು. (೧೪ : ಶೀತಿಕೇ ಶೀತಿಕಾವತಿ ಹ್ಲಾದಿಕೇ ಹ್ಲಾದಿಕಾವತಿ । ಮಂಡೂಕ್ಯಾ ಸು ಸಂ ಗಮಃ ಇಮಂ ಸು ಅಗ್ನಿಂ ಹರ್ಷಯ). ಶವಸಂಸ್ಕಾರದ ಕ್ರಿಯೆಯಲ್ಲಿ ಇಂತಹ ಫಲವತ್ತಾದ ಮಂತ್ರಗಳು ಮತ್ತು ನಮ್ರ ಭಾವನೆಗಳು ಈ ಸೂಕ್ತವನ್ನು ಉನ್ನತ ಮಟ್ಟಕ್ಕೇರಿಸುತ್ತವೆ.

ಹದಿನೇಳನೆಯ ಸೂಕ್ತವನ್ನು ಸಂಕ್ಷಿಪ್ತವಾಗಿ ಪರಿಚಯಿಸಿಕೊಂಡು ಹದಿನೆಂಟನೆಯ ಸೂಕ್ತದತ್ತ ಗಮನ ಹರಿಸೋಣ : ಅದರ ಮೊದಲೆರಡು ಮಂತ್ರಗಳು ಕ್ಲಿಷ್ಟವಾಗಿವೆ; ಇನ್ನುಳಿದ ಭಾಗದೊಡನೆ ಇವುಗಳ ಸಂಬಂಧವೇನು ಎಂಬ ಪ್ರಶ್ನೆ ಜಟಿಲವಾಗಿದೆ. ಮಿಕ್ಕ ಮಂತ್ರಗಳು ಒಂದಲ್ಲ ಒಂದು ರೀತಿಯಲ್ಲಿ ಮೃತನ ಯಾನದ ಬಗೆಗೆ ಹೇಳುತ್ತವೆ, ಆದರೆ ಮೊದಲ ಮಂತ್ರದಲ್ಲಿ ತ್ವಷ್ಟೃ ತನ್ನ ಮಗಳ ಮದುವೆಗೆ ವಿಜೃಂಭಣೆಯ ಸಿದ್ಧತೆ ನಡೆಸುತ್ತಿರುವುದನ್ನು ಪ್ರಸ್ತಾಪಿಸ ಲಾಗಿದೆ. ಅವನ ಮಗಳು ಸರಣ್ಯು. ಹಾಗೆಂದರೆ ಉಷೋ ದೇವತೆಯೋ ಕಪ್ಪುಮೋಡವೋ ಇರಬಹುದೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಅವಳೇ ಯಮ ಮತ್ತು ಯಮಿಯರ ತಾಯಿ ಕೂಡ. ಅವಳ ಪತಿ ವಿವಸ್ವಾನ್. ಸರಣ್ಯೂಳ ಮದುವೆಗೆ ಸಿದ್ಧತೆ ಜಾರಿಯಲ್ಲಿದ್ದಾಗ ಅವಳೆಲ್ಲೋ ಅದೃಶ್ಯಳಾಗಿಬಿಟ್ಟಳು. ಅಮರ್ತ್ಯಳಾದ ಅವಳನ್ನು ಮರ್ತ್ಯರಿಂದ ಬೇರ್ಪಡಿಸಿ ಬಚ್ಚಿಡಲಾಯಿತು. ಅವಳಿಗೆ ಯಮ–ಯಮಿಯರಲ್ಲದೆ ಅಶ್ವಿನಿದೇವತೆಗಳು ಸಹ ಮಕ್ಕಳು. ನಾಲ್ಕೂ ಮಂದಿಗೆ ಜನ್ಮ ನೀಡಿದ ಅವಳೆಲ್ಲೋ ಕಾಣೆಯಾದಳು.

ವಿಜೃಂಭಣೆ ಮತ್ತು ಸಂಪೂರ್ಣವಾಗಿ ಕಾಣೆ ಯಾಗುವುದು (ಸಾವು) ಒಂದರಿಂದ ಇನ್ನೊಂದು ತೀರಾ ದೂರವಲ್ಲವೆಂಬ ಸೂಚನೆಯನ್ನು ಕೊಡಲೋಸುಗ ಸರಣ್ಯೂಳ ಕತೆ ಇಲ್ಲಿ ಪ್ರಸ್ತಾಪಿಸಲ್ಪಟ್ಟಿದೆ ಎನಿಸುತ್ತದೆ. (೧೦.೧೭.೧–೨: ತ್ವಷ್ಟಾ ದುಹಿತ್ರೇ ವಹತುಂ ಕೃಣೋತಿ... ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ ॥ ...ಉತ ಅಶ್ವಿನೌ ಅಭರತ್ ಯತ್ ತದಾಸೀತ್ ಅಜಹಾದು ದ್ವಾ ಮಿಥುನಾ ಸರಣ್ಯೂಃ ॥). ಇನ್ನುಳಿದ ಮಂತ್ರಗಳು ನೇರವಾಗಿ ಶವಸಂಸ್ಕಾರಕ್ಕೆ ಸಂಬಂಧಿಸಿದವೇ ಆಗಿವೆ. ವಿವಿಧ ದೇವತೆಗಳು ಮೃತನನ್ನು ಸರಿದಾರಿಯಲ್ಲಿ ನಡೆಸಿ ಪಿತೃಗಳ ಬಳಿಗೆ ಸೇರಿಸಬೇಕೆಂಬ ಆಶಯವು ಉದ್ದಕ್ಕೂ ವ್ಯಕ್ತವಾಗಿದೆ. ವಿಶೇಷವಾಗಿ ಪೂಷನ್ ಮತ್ತು ಸರಸ್ವತೀ ಈ ಕಾರ್ಯದಲ್ಲಿ ಹೆಚ್ಚು ಉಪಯುಕ್ತರು. ಸೂರ್ಯನಿಗೆ ಋಗ್ವೇದದಲ್ಲಿ ಪೂಷನ್ ಮತ್ತು ಸವಿತೃ ಎಂಬ ಹೆಸರುಗಳೂ ಇವೆ. ಆಶ್ಚರ್ಯವೆಂದರೆ ಒಂದೇ ಸೂಕ್ತದಲ್ಲಿ ಪೂಷನ್ ಮತ್ತು ಸವಿತೃ ಎಂಬ ಎರಡು ಹೆಸರುಗಳನ್ನೂ ಬಳಸಲಾಗಿರುವುದು. ಭಾಷಾಶಾಸ್ತ್ರದಲ್ಲಿ ಒಂದು ಪ್ರಮೇಯವಿದೆ : ಒಂದು ಶಬ್ದದ ಪರ್ಯಾಯ ಪದಗಳು ಒಂದೇ ವಸ್ತುವನ್ನು ಸೂಚಿಸುತ್ತವಾದರೂ ಆ ವಸ್ತುವಿನ ಪ್ರತ್ಯೇಕ ಲಕ್ಷಣಗಳನ್ನು ಸೂಚಿಸುವುದಕ್ಕಾಗಿ ಪ್ರಯೋಗಕ್ಕೆ ಬಂದಿವೆ, ಎಂದು. ಸರೋಜ, ಕಮಲ, ಪಂಕಜ, ಎಲ್ಲಾ ಒಂದೇ; ಆದರೆ ಸರೋವರ ಮತ್ತು ಕೆಸರು ಬೇರೆ ಬೇರೆ. ಪೂಷನ್ ದೇವತೆಯು ಪಿತೃಗಳ ಬಳಿಗೆ ಮೃತನನ್ನು ಕೊಂಡೊಯ್ಯುವುದರಲ್ಲಿ ಗಟ್ಟಿಗ. ಅವನಿಗೆ ಆ ಹಾದಿಯು ಚಿರಪರಿಚಿತ. ಅವನ ಕೆಲಸ ಆರಂಭವಾಗುವುದು ಅಗ್ನಿಯ ಕೆಲಸ ಮುಗಿದ ನಂತರವೇ. ಆ ದೂರದ ಜಾಗಕ್ಕೆ ತೆರಳುತ್ತಿರುವಾಗ ಮೃತನನ್ನು ಆಯುವು ರಕ್ಷಿಸಬೇಕು (೧೦.೧೭.೪ : ಆಯುಃ ವಿಶ್ವಾಯುಃ ಪರಿ ಪಾಸತಿ ತ್ವಾ ಪೂಷಾ ತ್ವಾ ಪಾತು ಪ್ರಪಥೇ ಪುರಸ್ತಾತ್). ಇದು 'ಅಭಿನಿವೇಶ'ದ ಹೊಸ ಮಾದರಿ : ಆಯುಸ್ಸು ಮುಗಿದಿರುವವನನ್ನು ಆಯುಸ್ಸು ರಕ್ಷಿಸಬೇಕು ! ಭಯ ಮತ್ತು ಅಪಾಯ




ಇಲ್ಲದ ಹಾದಿಯಲ್ಲಿ ಮೃತನನ್ನು ಕರೆದುಕೊಂಡು ಹೋಗುವುದರಲ್ಲಿ ಪೂಷನ್ ನಿಷ್ಣಾತ; ಅವನು ಮುಂದು ಮತ್ತು ಮೃತನು ಹಿಂದು. ಪೃಥಿವಿ ಮತ್ತು ದ್ಯುಲೋಕಗಳಿಂದ ಬಹುದೂರದ ಹಾದಿಗಳೂ ಸಹ ಪೂಷನ್‌ಗೆ ತಿಳಿದಿವೆ (೬ : ಪ್ರಪಥೇ ಪಥಾಂ ಅಜನಿಷ್ಟ ಪೂಷಾ ಪ್ರಪಥೇ ದಿವಃ ಪ್ರಪಥೇ ಪೃಥಿವ್ಯಾಃ). ಪೂಷನ್‌ನ ಮಾರ್ಗದರ್ಶಿತ್ವದಲ್ಲಿ ಪಿತೃಗಳಿರುವ ಲೋಕಕ್ಕೆ ತೆರಳುವ ಮೃತನ ಪರವಾಗಿ ಮುಂದಿನ ಮಂತ್ರದಲ್ಲಿ ಸರಸ್ವತಿಯನ್ನು ಯಜ್ಞಗೃಹಕ್ಕೆ ಆಹ್ವಾನಿಸ ಲಾಗಿದೆ. ಮೃತನು ಜೀವಂತವಿದ್ದಾಗ ಆ ದೇವಿಯನ್ನು ತುಷ್ಟೀಕರಿಸಿದ್ದಾನೆ. ಈಗ ಅವಳು ಪಿತೃಗಳೊಡನೆ ಬಂದು ದರ್ಭೆಯ ಹಾಸಿನ ಮೇಲೆ ಕುಳಿತುಕೊಳ್ಳುತ್ತಾಳೆ (೮ : ...ಸ್ವಧಾಭಿರ್ದೇವಿ ಪಿತೃಭಿರ್ಮದಂತೀ । ಆಸದ್ಯ ಅಸ್ಮಿನ್ ಬರ್ಹಿಷಿ ಮಾದಯಸ್ವ ...) ಮತ್ತು ಆರೋಗ್ಯವರ್ಧಕವಾದ ಆಹಾರವನ್ನು ನೀಡುತ್ತಾಳೆ.

ಋಗ್ವೇದದಲ್ಲಿ ಸರಸ್ವತಿಯು ದೇವತೆಯೂ ಹೌದು, ನದಿಯೂ ಹೌದು. ಯಾಸ್ಕನು ತನ್ನ 'ನಿರುಕ್ತ'ದಲ್ಲಿ ಅದನ್ನು ದಾಖಲಿಸಿದ್ದಾನೆ. ನದಿಯಾಗಿ ಸ್ತುತಿಸಲ್ಪಟ್ಟಿರುವ ಸರಸ್ವತಿಯು ದೇವತೆಯಾಗಿಯೂ ಕಾಣಿಸಿಕೊಂಡಿದ್ದಾಳೆ. ಸರಸ್ವತೀ ಮತ್ತು ದೃಷದ್ವತೀ ನದಿಗಳ ತಟದಲ್ಲಿ ನಡೆಸಲಾದ ಯಜ್ಞಗಳನ್ನು ಋಗ್ವೇದವು ಹಲವೆಡೆಗಳಲ್ಲಿ ಸ್ಮರಿಸಿದೆ. ಸರಸ್ವತೀ ನದಿಯ ಪ್ರದೇಶವನ್ನು ಮನು ಬ್ರಹ್ಮಾವರ್ತವೆಂದು ಕರೆದಿದ್ದಾನೆ. ನಂತರದ ಸಾಹಿತ್ಯದಲ್ಲಿ ಗಂಗಾನದಿಗಿರುವ ಪಾರಮ್ಯವು ಋಗ್ವೇದ ದಲ್ಲಿ ಸರಸ್ವತಿಗೆ ಸಂದಿದೆ. ಇಡೀ ಋಗ್ವೇದದಲ್ಲಿ ಗಂಗೆಯ ಹೆಸರು ಬರುವುದು ಎರಡು ಕಡೆಗಳಲ್ಲಿ ಮಾತ್ರ; ಅದು ಹಾಗಾಗಲು ಕಾರಣ ಋಗ್ವೇದದ ಜನಸಮೂಹವು ಪೂರ್ವ ಭಾರತದ ಕಡೆಗೆ ಕ್ರಮಿಸಿದ್ದು ಬಹಳ ತಡವಾಗಿ. ಉಪನಿಷತ್ತುಗಳ ಕಾಲದ ಜನರು ಗಂಗಾ ಪ್ರದೇಶಕ್ಕೆ ಪ್ರವೇಶಿಸಿದ್ದರು. ಅವರಿಗೆ ಪಶ್ಚಿಮದ ಆರ್ಯಾವರ್ತವು ಜ್ಞಾನದ ಖನಿಯೆಂಬ ಭಾವನೆ ಇದ್ದಿತೆಂಬುದು ಛಾಂದೋಗ್ಯ ಉಪನಿಷತ್ತಿನಲ್ಲಿ ಉದ್ದಾಲಕ ಆರುಣಿ ಮತ್ತು ಅವನ ಮಗ ಶ್ವೇತಕೇತುವಿನ ನಡುವೆ ನಡೆಯಿತು ಎನ್ನಲಾದ ಸಂಭಾಷಣೆಯಲ್ಲಿ ತೋರಿಬರುತ್ತದೆ.

ಹದಿನೇಳನೆಯ ಸೂಕ್ತದ ಕಡೆಯ ಮಂತ್ರವು ಓಷಧಿಗಳು (ಅಂದರೆ, ಸಸ್ಯಗಳು), ಮಾತು ಮತ್ತು ನೀರು ಕ್ಷೀರೋಪೇತವಾಗಿವೆಯೆಂದು ಹೇಳುತ್ತದೆ. ಸಸ್ಯಗಳಲ್ಲಿ ಹಾಲೆಂದರೆ ಅವುಗಳಲ್ಲಿರುವ ಸಾರಭೂತ ದ್ರವ; ಮಾತಿನಲ್ಲಿ ಹಾಲೆಂದರೆ ಸಿಹಿ ಮಾತು. ನೀರಿಗೂ ಇದು ಅನ್ವಯಿಸುತ್ತದೆ. ಈ ಎಲ್ಲ 'ಸಿಹಿ'ಗಳಿಂದ ನನ್ನನ್ನು ಶುದ್ಧೀಕರಿಸು ಎಂದು ಕವಿಯು ಸರಸ್ವತಿಯನ್ನು ಕೇಳಿಕೊಳ್ಳುತ್ತಾನೆ (೧೪ : ಪಯಸ್ವತೀಃ ಓಷಧಯಃ ಪಯಸ್ವನ್ ಮಾಮಕಂ ವಚಃ । ಅಪಾಂ ಪಯಸ್ವತ್ ಇತ್ ಪಯಃ ತೇನ ಮಾ ಸಹ ಶುಂಧತ ॥).

ಮುಂದಿನ ಸೂಕ್ತವು (೧೦.೧೮) ವಿಶ್ವೇದೇವತೆ ಗಳನ್ನುದ್ದೇಶಿಸಿ ಹೇಳಿರುವಂಥದು. ಮೃತ್ಯುವಿನ ಹಿಡಿತ ದಿಂದ ತಪ್ಪಿಸಿಕೊಂಡು, ಮಕ್ಕಳು ಮತ್ತು ಬುಡಕಟ್ಟಿನ ಧೀರರೊಡನೆ ಬಾಳುವ ನಡೆಸಬೇಕೆಂಬ ವಾಂಛೆಯು ಮೊದಲ ಮಂತ್ರದಲ್ಲಿ ವ್ಯಕ್ತವಾಗಿದೆ. ಮೃತ್ಯುವು ಬೇರೆ ದೇವತೆಗಳು ಹೋಗುವ ಹಾದಿಗೆ ಹೋಗದೆ ತನ್ನದೇ

ಪ್ರತ್ಯೇಕ ಹಾದಿಯಲ್ಲಿ ಹೋಗಬೇಕು. ಕಣ್ಣು ಮತ್ತು ಕಿವಿ ಇರುವ ಮೃತ್ಯುವಿಗೆ ಇದು ತಿಳಿಯುತ್ತದೆಯಾದ್ದರಿಂದ ಮಕ್ಕಳು ಮತ್ತು ಬುಡಕಟ್ಟಿನ ಧೀರರನ್ನು ಮುಟ್ಟದಿರಬೇಕೆಂಬುದೂ ತಿಳಿಯುತ್ತದೆ (೧ : ಪರಂ ಮೃತ್ಯೋ ಅನುಪರೇಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್ । ಚಕ್ಷುಷ್ಮತೇ ಶೃಣ್ವತೇ ತೇ ಬ್ರವೀಮಿ ಮಾ ನಃ ಪ್ರಜಾಂ ರೀರಿಷೋ ಮೋತ ವೀರಾನ್ ॥). ಮೃತ್ಯುವಿನ ಹಾದಿಯಲ್ಲಿ ಹೋಗದೆ, ಅವನಿಗೆ ಸಿಗದೆ ಬಂದಿರುವ ಮೃತನ ಸಂಬಂಧಿಗಳಿಗೆ ಮುಂದಿನ ಮಂತ್ರವು ಶುಭವನ್ನು ಕೋರುತ್ತದೆ : "ನಿಮ್ಮ ಮಕ್ಕಳು ಮತ್ತು ಸಂಪತ್ತು ಅಬಾಧಿತವಾಗಿರಲಿ. ಅವರು ಶುದ್ಧರಾಗಿ ಯಜ್ಞ ಮಾಡಲು ಅರ್ಹತೆ ಪಡೆದಿದ್ದಾರೆ" (೨ : ...ಆಪ್ಯಾಯಮಾನಾಃ ಪ್ರಜಾಯಾ ಧನೇನ ಶುದ್ಧಾಃ ಪೂತಾ ಭವತ ಯಜ್ಞಿಯಾಸಃ).

> **ತಾಜ್‌ಮಹಲ್**
>
> ಪತ್ನಿ
> ನಿಧನಳಾಗಿದ್ದಕ್ಕೆ
> ಪತಿ
> ಧರಿಸಿರುವ
> ಬಿಳಿ ಸೀರೆ !
>
> ಡಾ॥ ವಿ. ಪುಂಗಳೇಂದಿ
> ಸಿರುಗುಪ್ಪ – ೫೮೩ ೧೨೧

ಅಂದರೆ, ಸಾವಿಗೀಡಾದವರಿಗೂ ಆಗಿಲ್ಲದಿರುವವರಿಗೂ ನಡುವೆ ಒಂದು ರೇಖೆ ಇದೆ. ಬದುಕಿರುವವರು ಕುಣಿಯಬಹುದು, ನಗಬಹುದು, ದೀರ್ಘಕಾಲದ ಬಾಳ್ವೆಗೆ ಆಸೆ ಇರಿಸಿಕೊಳ್ಳಬಹುದು (೩ : ಇಮೇ ಜೀವಾ ವಿ ಮೃತೈಃ ಅವವೃತ್ರನ್ ಅಭೂತ್ ಭದ್ರಾ ದೇವಹೂತಿರ್ನೋ ಅದ್ಯ। ಪ್ರಾಂಚೋ ಅಗಾಮ ನೃತಯೇ ಹಸಾಯ ದ್ರಾಘೀಯ ಆಯುಃ ಪ್ರತರಂ ದಧಾನಾಃ ॥). ಸಾವಿನ ಸಂಕಟದ ಚಿತ್ರ ಇಲ್ಲಿದೆ. ಏನೆಲ್ಲಾ ವಸ್ತುಗಳನ್ನು, ಪ್ರಿಯರನ್ನು ಮತ್ತು ಸೌಖ್ಯವನ್ನು ಕಳೆದುಕೊಂಡು ಬಿಡುತ್ತೇವಲ್ಲಾ ಎಂಬ ತುಮುಲದ ಭಾವನೆ ಗಾಢವಾಗಿದೆ. ಮೃತ್ಯುವಿನ ಸುಳಿವಿಲ್ಲದ ಈ ಕಡೆಯಲ್ಲಿ ಬದುಕಿರುವವರಿಗೆ ಮನೆ, ಮಠ, ಎಲ್ಲಾ ಕಟ್ಟಬಹುದು. ಬದುಕಿರುವವರನ್ನು ಉಳಿದು ಬೇರಾರೂ ಅಲ್ಲಿ ಸುಳಿಯುವಂತಿಲ್ಲ. ಅವರು ನೂರು ಶರತ್ಕಾಲಗಳನ್ನು ಇಲ್ಲೇ ಕಳೆಯುತ್ತಾರೆ. ಮೃತ್ಯುವನ್ನು ಧಿಕ್ಕರಿಸಿರುವಂಥವರು ಅವರು. ಆ ಮೃತ್ಯುವನ್ನು ಇವರು ದೊಡ್ಡ ಬೆಟ್ಟದಡಿ ಹೂತುಬಿಟ್ಟಿದ್ದಾರೆ. ಅಂದರೆ, ಮೃತ್ಯುವು ಅವರನ್ನು ಸೆಳೆಯ ಲಾಗದು (೪ : ಇಮಂ ಜೀವೇಭ್ಯಃ ಪರಿಧಿಂ ದಧಾಮಿ ಮಾ ಏಷಾಂ ನು ಗಾತ್ ಅಪರೋ ಅರ್ಥಮೇತಂ। ಶತಂ ಜೀವಂತು ಶರದಃ ಪುರೂಚೀಃ ಅಂತಃ ಮೃತ್ಯುಂ ದಧತಾಂ ಪರ್ವತೇನ ॥). ಈಗಿರುವವನು ಇನ್ನೊಂದು ಘಳಿಗೆಗೆ ಇಲ್ಲದಂತಾಗುವ ವಿದ್ಯಮಾನವು ಕವಿಯನ್ನು ಸಾಕಷ್ಟು ಬಾಧಿಸಿರುವಂತಿದೆ. ಒಂದು ದಿನ ಕಳೆದ ಮೇಲೆ ಇನ್ನೊಂದು ದಿನ, ಆಮೇಲೆ ಮತ್ತೊಂದು ದಿನ. ಅದು ಋತುಗಳು ಒಂದಾದಮೇಲೆ ಒಂದರಂತೆ ಕ್ರಮವಾಗಿ ಬರುವುದಕ್ಕೆ ಸಮಾನವಾದ್ದು. ಮುಂದಿನದು ಹಿಂದಿನದನ್ನು ಹಿಂದಿಕ್ಕಿ ಬಂದೇ ತೀರುತ್ತದೆ. ಇದರಲ್ಲೇನೋ ನಿಯಮವಿದೆ ಮತ್ತು ಅದನ್ನು ಉಲ್ಲಂಘಿಸಲಾಗದು (೫ : ಯಥಾ ಅಹಾನಿ ಅನುಪೂರ್ವಂ ಭವಂತಿ ಯಥಾ ಋತವಃ ಋತುಭಿಃ ಯಾಂತಿ ಸಾಧು। ಯಥಾ ನ ಪೂರ್ವಂ ಅಪರಃ ಜಹಾತಿ ಧಾತಃ ಆಯೂಂಷಿ ಕಲ್ಪಯ ಏಷಾಂ ॥). ದೀರ್ಘಕಾಲ ಬಾಳಬೇಕು, ವೃದ್ಧಾಪ್ಯವು ಹಸನಾಗಿರಬೇಕು; ಸಾವಿನಲ್ಲೂ ಕ್ರಮವಿರಬೇಕು. ವೃದ್ಧರಿಗಿಂತ ಮುಂಚೆಯೇ ಯುವಕರು ಗತಿಸಬಾರದು. ಇದೆಲ್ಲಾ ನಡೆಯುವುದಾದರೂ ಹೇಗೆ ? ತ್ವಷ್ಟ್ರವು ಒಳಿತನ್ನೆಲ್ಲಾ ನಿಯಂತ್ರಿಸುವವನು; ಅವನ ಸಹಕಾರವಿದ್ದರೆ ದೀರ್ಘಾಯುಷ್ಯ ಮತ್ತು ಸೊಗಸು ಲಭಿಸಿಯೇ ತೀರುತ್ತದೆ (೬. ...ತ್ವಷ್ಟಾ ಸುಜನಿಮಾ ಸಜೋಷಾ ದೀರ್ಘಮಾಯುಃ ಕರತಿ ಜೀವಸೇ ವಃ ॥).

ಸಾಮಾಜಿಕ ಮತ್ತು ಸಾಂಸ್ಕೃತಿಕ ಇತಿಹಾಸದ ದೃಷ್ಟಿಯಿಂದ ಮುಂದಿನ ಮಂತ್ರಕ್ಕೆ ಮಹತ್ವವಿದೆ. ವೇದಕಾಲೀನ ಪದ್ಧತಿಗಳಿಗೆ ಭಿನ್ನವಾಗಿ ಉತ್ತರೋತ್ತರ ನಮ್ಮಲ್ಲಿ ಅನೇಕ ಕ್ರೂರ, ಅಮಾನವೀಯ ಪದ್ಧತಿಗಳು ಜಾರಿಗೆ ಬಂದಿವೆ. ಈಗಲೂ ಅವಿನ್ನೂ ಪೂರ್ತಿಯಾಗಿ ತೊಡೆದುಹಾಕಲ್ಪಟ್ಟಿಲ್ಲ. ನಮ್ಮ ಸಂಪ್ರದಾಯವು ವೇದಾಧಾರಿತವೆಂದು ಹೇಳಿಕೊಳ್ಳುತ್ತೇವೆ, ಆದರೆ ಅನೇಕ ಆಚರಣೆಗಳು ಅದಕ್ಕೆ ತೀರಾ ವಿರುದ್ಧವಾದವು. ವೇದವನ್ನೇ ಆಧರಿಸಿ ಧರ್ಮಶಾಸ್ತ್ರಗಳು ರಚಿತವಾಗಿವೆಯೆಂಬ ಮಾತು ಆ ಗ್ರಂಥಗಳಲ್ಲಿ ಸದಾ ಬರುತ್ತವೆ. ಆದರೆ ವಸ್ತುಸ್ಥಿತಿ ಹಾಗಿಲ್ಲ. ವೇದಕಾಲೀನ ಸಮಾಜದಲ್ಲಿ ಮಹಿಳೆಯ ಪತಿಯು ಗತಿಸಿದಾಗ ಅವಳ ಮೇಲೆ ಅನಿಷ್ಟದ ಆಚರಣೆಗಳನ್ನು ಹೇರುತ್ತಿರಲಿಲ್ಲ. ಎಂದಾದರೂ ಗತಿಸುವುದು ಅನಿವಾರ್ಯ, ಆದರೆ ಜೀವಂತ ಇರುವವರು ತಲೆಯ ಮೇಲೆ ಕಸ ಸುರಿದುಕೊಂಡು ಬಾಳಬೇಕೆಂಬ ಅಬದ್ಧ ಪದ್ಧತಿ ಇರಲಿಲ್ಲ. ಗತಿಸಿದವನ ಪತ್ನಿಯ ಮೇಲೆ ಯಾವ ಕಳಂಕವನ್ನೂ ಹೇರದೆ ಋಗ್ವೇದದ ಕವಿ ಹೇಳುತ್ತಾನೆ : "ಅವಿಧವೆಯರಾದ ಈ ನಾರಿಯರು ಸುಪತ್ನಿಯರಾಗಿದ್ದವರು. ಅವರ ಪತಿಗಳೂ ಒಳ್ಳೆಯ ಬಾಳುವೆ ನಡೆಸಿದವರೇ. ಈ ನಾರಿಯರು ತಮ್ಮ ತಮ್ಮ ಮನೆಗಳಿಗೆ ತೆರಳಿ ಗಂಧಾದಿ ದ್ರವ್ಯಗಳನ್ನು ಪೂಸಿಕೊಳ್ಳಲಿ. ಒಳ್ಳೆಯ ಆಭರಣಗಳು, ಕಣ್ಣೀರು ಸುರಿಸದ ಕಣ್ಣುಗಳು, ಪರಿತಾಪ ರಹಿತರು, ಅವರ ಪತಿಯನ್ನಿರಿಸಿರುವ ಜಾಗಕ್ಕೆ ಹೋಗಿಬರಲಿ." (೭ : ಇಮಾ ನಾರೀರವಿಧವಾಃ ಸುಪತ್ನೀಃ ಆಂಜನೇನ ಸರ್ಪಿಷಾ ಸಂ ವಿಶಂತು। ಅನಶ್ರವಃ ಅನಮೀವಾಃ ಸುರತ್ನಾಃ ಆ ರೋಹಂತು ಜನಯೋ ಯೋನಿಂ ಅಗ್ರೇ ॥). ಇಲ್ಲಿ ಎರಡು ಪದಗಳ ಅರ್ಥವನ್ನು ಸರಿಯಾಗಿ ಗ್ರಹಿಸಬೇಕು : 'ಯೋನಿಂ' ಅಂದರೆ 'ಮನೆಯನ್ನು' ಎಂದರ್ಥ. ಮೂಲ ಆವಾಸಸ್ಥಾನ ಎಂಬರ್ಥವಿದೆ. "ಅಗ್ರೇ" ಎಂಬುದಕ್ಕೆ 'ಮುಂಚೆ' ಎಂಬರ್ಥವಿರುವಂತೆ 'ಮುಂದೆ' ಎಂಬರ್ಥವೂ ಉಂಟು. ಅದನ್ನು "ಎಲ್ಲರಿಗಿಂತಲೂ ಮುಂಚೆ " (ಸರ್ವೇಷಾಂ ಪ್ರಥಮತಃ ಏವ) ಎಂದು ಸಾಯಣನು ವ್ಯಾಖ್ಯಾನಿಸಿದ್ದಾನೆ. ಯಾವ ಅರ್ಥವನ್ನು ಮಾನ್ಯ ಮಾಡಿದರೂ ವಿಧವೆಗೆ ನಿಷೇಧಗಳನ್ನಂತೂ ಹೇರಲಾಗಿಲ್ಲವೆಂಬುದು ಸ್ಪಷ್ಟವಿದೆ. ಹೀಗಿದ್ದಂತಹ ದೇಶದಲ್ಲಿ ಸತಿಪದ್ಧತಿಯು ಆಚರಣೆಯಲ್ಲಿದ್ದಿತೆಂದರೆ ಏನು ಹೇಳುವುದು ! ಋಗ್ವೇದವು ಜೀವನವನ್ನು ಶ್ರೇಯಸ್ಕರವೆಂದು ಪರಿಗಣಿಸುತ್ತದೆಯೇ ವಿನಾ ಎಲ್ಲಾ ನಶ್ವರವೆಂದು ಬೊಬ್ಬೆ ಹಾಕುವುದಿಲ್ಲ. "ವೈದಿಕ ದಿನಗಳಿಗೆ" ಹಿಂದಿರುಗಬೇಕೆನ್ನುವವರು ಮೊದಲು ಜೀವನವು ಮೌಲಿಕವಾದುದೆಂಬುದನ್ನು ಅಂಗೀಕರಿಸಬೇಕು. ಮುಂದಿನ ಮಂತ್ರವು ಪತಿಯೆದುರು ಉಪಸ್ಥಿತಳಾದ ಪತ್ನಿಯನ್ನು ಕುರಿತು "ಬಾ, ನಿತ್ಯದ ಜೀವನಕ್ಕೆ ಹಿಂದಿರುಗು. ಅವನೀಗ ನಿರ್ಜೀವಿಯಾಗಿದ್ದಾನೆ. ಈವರೆಗೆ ಅವನೊಡನಿದ್ದುದು ನಿನ್ನ ಜೀವನದ ಒಂದು ಭಾಗ. ಅವನು ನಿನ್ನನ್ನು ಪ್ರೀತಿಸಿ ಮುನ್ನಡೆಸಿದ್ದಾನೆ" ಎಂದು ಹೇಳುತ್ತದೆ (೮ : ಉದೀರ್ಷ್ವ ನಾರಿ ಅಭಿ ಜೀವಲೋಕಂ...).

ಮೃತನ ಆಯುಧಗಳಿವೆ : ವಿಶೇಷತಃ ಅವನ ಬಿಲ್ಲು. ಅದು ಶಕ್ತಿ ಮತ್ತು ವಿಜಯದ ಸಾಧನ. ಅದನ್ನು ಮೃತನ ಕೈಯಿಂದ ಪಡೆದುಕೊಳ್ಳುವುದು ವಿರೋಧಿಗಳನ್ನು ಹಿಮ್ಮೆಟ್ಟಿಸಲು ಅಗತ್ಯವಾದ ಆಯುಧವನ್ನು ಹೊಂದಿದಂತೆ. ಬೇಟೆಯಾಡುವುದು ಋಗ್ವೇದದ ಕಾಲದಲ್ಲಿ ಪ್ರಚಲಿತವಾಗಿತ್ತು ಎಂಬುದಂತೂ ಸ್ಪಷ್ಟವೇ ಆಗಿದೆ.

ಮುಂದಿನ ಮಂತ್ರವು ಮೃತನನ್ನು ಉದ್ದೇಶಿಸಿ ಒಂದು ರೀತಿ ಸಾಂತ್ವನವನ್ನು ಹೇಳುವಂಥದು : "ಭೂಮಿತಾಯಿಯ ಮಡಿಲಲ್ಲಿ ಸೇರಿಕೊ. ಆ ಭೂಮಿಯೋ ಅತ್ಯಗಾಧವಾದ್ದು, ಸುಖ ನೀಡುವಂಥದು. ಚಿರಯುವತಿ ಈ ಭೂಮಿ. ಆ ಮಾತೆಯು ನಿನ್ನನ್ನು ನಿರ್ಋತಿಯಿಂದ ರಕ್ಷಿಸಲಿ" (೧೦ : ಉಪ ಸರ್ಪ ಮಾತರಂ ಭೂಮಿಂ ಏತಾಂ ಉರುವ್ಯಚಸಂ ಪೃಥಿವೀಂ ಸುಶೇವಾಂ। ಊರ್ಣಮ್ರದಾ ಯುವತಿಃ ದಕ್ಷಿಣಾ ವತೇ ಏಷಾ ತ್ವಾ ಪಾತು ನಿರ್ಋತೇಃ ಉಪಸ್ಥಾತ್ ॥). ನಿರ್ಋತಿಯು ಮೃತ್ಯು ದೇವತೆ. ನಂತರ ಭೂಮಿಯನ್ನುದ್ದೇಶಿಸಿ ಕವಿಯು ಹೇಳುತ್ತಾನೆ : "ಅವನ ಮೇಲೆ ಭಾರವಾಗಬೇಡ, ತಾಯೆ, ಹೆಚ್ಚಾಗಿ ಒತ್ತಬೇಡ. ತಾಯಿಯು ಸೆರಗಿನಿಂದ ಮಗುವನ್ನು ಪೋಷಿಸುವಂತೆ ನೀನಿವನನ್ನು ಚೆನ್ನಾಗಿ ನೋಡಿಕೊ" (೧೧ : ...ಮಾತಾ ಪುತ್ರಂ ಯಥಾ ಸಿಚಾ ಅಭಿ ಏನಂ ಭೂಮೇ ಊರ್ಣುಹಿ). "ಭೂಮಿಯು ಏರಿಳಿತಗಳಿಂದ ಅವನಿಗೆ ತೊಂದರೆಯುಂಟುಮಾಡದಿರಲಿ. ಸಾವಿರ ಮಣ್ಣಿನ ಹೋಳಕೆಗಳು ಬೇಕಾದರೆ ಅವನ ಮೇಲೆ ಬೀಳಲಿ, ಆದರೆ ಅವೆಲ್ಲಾ ಅವನಿಗೆ ಸೌಖ್ಯ ನೀಡುವ ಮನೆಯಂತಿರಲಿ. ಸದಾ ಆ ಮನೆಯಲ್ಲಿ ಉಳಿಯುವ ಇವನು ದಷ್ಟಪುಷ್ಟವಾಗಿ ಬಾಳಲಿ" (೧೨ : ...ತೇ ಗೃಹಾಸೋ ಘೃತಶ್ಚುತೋ ಭವಂತು ವಿಶ್ವಾಹಾ ಅಸ್ಮೈ ಶರಣಾಃ ಸಂತು ಅತ್ರ ॥). ಸಾವು ವಿಸ್ಮಯಕರ, ಆದರೆ ಹಾಗೆಂದು ಜೀವನವನ್ನು ನಿಕೃಷ್ಟವೆಂದು ಅಲ್ಲಗಳೆಯಲಾಗದು. ಇದು ಋಗ್ವೇದದ ಸಂದೇಶ. ಅದನ್ನು ಕಡೆಯ ಮಂತ್ರದಲ್ಲಿ (೧೪ : ಪ್ರತೀಚೀನೇ ಮಾಂ ಅಹನಿ ಇಷ್ವಾಃ ಪರ್ಣಮಿವ ಆ ದಧುಃ। ಪ್ರತೀಚೀ ಜಗ್ರಭಾ ವಾಚಮಶ್ವಂ ರಶನಯಾ ಯಥಾ ॥) ಸೂಚಿಸಲಾಗಿದೆ. ತಾನೆಷ್ಟು ಸೂಕ್ತವಾದೊಂದು ಪದ್ಯವನ್ನು ರಚಿಸಿದೆನೆಂದು ಕವಿಯು ಸಂತೋಷಭರಿತನಾಗಿದ್ದಾನೆ. ಕುದುರೆ ಸವಾರನು ಲಗಾಮನ್ನು ಹಿಡಿದು ಚೆನ್ನಾಗಿ ಕುದುರೆಯನ್ನು ಮುನ್ನಡೆಸುವಂತೆ ಕವಿಯು ಪದ ಗಳನ್ನು ಯಥಾವತ್ತಾಗಿ ಪೋಣಿಸಿದ್ದಾನೆ ಮತ್ತು ಸಾವಿನ ಸಂದರ್ಭಕ್ಕೆ ಯುಕ್ತವಾದ ರೀತಿಯಲ್ಲಿ ಕವನವನ್ನು ಹೆಣೆದಿದ್ದಾನೆ. ಸಾವಿನಲ್ಲೂ ಕವಿಗೆ ತನ್ನದೇ ಸಂಭ್ರಮ !

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಭಾರತೀಯ ಇತಿಹಾಸದ ಅಭ್ಯಾಸಿಗಳ ಪಾಲಿಗೆ ಗುರುಗಳ ಗುರು



‘ಹಿಸ್ಟರಿ ಆಫ್ ಮಾಡರ್ನ್ ಇಂಡಿಯಾ’ ಕೃತಿಯು ಪಠ್ಯಪುಸ್ತಕವಲ್ಲ. ಅದೊಂದು ಮಹತ್ವದ ಐತಿಹಾಸಿಕ ಕೃತಿ. ಅದನ್ನು ಎಲ್ಲ ಕಾಲದ ವಿದ್ಯಾರ್ಥಿಗಳು ಮಾತ್ರವಲ್ಲದೆ ಇತಿಹಾಸದ ಬೋಧಕರೂ ಅಭ್ಯಾಸ ಮಾಡಬೇಕಾದ್ದು ಅವಶ್ಯಕ. ಇತಿಹಾಸದ ಕೃತಿಯು ಹೇಗಿರಬೇಕು ಎಂಬುದಕ್ಕೆ ಅದು ಒಂದು ಮಾದರಿ. ಅಕಸ್ಮಾತ್ತಾಗಿ ಪಠ್ಯಪುಸ್ತಕವಾಗಿದ್ದ ಅದನ್ನು ಪಠ್ಯಪುಸ್ತಕವಾಗಿ ಉಳಿಸಿ ಕೊಳ್ಳದಿದ್ದರೂ, ಈಗ ಅದು ವಿದ್ವಾಂಸರ ಕೈಗಳಲ್ಲಿ ಉಳಿದಿದೆ. ಮುಘಲ್ ಸಾಮ್ರಾಜ್ಯದ ಪತನದ ಹಿನ್ನೆಲೆಯಲ್ಲಿ ಭಾರತೀಯ ಸಂಸ್ಥಾನಗಳು ಮತ್ತು ಸಮಾಜದ ವಿಶ್ಲೇಷಣೆ ಮಾಡುತ್ತಲೇ, ಯುರೋಪಿನ ವ್ಯಾಪಾರಿಗಳು ಭಾರತಕ್ಕೆ ಪ್ರವೇಶಿಸಿ, ಸ್ಥಳೀಯ ಆಡಳಿತದಲ್ಲಿ ಪ್ರವೇಶ ಪಡೆದು, ಕ್ರಮೇಣ ದೇಶವನ್ನು ವಶಪಡಿಸಿಕೊಂಡ ಬಗೆಯನ್ನು ಯಾವುದೇ ಉತ್ಪ್ರೇಕ್ಷೆಗೆ ಅವಕಾಶವಿಲ್ಲದಂತೆ ಮನದಟ್ಟು ಮಾಡಿದ್ದಾರೆ. ಹೀಗೆ ಯೂರೋಪಿಯನ್ನರ ವಶವಾದ ನಂತರ ಭಾರತದ ಸಮಾಜ ಮತ್ತು ಸಂಸ್ಕೃತಿಗಳು ಬದಲಾದ ಬಗೆಯು ವಿಚಾರಪೂರಿತ ವಾಗಿದೆ. ಆಗ ಕಾಣಿಸಿಕೊಂಡ ಸಾಂಸ್ಕೃತಿಕ ಜಾಗೃತಿ, ಸಾಮಾಜಿಕ ಜಾಗೃತಿ ಮತ್ತು ಈ ನಡುವಿನ ಆರ್ಥಿಕ ಪರಿಣಾಮಗಳು ರಾಷ್ಟ್ರೀಯ ಚಳುವಳಿಗೆ ಅವಕಾಶ ಮಾಡಿಕೊಟ್ಟ ಬಗೆಯನ್ನು ಖಚಿತ ಮಾತುಗಳಲ್ಲಿ ಬಿಪಿನ್‌ಚಂದ್ರ ವಿವರಿಸಿದ್ದಾರೆ. ರಾಷ್ಟ್ರೀಯ ಚಳುವಳಿಯಲ್ಲಿ ವಿವಿಧ ಸಂಘಟನೆಗಳ ಸ್ವಹಿತಾಸಕ್ತಿ ಮತ್ತು ಪರ ಮತ್ತು ವಿರುದ್ಧದ ಹೋರಾಟ ಇತ್ಯಾದಿಗಳು ಇತಿಹಾಸದ ವಿದ್ಯಾರ್ಥಿಯು ಅವಶ್ಯಕವಾಗಿ ತಿಳಿಯಬೇಕಾಗಿರುವ ಸಂಗತಿಗಳು.

**ಡಾ|| ಎಚ್. ಎಸ್. ಗೋಪಾಲ ರಾವ್**

ಓರಿಯಂಟಲಿಸ್ಟರ ನಂತರ ಭಾರತದ ಇತಿಹಾಸವನ್ನು ಆಳವಾಗಿ ಅಭ್ಯಾಸ ಮಾಡಿದ, ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಇತಿಹಾಸದ ಆಸಕ್ತರಿಗೂ ಇತಿಹಾಸದ ಅಧ್ಯಯನದ ಮಹತ್ವವನ್ನು ವಿವರಿಸಿದ ಕೆಲವೇ ವಿದ್ವಾಂಸರ ಪೈಕಿ ಮೊದಲ ಸಾಲಿನಲ್ಲಿ ನಿಲ್ಲುವವರು ಬಿಪಿನ್‌ಚಂದ್ರ. ಇತಿಹಾಸದ ಗಂಭೀರ ವಿದ್ಯಾರ್ಥಿಗಳಿಗೆ ಇವರ ಹೆಸರು ಮಾತ್ರವಲ್ಲದೆ ಇವರ ಕೃತಿಗಳೂ ಚಿರಪರಿಚಿತ. ಇವರ ಕೃತಿಗಳನ್ನು ಗಮನಿಸದೆ ಭಾರತದ ಸ್ವಾತಂತ್ರ್ಯ ಹೋರಾಟ ಮತ್ತು ಸ್ವಾತಂತ್ರ್ಯಾನಂತರದ ಭಾರತದ ಇತಿಹಾಸದ ಬಗ್ಗೆ ಚರ್ಚಿಸುವುದು ಸುಲಭ ಎನಿಸುವುದಿಲ್ಲ. ಇವರ ‘ಹಿಸ್ಟರಿ ಆಫ್ ಮಾಡರ್ನ್ ಇಂಡಿಯಾ’ ಕೃತಿಯು ಎನ್.ಸಿ.ಇ.ಆರ್.ಟಿ.ಯ ಪಠ್ಯವಾಗಿತ್ತು. ಆ ಕೃತಿಯು ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಇತಿಹಾಸದ ವಿದ್ಯಾರ್ಥಿಗಳಿಗೆ ಮಾರ್ಗದರ್ಶಿಯೂ ಆಗಿದೆ. ಅದನ್ನು ಕನ್ನಡಕ್ಕೆ ಅನುವಾದಿಸಿದ ಸಾರ್ಥಕ ಮನೋಭಾವ ನನ್ನದು.

ಗುರುಗಳ ಗುರುವಾಗಿದ್ದ ಬಿಪಿನ್‌ಚಂದ್ರ ಅವರು ಹಿಮಾಚಲ ಪ್ರದೇಶದ ಕಾಂಗ್ರಾದಲ್ಲಿ ಹುಟ್ಟಿದವರು. ಅವರು ಹುಟ್ಟಿದಾಗ ಕಾಂಗ್ರಾ ಬ್ರಿಟಿಷರ ಆಳ್ವಿಕೆಗೆ ಸೇರಿದ್ದ ಪಂಜಾಬ್‌ನ ಭಾಗವಾಗಿತ್ತು. ಲಾಹೋರ್, ಅಮೆರಿಕಾದ ಸಂಯುಕ್ತ ಸಂಸ್ಥಾನದ ಸ್ಟಾನ್‌ಫೋರ್ಡ್ ವಿಶ್ವವಿದ್ಯಾಲಯದಲ್ಲಿ ವಿದ್ಯಾಭ್ಯಾಸ ಮುಂದುವರಿಸಿ, ದೆಹಲಿ ವಿಶ್ವವಿದ್ಯಾಲಯದಿಂದ ಪಿಎಚ್.ಡಿ., ಪದವಿ ಗಳಿಸಿದ ಬಿಪಿನ್‌ಚಂದ್ರ ಕೆಲವು ಕಾಲ ದೆಹಲಿಯ ಹಿಂದೂ ಕಾಲೇಜಿನಲ್ಲಿ ಇತಿಹಾಸದ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ, ಅಲ್ಲೇ ಪ್ರವಾಚಕರಾಗಿ ಮುಂದುವರಿದರು. ದೆಹಲಿಯಲ್ಲಿ ಜವಾಹರಲಾಲ್ ನೆಹರೂ ವಿಶ್ವವಿದ್ಯಾಲಯ (ಜೆ.ಎನ್.ಯು.)ದ ಆರಂಭದಲ್ಲೇ ಇತಿಹಾಸ ವಿಭಾಗದ ಪ್ರಾಧ್ಯಾಪಕರಾದರು. ಅಲ್ಲಿ ಅವರೇ ಆರಂಭಿಸಿದ್ದ ‘ಎನ್‌ಕ್ವೈರಿ’ ನಿಯತಕಾಲಿಕೆಯ ಸಂಪಾದಕರಾಗಿ ದೀರ್ಘಕಾಲ ಸೇವೆ ಸಲ್ಲಿಸಿದ ಬಿಪಿನ್‌ಚಂದ್ರ, ೨೦೧೪ರ ಆಗಸ್ಟ್ ೩೦ರ ಬೆಳಗಿನ ಜಾವ ನಿದ್ದೆಯಲ್ಲೇ ಚಿರನಿದ್ರೆಗೆ ಜಾರಿದರು. ಪದ್ಮವಿಭೂಷಣ ಪ್ರಶಸ್ತಿ ಪುರಸ್ಕೃತರಾದ ಬಿಪಿನ್‌ಚಂದ್ರ ತಮ್ಮ ಬದುಕಿನ ಅರ್ಧ ಭಾಗವನ್ನು ಇತಿಹಾಸ ಬೋಧನೆಗೇ ಮೀಸಲಾಗಿಟ್ಟಿದ್ದರು.

ಬಿಪಿನ್‌ಚಂದ್ರ ಅವರ ಕೃತಿಗಳು ವಿದ್ವಾಂಸರಿಗೆ ಮಾತ್ರ ಸೀಮಿತವಾಗಿರಲಿಲ್ಲ. ಇತಿಹಾಸದ ಬಗ್ಗೆ ಆಸಕ್ತಿ ಇದ್ದ ಎಲ್ಲರಿಗೂ ಬಿಪಿನ್‌ಚಂದ್ರ ಪ್ರಿಯರಾಗಿದ್ದರು. ಈಗಿನ ಹಲವು ಇತಿಹಾಸಕಾರರಿಗೆ ಗುರುವಾಗಿದ್ದ ಬಿಪಿನ್‌ಚಂದ್ರ ಇತಿಹಾಸವನ್ನು ಆರ್ಥಿಕ ಮತ್ತು ಸಾಮಾಜಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಿ, ಹೊಸದೊಂದು ಪಂಥವನ್ನು ಸೃಷ್ಟಿಸಿದ್ದಾರೆ. ತಮ್ಮ ಕೃತಿಗಳ ಮೂಲಕ ಮಾತ್ರವಲ್ಲದೆ, ಭಾಷಣಗಳ ಮೂಲಕವೂ ಜನರನ್ನು ತಲುಪಿದ್ದ ಬಿಪಿನ್‌ಚಂದ್ರರ ಹಲವು ಶಿಷ್ಯರು ಈಗಲೂ ಇತಿಹಾಸದ ಅಧ್ಯಯನ ಮತ್ತು ಬೋಧನೆ ಗಳಲ್ಲಿ ಕ್ರಿಯಾಶೀಲರಾಗಿದ್ದಾರೆಂದರೆ ಅದಕ್ಕೆ ಕಾರಣ ಬಹುತೇಕ ಅವರ ಗುರುಗಳ ಪ್ರೇರಣೆ ಮತ್ತು ಪ್ರಭಾವ. ಸಾಮಾನ್ಯವಾಗಿ ಅವರನ್ನು ಎಡಪಂಥೀಯ ಇತಿಹಾಸಕಾರ ಎಂದು

ಗುರುತಿಸುವ ಪರಿಪಾಠವಿದೆ. ಅವರು ಬಹುತೇಕ ಎಲ್ಲ ಸಿದ್ಧಾಂತಗಳನ್ನೂ ಮೀರಿದ ಶುದ್ಧ ಇತಿಹಾಸಕಾರ. ಇತಿಹಾಸವನ್ನು ಆರ್ಥಿಕ ಮತ್ತು ಸಾಮಾಜಿಕ ಹಿನ್ನೆಲೆಯಲ್ಲಿ ಮತ್ತು ಸಾಮಾನ್ಯ ಜನರನ್ನೂ ಒಳಗೊಂಡಂತೆ ಅಭ್ಯಾಸ ಮಾಡುವವರನ್ನು ಎಡಪಂಥೀಯರು ಎಂಬ ಹಣೆಪಟ್ಟಿಯೊಂದಿಗೆ ಗುರುತಿಸುವುದಾದರೆ ಬಿಪಿನ್‌ಚಂದ್ರ ನಿಜಕ್ಕೂ ಎಡಪಂಥೀಯರು. ಅವರಿಗೆ ಸಮಗ್ರ ಇತಿಹಾಸದ ಬಗ್ಗೆ ಮೋಹವಿದ್ದುದನ್ನು ಅವರ ಬಹುತೇಕ ಎಲ್ಲ ಕೃತಿಗಳಲ್ಲೂ ಕಾಣಬಹುದು. ತಮ್ಮ ವಿದ್ಯಾರ್ಥಿಜೀವನದಲ್ಲೇ ಮಾರ್ಕ್ಸ್‌ವಾದದತ್ತ ಆಕರ್ಷಿತರಾಗಿದ್ದ ಬಿಪಿನ್‌ಚಂದ್ರ ಭಾರತಕ್ಕೆ ಸ್ವಾತಂತ್ರ್ಯ ಬಂದ ಸಂದರ್ಭದಲ್ಲಿ ವಸಾಹತುಶಾಹಿ ಮತ್ತು ಧಾರ್ಮಿಕ ಇತಿಹಾಸದ ಕಟುವಿಮರ್ಶಕರಾಗಿದ್ದರು. ಸಾಮ್ರಾಜ್ಯಶಾಹಿಯನ್ನು ವಿರೋಧಿಸುತ್ತಿದ್ದ ಬಿಪಿನ್‌ಚಂದ್ರ ಆರಂಭದಿಂದಲೂ ಪ್ರಜಾಪ್ರಭುತ್ವವಾದಿಯಾಗಿದ್ದರು. ವಿದ್ಯಾರ್ಥಿ ಜೀವನದಲ್ಲೇ ಸಮಾಜವಾದದತ್ತ ಆಕರ್ಷಿತರಾಗಿದ್ದ ಬಿಪಿನ್‌ಚಂದ್ರ, ಎಂಜಿನಿಯರಿಂಗ್ ಶಿಕ್ಷಣಕ್ಕೆ ದೊರಕಿದ್ದ ಅವಕಾಶವನ್ನು ನಿರಾಕರಿಸಿ ಇತಿಹಾಸದತ್ತ ಆಕರ್ಷಿತರಾದದ್ದು ಇತಿಹಾಸಕಾರರಿಗೆ ಸಂತೋಷದ ವಿಷಯ.

ಬಿಪಿನ್‌ಚಂದ್ರ ಅವರ ಕೃತಿಗಳ ಹೆಸರುಗಳನ್ನು ಗಮನಿಸಿದಾಗ ಅವರಿಗೆ ಭಾರತದ ವಸಾಹತುಶಾಹಿ ಮತ್ತು ನಂತರದ ಭಾರತದ ಇತಿಹಾಸವೇ ಹೆಚ್ಚು ಕುತೂಹಲಕಾರಿಯಾಗಿದ್ದಂತೆ ಕಾಣುತ್ತದೆ. ಭಾರತದ ಪ್ರಾಚೀನ ಮತ್ತು ಮಧ್ಯಕಾಲೀನ ಇತಿಹಾಸ ಕುರಿತು ಬಿಪಿನ್‌ಚಂದ್ರ ಬರೆದಿಲ್ಲ. ಭಾರತದಲ್ಲಿ ರಾಷ್ಟ್ರೀಯ ಮನೋಭಾವದ ಹುಟ್ಟಿನಿಂದ ಆರಂಭಿಸಿ ಸ್ವಾತಂತ್ರ್ಯಾನಂತರದ ಭಾರತದವರೆಗೆ ಅವರ ಅಧ್ಯಯನದ ವ್ಯಾಪ್ತಿ ವಿಸ್ತರಿಸಿತ್ತು. ಭಾರತೀಯ ಬಂಡವಾಳಿಗಳು ಸಾಮ್ರಾಜ್ಯಶಾಹಿಯೊಂದಿಗೆ ಹೊಂದಿದ್ದ ಸಂಬಂಧ, ರಾಷ್ಟ್ರೀಯ ಚಳವಳಿಯಲ್ಲಿ ಗಾಂಧೀಜಿಯ ಮತ್ತು ಗಾಂಧಿವಾದದ ಪ್ರಭಾವ, ನೆಹರೂ ಅವರ ಮೇಲೆ ಎಡಪಂಥೀಯ ಪ್ರಭಾವ, ಭಾರತದಲ್ಲಿ ಧಾರ್ಮಿಕತೆಯ ಪ್ರಭಾವ, ಜಯಪ್ರಕಾಶ್ ನಾರಾಯಣರ ಪ್ರಜಾಪ್ರಭುತ್ವವಾದಿ ಹೋರಾಟಗಳು ಇತ್ಯಾದಿ ಭಾರತದ ವರ್ತಮಾನಕ್ಕೆ ತೀರಾ ಸಮೀಪದ ಇತಿಹಾಸದ ಪರಿಶೀಲನೆ, ವಿಶ್ಲೇಷಣೆಗಳೇ ಬಿಪಿನ್‌ಚಂದ್ರ ಅವರ ಆದ್ಯತೆಯಾಗಿತ್ತು. ಭಾರತದ ಮೊದಲ ರಾಷ್ಟ್ರೀಯವಾದಿಗಳಿಗೆ ಸ್ವಾತಂತ್ರ್ಯವು ದೈನ್ಯದ ಬೇಡಿಕೆಯಾಗಿರಲಿಲ್ಲ. ಅವರಿಗೆ ವಸಾಹತುಶಾಹಿಯ ಆರ್ಥಿಕ ದಬ್ಬಾಳಿಕೆಯಿಂದ ಬಿಡುಗಡೆ ಬೇಕಾಗಿತ್ತು. ಅದಕ್ಕಾಗಿ ರಾಷ್ಟ್ರ ಸ್ವತಂತ್ರವಾಗಬೇಕು ಮತ್ತು ಈ ನೆಪದಲ್ಲಿ ಒಂದು ಸಾಮಾಜಿಕ ಬದಲಾವಣೆಯಾಗಬೇಕು ಎಂಬ ಹಂಬಲ ಮೊದಲ ರಾಷ್ಟ್ರೀಯವಾದಿಗಳದಾಗಿತ್ತು ಎನ್ನುವ ವಾದ ಬಿಪಿನ್‌ಚಂದ್ರ ಅವರದು. ಗಾಂಧೀಜಿಯ ಹೋರಾಟದ ವಿಧಾನವು ಹೋರಾಟ–ವಿಶ್ರಾಂತಿ–ಹೋರಾಟ ಮತ್ತು ಹೋರಾಟದಲ್ಲಿ ಜನಸಾಮಾನ್ಯರೂ ಪಾಲುಗೊಳ್ಳಬೇಕಾದ್ದರಿಂದ ಅದು ಅಹಿಂಸಾತ್ಮಕ ಹೋರಾಟವೇ ಆಗಬೇಕು ಎಂಬ ಗಾಂಧೀ ಮನೋಭಾವವನ್ನು ಬಿಪಿನ್‌ಚಂದ್ರ ಗುರುತಿಸಿದ್ದರು. ಕಾಲಕಾಲಕ್ಕೆ ಗಾಂಧೀಜಿ ಮತ್ತು ನೆಹರೂ ಅವರ ಮನೋಭಾವದಲ್ಲಿ ಆಗುತ್ತಿದ್ದ ಬದಲಾವಣೆಗಳು ಮತ್ತು ಅವುಗಳಿಗೆ ಕಾರಣಗಳನ್ನು ತಿಳಿಯುವುದರಲ್ಲಿ ಬಿಪಿನ್‌ಚಂದ್ರ ಸಫಲರಾಗಿದ್ದರು ಎಂದು ಅವರ ಕೃತಿಗಳನ್ನು ಓದಿದಾಗ ತಿಳಿಯುತ್ತದೆ. ಅವರ ಪ್ರಕಾರ ಧರ್ಮನಿರಪೇಕ್ಷ ಸಮಾಜವಾದಿ ಗಾಂಧೀಜಿಯನ್ನು ಸಂಪ್ರದಾಯವಾದಿ ಹಿಂದೂಗಳು ಮತ್ತು ಮುಸಲ್ಮಾನರಿಬ್ಬರೂ ಇಷ್ಟಪಡುತ್ತಿರಲಿಲ್ಲ. ದೇಶ ವಿಭಜನೆಗೆ ಇದೇ ಮುಖ್ಯ ಕಾರಣ ಎಂಬುದು ಬಿಪಿನ್‌ಚಂದ್ರ ಅವರ ಅಭಿಪ್ರಾಯ.







ಬಿಪಿನ್‌ಚಂದ್ರ ಅವರು ತಮ್ಮಷ್ಟಕ್ಕೆ ತಾವು ಒಂಟಿಯಾಗಿ ನಾಲ್ಕು ಗೋಡೆಗಳ ನಡುವೆ ಕೆಲಸ ಮಾಡಿದವರಲ್ಲ. ತಮ್ಮ ಸಹೋದ್ಯೋಗಿಗಳು ಮತ್ತು ಶಿಷ್ಯರನ್ನು ಇತಿಹಾಸವನ್ನು ದಾಖಲಿಸುವ ಕೆಲಸದಲ್ಲಿ ತೊಡಗಿಸುತ್ತಿದ್ದರು. ಈ ಕಾರಣದಿಂದಲೇ ಬಿಪಿನ್‌ಚಂದ್ರ ಅವರನ್ನು ಗುರುಗಳ ಗುರು ಎಂದು ಸಂಬೋಧಿಸುವ ಸ್ನೇಹಿತರಿದ್ದಾರೆ. ದೆಹಲಿ ಇತಿಹಾಸಕಾರರ ಬಳಗವೊಂದನ್ನು ಸಂಘಟಿಸಿ, ಇತಿಹಾಸವನ್ನು ವೈಚಾರಿಕ ಮತ್ತು ವೈಜ್ಞಾನಿಕ ನೆಲೆಗಳಲ್ಲಿ ತಿಳಿಸುವ ಪ್ರಯತ್ನ ಮಾಡಿದರು ಮತ್ತು ದೀರ್ಘಕಾಲ ತಾವೇ ಅದನ್ನು ಮುನ್ನಡೆಸಿದರು. ೨೦೦೪ರಿಂದ ೨೦೧೨ರವರೆಗೆ ನ್ಯಾಷನಲ್ ಬುಕ್ ಟ್ರಸ್ಟ್‌ನ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ಸಮಾಜಶಾಸ್ತ್ರಕ್ಕೆ ಸಂಬಂಧಿಸಿದಂತೆಯೇ ಸಾಮಾನ್ಯ ಓದುಗರಿಗಾಗಿ ಆರಂಭಿಸಿದ ಒಂದು ಮಾಲೆಯಲ್ಲಿ ದೇಶದ ಪ್ರಮುಖ ಇತಿಹಾಸಕಾರರಿಂದ ಕೃತಿಗಳನ್ನು ಬರೆಸಿ, ಪ್ರಕಟಿಸಿದರು.

ಕೋಮುವಾದವು ವಸಾಹತುಶಾಹಿಯ ಸೃಷ್ಟಿ ಎಂದು ಸ್ಪಷ್ಟಪಡಿಸಿದ ಬಿಪಿನ್‌ಚಂದ್ರ ಬಹುತೇಕ ಎಲ್ಲ ಧರ್ಮದವರೂ ತಮ್ಮ ಧರ್ಮದ ಪರವಾಗಿ ಮತ್ತು ಅನ್ಯ ಧರ್ಮದ ವಿರುದ್ಧವಾಗಿ ಹೋರಾಟ ನಡೆಸುತ್ತಿದ್ದುದನ್ನು ವಿವರಿಸುತ್ತಾ, ಅಂತಹ ಬೆಳವಣಿಗೆಯು ದೇಶ ವಿಭಜನೆಗೆ ಹೇಗೆ ಕಾರಣವಾಯಿತು ಎಂದು ಮನವರಿಕೆ ಮಾಡಿದ್ದಾರೆ. ಡಿ. ಡಿ. ಕೋಸಾಂಬಿ ಅವರು ಹಾಕಿಕೊಟ್ಟಿದ್ದ ಮಾರ್ಗದಲ್ಲಿ, ರೋಮಿಲಾ ಥಾಪರ್, ಎಸ್. ಗೋಪಾಲ್, ಸತೀಶ್‌ಚಂದ್ರ ಮುಂತಾದ ಇತಿಹಾಸನಿಷ್ಠ ವಿದ್ವಾಂಸರ ಜೊತೆಗೆ ಭಾರತದಲ್ಲಿ ಇತಿಹಾಸದ ಅಧ್ಯಯನಕ್ಕೊಂದು ಹೊಸ ಜಾಡನ್ನು ತೋರಿಸಿದರು. ತಮ್ಮ ಸಹೋದ್ಯೋಗಿಗಳು ಮತ್ತು ಶಿಷ್ಯರನ್ನು ತೊಡಗಿಸಿಕೊಂಡು ಅವರು ಸಂಪಾದಿಸಿರುವ 'ಇಂಡಿಯಾಸ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್' ಮತ್ತು 'ಇಂಡಿಯಾ ಸಿನ್ಸ್ ಇಂಡಿಪೆಂಡೆನ್ಸ್' ಕೃತಿಗಳು ಸಮಷ್ಟಿ ಪ್ರಜ್ಞೆಯ ಸಂಕೇತಗಳಾಗಿವೆ.

ನನ್ನ ಪ್ರಕಾರ ಅವರ 'ಹಿಸ್ಟರಿ ಆಫ್ ಮಾಡರ್ನ್ ಇಂಡಿಯಾ' ಕೃತಿಯು ಪಠ್ಯಪುಸ್ತಕವಲ್ಲ. ಅದೊಂದು ಮಹತ್ವದ ಐತಿಹಾಸಿಕ ಕೃತಿ. ಅದನ್ನು ಎಲ್ಲ ಕಾಲದ ವಿದ್ಯಾರ್ಥಿಗಳು ಮಾತ್ರವಲ್ಲದೆ ಇತಿಹಾಸದ ಬೋಧಕರೂ ಅಭ್ಯಾಸ ಮಾಡಬೇಕಾದ್ದು ಅವಶ್ಯಕ. ಇತಿಹಾಸದ ಕೃತಿಯು ಹೇಗಿರಬೇಕು ಎಂಬುದಕ್ಕೆ ಅದು ಒಂದು ಮಾದರಿ. ಅಕಸ್ಮಾತ್ತಾಗಿ ಪಠ್ಯಪುಸ್ತಕವಾಗಿದ್ದ ಅದನ್ನು ಪಠ್ಯಪುಸ್ತಕವಾಗಿ ಉಳಿಸಿಕೊಳ್ಳದಿದ್ದರೂ, ಈಗ ಅದು ವಿದ್ವಾಂಸರ ಕೈಗಳಲ್ಲಿ ಉಳಿದಿದೆ. ಮುಘಲ್ ಸಾಮ್ರಾಜ್ಯದ ಪತನದ ಹಿನ್ನೆಲೆಯಲ್ಲಿ ಭಾರತೀಯ ಸಂಸ್ಥಾನಗಳು ಮತ್ತು ಸಮಾಜದ ವಿಶ್ಲೇಷಣೆ ಮಾಡುತ್ತಲೇ, ಯೂರೋಪಿನ ವ್ಯಾಪಾರಿಗಳು ಭಾರತಕ್ಕೆ ಪ್ರವೇಶಿಸಿ, ಸ್ಥಳೀಯ ಆಡಳಿತದಲ್ಲಿ ಪ್ರವೇಶ ಪಡೆದು, ಕ್ರಮೇಣ ದೇಶವನ್ನು ವಶಪಡಿಸಿಕೊಂಡ ಬಗೆಯನ್ನು ಯಾವುದೇ ಉತ್ಪ್ರೇಕ್ಷೆಗೆ ಅವಕಾಶವಿಲ್ಲದಂತೆ ಮನದಟ್ಟು ಮಾಡಿದ್ದಾರೆ. ಹೀಗೆ ಯೂರೋಪಿಯನ್ನರ ವಶವಾದ ನಂತರ ಭಾರತದ ಸಮಾಜ ಮತ್ತು ಸಂಸ್ಕೃತಿಗಳು ಬದಲಾದ ಬಗೆಯು ವಿಚಾರಪೂರಿತವಾಗಿದೆ. ಆಗ ಕಾಣಿಸಿಕೊಂಡ ಸಾಂಸ್ಕೃತಿಕ ಜಾಗೃತಿ, ಸಾಮಾಜಿಕ ಜಾಗೃತಿ ಮತ್ತು ಈ ನಡುವಿನ ಆರ್ಥಿಕ ಪರಿಣಾಮಗಳು ರಾಷ್ಟ್ರೀಯ ಚಳುವಳಿಗೆ ಅವಕಾಶ ಮಾಡಿಕೊಟ್ಟ ಬಗೆಯನ್ನು ಖಚಿತ ಮಾತುಗಳಲ್ಲಿ ಬಿಪಿನ್‌ಚಂದ್ರ ವಿವರಿಸಿದ್ದಾರೆ. ರಾಷ್ಟ್ರೀಯ ಚಳುವಳಿಯಲ್ಲಿ ವಿವಿಧ ಸಂಘಟನೆಗಳ ಸ್ವಹಿತಾಸಕ್ತಿ ಮತ್ತು ಪರ ಮತ್ತು ವಿರುದ್ಧದ ಹೋರಾಟ ಇತ್ಯಾದಿಗಳು ಇತಿಹಾಸದ ವಿದ್ಯಾರ್ಥಿಯು ಅವಶ್ಯಕವಾಗಿ ತಿಳಿಯಬೇಕಾಗಿರುವ ಸಂಗತಿಗಳು. ದೇಶ ವಿಭಜನೆಯ ಸಂದರ್ಭದ ವಿವರಗಳು ಬಿಪಿನ್‌ಚಂದ್ರ ಅವರ ಸಮತೋಲನ ಪ್ರಜ್ಞೆ ಮತ್ತು ಇತಿಹಾಸಕಾರನ ಜವಾಬ್ದಾರಿಯ ಪ್ರತೀಕಗಳಾಗಿವೆ.

ಅವರ 'ಹಿಸ್ಟರಿ ಆಫ್ ಮಾಡರ್ನ್ ಇಂಡಿಯಾ'ದ ಕನ್ನಡ ಅನುವಾದ 'ಆಧುನಿಕ ಭಾರತದ ಇತಿಹಾಸ' ಕೃತಿಯ ಬಿಡುಗಡೆಗೆ ಅನಾರೋಗ್ಯದ ಕಾರಣದಿಂದ ಬರಲಾಗದಿದ್ದರೂ, ಆ ಬಗ್ಗೆ ಪ್ರೀತಿ ಮತ್ತು ವಿಶ್ವಾಸ ವ್ಯಕ್ತಪಡಿಸಿದ್ದ ಈ ಹಿರಿಯ ಇತಿಹಾಸಕಾರ ಇಂದು ನಮ್ಮೊಂದಿಗೆ ದೈಹಿಕವಾಗಿ ಇಲ್ಲವಾದರೂ, ಅವರ ಕೃತಿಗಳ ಮೂಲಕ ಇದ್ದೇ ಇರುತ್ತಾರೆ. ಆದ್ದರಿಂದ ಅವರ ನೆನಪಿಗೆ ಶ್ರದ್ಧಾಂಜಲಿ ಸಲ್ಲಿಸುವುದು ನಮ್ಮ ಗೌರವದ ಗುರುತು.

**ಡಾ॥ ಎಚ್. ಎಸ್. ಗೋಪಾಲ ರಾವ್**
೧೪೪, 'ಸ್ವಸ್ತಿಶ್ರೀ ಸ್ಕಂದ', ಐ.ವೈ.ಡಿ.ರಸ್ತೆ, ಅರಸಿನಕುಂಟೆ, ಬೆಂಗಳೂರು ಗ್ರಾ. ಜಿ.–೫೬೨೧೨೩

೧೯೭೭ರಲ್ಲಿ ಜರುಗಿದ ಸಾರ್ವತ್ರಿಕ ಚುನಾವಣೆಗಳು ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆಗೆ ದೊರೆತ ಜಯ. ಮೊದಲ ಬಾರಿಗೆ ಸೋಲನ್ನನುಭವಿಸಿ ಕೇಂದ್ರದಲ್ಲಿ ಅಧಿಕಾರ ಕಳೆದುಕೊಂಡು ಕಾಂಗ್ರೆಸ್ ಪ್ರತಿಪಕ್ಷದ ಸ್ಥಾನದಲ್ಲಿ ಕೂರಬೇಕಾಯಿತು. ಅದು ಗಳಿಸಿದ್ದು ೧೫೪ ಸ್ಥಾನಗಳನ್ನು ಮಾತ್ರ. ಉತ್ತರ ಭಾರತದಲ್ಲಿ ಕಾಂಗ್ರೆಸ್ ಧೂಳೀಪಟವಾಯಿತು. ೨೫೪ ಸ್ಥಾನಗಳ ಪೈಕಿ ಅದು ಪಡೆದದ್ದು ಕೇವಲ ೨ ಸ್ಥಾನಗಳನ್ನು ಮಾತ್ರ. ಹೆಚ್ಚಿನ ಸ್ಥಾನಗಳು ಅದಕ್ಕೆ ದೊರೆತದ್ದು ದಕ್ಷಿಣ ಭಾರತದಲ್ಲಿ. ಕಾಂಗ್ರೆಸ್ಸಿನ ಪ್ರಜಾಪ್ರಭುತ್ವ ವಿರೋಧಿ ನೀತಿಗೆ, ದೇಶದ ಮೇಲೆ ತುರ್ತು ಪರಿಸ್ಥಿತಿ ಹೇರಿ ಸರ್ವಾಧಿಕಾರಿ ಧೋರಣೆ ಅನುಸರಿಸಿದ ನಾಯಕಿ ಇಂದಿರಾ ಗಾಂಧಿಗೆ ಚುನಾವಣೆಗಳಲ್ಲಿ ಜನತೆ ನೀಡಿದ ಉತ್ತರ ಅದಾಗಿತ್ತು. ಚುನಾವಣೆಗಳಲ್ಲಿ ಪ್ರಧಾನಿ ಇಂದಿರಾ ಗಾಂಧಿ ಹಾಗೂ ಮಗ ಸಂಜಯ ಗಾಂಧಿ ಇಬ್ಬರೂ ಸೋಲನ್ನನುಭವಿಸಿದರು.

ತುರ್ತು ಪರಿಸ್ಥಿತಿ ರದ್ದುಗೊಳಿಸಿದನಂತರ, ಬಂಧನದಲ್ಲಿದ್ದ ಪ್ರತಿಪಕ್ಷಗಳ ನಾಯಕರು ಬಿಡುಗಡೆಯಾದ ಮೇಲೆ ಚುನಾವಣೆಗಳನ್ನು ಎದುರಿಸಲು ದಿಟ್ಟ ಕ್ರಮ ಕೈಗೊಂಡರು. ತುರ್ತುಪರಿಸ್ಥಿತಿ ವಿರೋಧಿಸಲು ಒಂದುಗೂಡಿದ್ದ ಪ್ರತಿಪಕ್ಷಗಳು ಪರಸ್ಪರ ಸಮ್ಮತಿಯಿಂದ ತಮ್ಮ ತಮ್ಮ ಪಕ್ಷಗಳನ್ನು ವಿಲೀನಗೊಳಿಸಿ ಕಾಂಗ್ರೆಸ್ಸನ್ನು ಎದುರಿಸಲು ಒಂದೇ ಪಕ್ಷ – ಜನತಾ ಪಕ್ಷವನ್ನು ಸ್ಥಾಪಿಸಲು ತೀರ್ಮಾನಿಸಿದರು. ಅದರಂತೆ ಸಂಸ್ಥಾ ಕಾಂಗ್ರೆಸ್, ಆರೆಸ್ಸೆಸ್‌ನ ರಾಜಕೀಯ ವಿಭಾಗ ಜನಸಂಘ, ಭಾರತೀಯ ಲೋಕದಳ ಮತ್ತು ಸೋಷಲಿಸ್ಟ್ ಪಾರ್ಟಿಗಳು ವಿಲೀನಗೊಂಡು ಜನತಾ ಪಕ್ಷ ಹೊಸದಾಗಿ ಉದಯಿಸಿತು. ಕಾಂಗ್ರೆಸ್ಸಿಗೆ ನೇರ ಸ್ಪರ್ಧೆ ಒಡ್ಡಲು ಹೊಸ ಪಕ್ಷ ಅಣ್ಣಾ ದ್ರಾವಿಡ ಮುನ್ನೇತ್ರ ಕಳಗಂ ಅಕಾಲಿ ದಳ ಮತ್ತು ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ (ಸಿಪಿಎಂ)ದೊಂದಿಗೆ ಹೊಂದಾಣಿಕೆ ಮಾಡಿಕೊಂಡಿತು. ಈ ಮಧ್ಯೆ ಇಂದಿರಾ ಕಾಂಗ್ರೆಸ್ಸಿಗೆ ದಲಿತ ನಾಯಕ ಜಗಜೀವನ ರಾಮ್, ಸಂಪುಟ ಸಚಿವ ಎಚ್. ಎನ್. ಬಹುಗುಣ ಹಾಗೂ ಒರಿಸ್ಸಾದ ನಾಯಕಿ ನಂದಿನಿ ಸತ್ಪತಿ ಇವರ ನಿರ್ಗಮನದಿಂದ ಭಾರಿ ಹೊಡೆತ ಬಿತ್ತು. ಈ ನಾಯಕರು ಸ್ಥಾಪಿಸಿಕೊಂಡ ಕಾಂಗ್ರೆಸ್ ಫಾರ್ ಡೆಮಾಕ್ರಸಿ ಪಕ್ಷ ಕೂಡ ಜನತಾ ಪಕ್ಷದೊಂದಿಗೆ ಕೈಜೋಡಿಸಿತು. ಹೀಗಾಗಿ ಹೆಚ್ಚು ಕಡಿಮೆ ದೇಶಾದ್ಯಂತ ಕಾಂಗ್ರೆಸ್ಸಿನೊಂದಿಗೆ ನೇರ ಪೈಪೋಟಿ ನಡೆಯಿತು. ಚುನಾವಣೆಯಲ್ಲಿ ಜನತಾ ಪಾರ್ಟಿ ಮತ್ತು ಅದರ ಮಿತ್ರಪಕ್ಷಗಳು ಲೋಕಸಭೆಯ ೫೪೨ ಸ್ಥಾನಗಳ ಪೈಕಿ ೩೩೦ ಸ್ಥಾನಗಳನ್ನು ಪಡೆದುವು. ಅಂದರೆ ಮೂರನೇ ಎರಡರಷ್ಟು ಬಹುಮತ ಪಡೆದುಕೊಂಡಿದ್ದುವು.

ಸರಕಾರದ ರಚನೆಯ ಕಸರತ್ತು ಸುಲಭವೇನಾಗಿರಲಿಲ್ಲ. ಮುಖ್ಯವಾಗಿ ಪ್ರಧಾನಿ ಪಟ್ಟಕ್ಕೆ ಮೂವರು ಸ್ಪರ್ಧಿಗಳು – ಮೊರಾರ್ಜಿ ದೇಸಾಯಿ, ಜಗಜೀವನ ರಾಮ್ ಮತ್ತು ಚರಣಸಿಂಗ್ ಇದ್ದರು. ಹಿರಿಯ ನಾಯಕರುಗಳಾದ ಜಯಪ್ರಕಾಶ ನಾರಾಯಣ್ ಮತ್ತು ಆಚಾರ್ಯ ಕೃಪಲಾನಿ ಇವರ ಮಧ್ಯಸ್ತಿಕೆಯಿಂದ ೮೧ರ ವಯಸ್ಸಿನ ಮೊರಾರ್ಜಿ ದೇಸಾಯಿ ೧೯೭೭ರ ಮಾರ್ಚ್ ೨೩ರಂದು ಪ್ರಧಾನಿಯಾಗಿ ಅಧಿಕಾರ ವಹಿಸಿಕೊಂಡರು. ಈ ಹುದ್ದೆ ಅಲಂಕರಿಸಲು ಅವರು ಹತ್ತು ವರ್ಷ ಕಾಯಬೇಕಾಯಿತು. ಭಾರತದ ಮೊದಲ ಸಮ್ಮಿಶ್ರ ಸರಕಾರ ಅದಾಗಿತ್ತು. ತರಾತುರಿಯಲ್ಲಿ ಹೊಸೆದ ಈ ಕಿಚಡಿ ವ್ಯವಸ್ಥೆ ಸಮ್ಮತವಾದ ಕಾರ್ಯಕ್ರಮ, ಕಾರ್ಯನೀತಿ ರೀತಿಗಳಿಲ್ಲದೆ ಗೊಂದಲದ ಗೂಡಾಗಿತ್ತು. ೧೯೭೯ರ ಜುಲೈ ತಿಂಗಳವರೆಗೆ ಮೂವತ್ತನಾಲ್ಕು ತಿಂಗಳು ಅಧಿಕಾರದಲ್ಲಿದ್ದ ಜನತಾ ಪ್ರಯೋಗ ಬಹುಬೇಗನೆ ಶಿಥಿಲಗೊಳ್ಳಲಾರಂಭಿಸಿತು. ಈ ವ್ಯವಸ್ಥೆಯ ಪೂರ್ಣ ಪ್ರಯೋಜನ ಪಡೆದುಕೊಂಡುದು ಕೋಮುವಾದಿ ಪಕ್ಷ ಜನಸಂಘವೊಂದೇ. ರಾಜಕೀಯವಾಗಿ ಅಸ್ಪೃಶ್ಯವೆನಿಸಿದ್ದ ಈ ಪಕ್ಷಕ್ಕೆ ಗೌರವ ಸ್ಥಾನ ದೊರೆತದ್ದು ಕೂಡ ಆಗಲೆ. ಜನತಾ ಪ್ರಯೋಗ ಮುಗಿದ ಮೇಲೆ ಅದು ಮರುಹುಟ್ಟು ಪಡೆದದ್ದು ೧೯೮೦ರಲ್ಲಿ 'ಭಾರತೀಯ ಜನತಾ ಪಕ್ಷ' (ಭಾಜಪ) ಆಗಿ. ಮುಂದೆ ಹದಿನೇಳು ವರ್ಷಗಳ ನಂತರ ಕೇಂದ್ರದಲ್ಲಿ ಅಧಿಕಾರ ಗ್ರಹಣ ಮಾಡುವ ಮಟ್ಟಕ್ಕೇರಿತು. ಕಾಂಗ್ರೆಸ್ಸಿಗೆ ಅದು ಪ್ರಬಲ ಎದುರಾಳಿಯಾಗಿ ಬೆಳೆಯಿತು.



ಸ್ವಾತಂತ್ರ್ಯಾನಂತರದ ಭಾರತ – ೧೦

# ಕಾಂಗ್ರೆಸ್ ಪತನ – ಸಮ್ಮಿಶ್ರ ಪ್ರಯೋಗ ಇಂದಿರಾ ಪುನರಾಗಮನ – ಅಂತ್ಯ

ಸಿ. ಆರ್. ಕೃಷ್ಣರಾವ್

ಮೊರಾರ್ಜಿ ದೇಸಾಯಿ ಸರಕಾರ ಇಂದಿರಾ ಗಾಂಧಿ ವಿರುದ್ಧ ಪ್ರತೀಕಾರದ ಧೋರಣೆ ತಳೆದದ್ದೆ ಅದಕ್ಕೆ ಮುಳುವಾಯಿತು. ಪ್ರಧಾನವಾಗಿ ಈ ಸಮ್ಮಿಶ್ರ ವ್ಯವಸ್ಥೆಯ ಸಾಮಾಜಿಕ ಆಧಾರ ಭೂಮಾಲೀಕರು, ವ್ಯಾಪಾರಸ್ಥರು, ಬಂಡವಾಳಶಾಹಿಗಳು ಆಗಿದ್ದರು. ಮೇಲ್ಜಾತಿಯವರದ್ದೇ ಮೇಲುಗೈ ಆಗಿದ್ದ ಈ ಪಕ್ಷ ದಲಿತರ ಅಲ್ಪಸಂಖ್ಯಾತರ ಹಿತರಕ್ಷಣೆ ಮಾಡುವುದರಲ್ಲಿ ವಿಫಲಗೊಂಡಿತು. ಜನತಾ ಪಾರ್ಟಿ ಅಧಿಕಾರಾವಧಿಯಲ್ಲಿ ಉತ್ತರ ಭಾರತದಲ್ಲಿ ದಲಿತರ ಮೇಲೆ ದಾಳಿಗಳು ಅಧಿಕಗೊಂಡುವು. ಭೂಮಾಲೀಕರು ದಲಿತರ ಜಮೀನುಗಳನ್ನು ಕಸಿದುಕೊಳ್ಳಲು ನೋಡಿದರು. ತುರ್ತು ಪರಿಸ್ಥಿತಿ ಕಾಲದಲ್ಲಿ ಮನ್ನಾ ಮಾಡಲಾಗಿದ್ದ ಸಾಲವನ್ನು ವಸೂಲಿಮಾಡಿಕೊಳ್ಳಲು ಬಡರೈತರನ್ನು, ಮುಖ್ಯವಾಗಿ ದಲಿತರನ್ನು ಸಾಲದಾತರು ಹಿಂಸಿಸತೊಡಗಿದರು. ೧೯೭೭ರಲ್ಲಿ ಬಿಹಾರ ರಾಜ್ಯದ ಬೆಲ್ಚಿಯಲ್ಲಿ ನಡೆದ ದಲಿತರ ಸಜೀವ ದಹನ ದೇಶಾದ್ಯಂತ ಜನರನ್ನು ರೊಚ್ಚಿಗೆಬ್ಬಿಸಿತು. ಇಂದಿರಾ ಗಾಂಧಿ ಪ್ರಧಾನಿಯಾಗಿದ್ದ ಕಾಲದಲ್ಲಿ ಬಡಜನರ ಉದ್ಧಾರಕ್ಕಾಗಿ ಕೈಗೊಂಡಿದ್ದ ಕ್ರಮಗಳನ್ನು ಜಾರಿಗೆ ತರದೇ ಹೋದ್ದರಿಂದ ಹೊಸ ಸರಕಾರ ಶೀಘ್ರವಾಗಿ ಜನಪ್ರಿಯತೆ ಕಳೆದುಕೊಂಡಿತು. ಜನಸಾಮಾನ್ಯರಲ್ಲಿ ಪ್ರತೀಕಾರ ರಾಜಕಾರಣವೇ ಹೊಸ ಸರಕಾರದ ಗುರಿ ಎನ್ನುವ ಭಾವನೆ ಬೆಳೆಯಿತು. ಇದಕ್ಕೆ ಕಾರಣವೂ ಇತ್ತು. ೧೯೭೮ರಲ್ಲಿ ನವೆಂಬರ್ ತಿಂಗಳಲ್ಲಿ ಕರ್ನಾಟಕದಿಂದ ಲೋಕಸಭೆಗೆ ಚಿಕ್ಕಮಗಳೂರು ಕ್ಷೇತ್ರದಿಂದ ಆಯ್ಕೆಗೊಂಡಿದ್ದ ಕಾಂಗ್ರೆಸ್ಸಿನ ಡಿ. ಬಿ. ಚಂದ್ರೇಗೌಡ ರಾಜೀನಾಮೆ ನೀಡಿ ತೆರವುಗೊಳಿಸಿದ್ದ ಕ್ಷೇತ್ರದಿಂದ ಸ್ಪರ್ಧಿಸಿ



ಮೊರಾರ್ಜಿ ದೇಸಾಯಿ



ಚರಣ ಸಿಂಗ್



ನೀಲಂ ಸಂಜೀವ ರೆಡ್ಡಿ

ಇಂದಿರಾ ಗಾಂಧಿ ಅತ್ಯಧಿಕ ಬಹುಮತದಿಂದ ಲೋಕಸಭೆಗೆ ಆಯ್ಕೆಗೊಂಡರು. ಆಗ ಕರ್ನಾಟಕದ ಮುಖ್ಯಮಂತ್ರಿ ಆಗಿದ್ದವರು ದೇವರಾಜ ಅರಸು. ಮೈಸೂರು ಎಂದೇ ಗುರುತಿಸಲಾಗಿದ್ದ ರಾಜ್ಯಕ್ಕೆ 'ಕರ್ನಾಟಕ' ಎಂದು ನಾಮಕರಣ ಮಾಡಿದ ಕೀರ್ತಿಯೂ ಅವರಿಗೆ ಸಲ್ಲುತ್ತದೆ. ಹಳೇ ಮೈಸೂರು ರಾಜ್ಯದ ಕೆಲವರ ವಿರೋಧವನ್ನು ಲೆಕ್ಕಿಸದೆ ಅವರು ರಾಜ್ಯದ ಹೆಸರನ್ನು ಬದಲಿಸಿದರು. ಇಂದಿರಾ ಗಾಂಧಿಯವರ ನಿಕಟವರ್ತಿಗಳಲ್ಲಿ ಒಬ್ಬರಾಗಿದ್ದ ಅರಸು ರಾಜಕೀಯವಾಗಿ ಭ್ರಮನಿರಸನಗೊಂಡಿದ್ದ ಇಂದಿರಾ ಗಾಂಧಿಗೆ ಮರುಹುಟ್ಟು ನೀಡಿದರು. ಅಧಿಕಾರಕ್ಕೆ ಬಂದಮೇಲೆ ಇಂದಿರಾ ಗಾಂಧಿ ಅರಸುರವರನ್ನು ಕೈಬಿಟ್ಟದ್ದು ಬೇರೆಯೇ ಕತೆ. ಈ ಚುನಾವಣೆ ಕರ್ನಾಟಕ ರಾಜ್ಯದಲ್ಲಷ್ಟೇ ಅಲ್ಲದೆ ಇಡೀ ದೇಶದಲ್ಲೇ ಕುತೂಹಲ ಕೆರಳಿಸಿತ್ತು. ಎ. ಪಿ. ಜೈನ್ ಎಂಬುವರು ಪ್ರತಿಸ್ಪರ್ಧಿ. ಇವರಿಗೆ ಹಣ ನೀಡಿ ಬೆಂಬಲಿಸಿದವರು 'ಇಂಡಿಯನ್ ಎಕ್ಸ್‌ಪ್ರೆಸ್' ಮಾಲಿಕ ರಾಮನಾಥ ಗೋಯೆಂಕಾ. ಇಂದಿರಾ ಗಾಂಧಿಯವರ ಕಡುವಿರೋಧಿಯಾಗಿದ್ದ ಈತ ಸಾಕಷ್ಟು ಹಣ ಚೆಲ್ಲಿದ್ದಲ್ಲದೆ, ತನ್ನ ಪತ್ರಿಕೆಗಳಲ್ಲಿ ವಿಪರೀತ ಪ್ರಚಾರ ನೀಡಿದ್ದರು. ಪುನರಾಯ್ಕೆಗೊಂಡ ಪ್ರಧಾನಿ ಇಂದಿರಾ ಗಾಂಧಿಯವರು ಲೋಕಸಭೆ ಪ್ರವೇಶಿಸುತ್ತಿದ್ದಂತೆಯೇ ಪ್ರಧಾನಿ ಮೊರಾರ್ಜಿ ದೇಸಾಯಿ ಪ್ರತೀಕಾರ ಸಾಧಿಸಲು ಸಿದ್ಧರಾದರು. ೧೯೭೮ರ ಡಿಸೆಂಬರ್ ೧೯ರಂದು ಶ್ರೀಮತಿ ಇಂದಿರಾ ಗಾಂಧಿಯವರ ಮೇಲೆ ಹಕ್ಕುಚ್ಯುತಿ ಮತ್ತು ಸಭೆಗೆ ಅಗೌರವ ತೋರಿದ ಆಪಾದನೆ ಹೊರಿಸಿದರು. ಬಹುಮತವನ್ನು ಉಪಯೋಗಿಸಿಕೊಂಡು ಪ್ರಧಾನಿ ಮೊರಾರ್ಜಿ ದೇಸಾಯಿ ಆಕೆ ಅಪರಾಧಿ ಎಂದೂ, ಅದಕ್ಕಾಗಿ ಅವರಿಗೆ ಶಿಕ್ಷೆ ನೀಡಬೇಕೆಂದು, ಒಂದು ವಾರ ಕಾರಾಗೃಹವಾಸದ ಶಿಕ್ಷೆ ವಿಧಿಸಬೇಕೆಂಬ ನಿರ್ಣಯ ಮಂಡಿಸಿ ಅಂಗೀಕಾರ ಪಡೆದರು. ಆಕೆಯನ್ನು ತಿಹಾರ್ ಜೈಲಿಗೂ ಕಳುಹಿಸಿದರು. ಅವರ ಈ ಕ್ರಮಕ್ಕೆ ಅವರ ಪಕ್ಷದೊಳಗೇ ಭಿನ್ನಾಭಿಪ್ರಾಯಗಳಿದ್ದುವು. ಪ್ರತೀಕಾರ ರಾಜಕಾರಣ ಅವರಿಗೇ ತಿರುಗೇಟಾಯಿತು. ಇಂದಿರಾ ಗಾಂಧಿ ಜನಪ್ರಿಯತೆ ಇದರಿಂದ ಹೆಚ್ಚಿತೇ ಹೊರತು ಕಡಿಮೆಯಾಗಲಿಲ್ಲ. ದೇಶಾದ್ಯಂತ ಪ್ರತಿಭಟನೆಗಳು ಜರುಗಿದವು. ಈ ಘಟನೆ ಇಂದಿರಾ ಗಾಂಧಿಯವರಿಗೆ ರಾಜಕೀಯ ಪುನಃಶ್ಚೇತನ ನೀಡಿತು.

ಕಾರಾಗೃಹದಿಂದ ಹೊರಬಂದ ಇಂದಿರಾ ಗಾಂಧಿ ಸರಕಾರವನ್ನು ಅಸ್ಥಿರಗೊಳಿಸಲು ಕಾರ್ಯಪ್ರವೃತ್ತರಾದರು. ಪ್ರಧಾನಿ ಮೊರಾರ್ಜಿ ದೇಸಾಯಿಯವರ ಕಾರ್ಯವೈಖರಿ ಮತ್ತು ಹಠಮಾರಿತನದ ಧೋರಣೆಯಿಂದಾಗಿ ಜನತಾ ಪಾರ್ಟಿಯಲ್ಲಿ ಅಸಮಾಧಾನ ಹೆಚ್ಚುತ್ತಿತ್ತು. ೧೯೭೮ರ ಜೂನ್‌ನಲ್ಲಿ ಭಿನ್ನಾಭಿಪ್ರಾಯಗಳಿಂದಾಗಿ ಗೃಹಸಚಿವರಾಗಿದ್ದ ಚರಣ ಸಿಂಗ್ (ಭಾರತೀಯ ಲೋಕದಳದ ನಾಯಕ) ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಿದರು. ೧೯೭೯ರ ಜನವರಿಯಲ್ಲಿ ಅವರನ್ನು ಪುನಃ ಹಣಕಾಸಿನ ಸಚಿವರಾಗಿ ನೇಮಕ ಮಾಡಲಾಯಿತು. ಆದರೆ ಅವರು ಕಾಂಗ್ರೆಸ್ಸಿನ ಕುತಂತ್ರಕ್ಕೆ ಬಲಿಯಾದರು. ಪ್ರಧಾನಿ ಹುದ್ದೆಯ ಆಕಾಂಕ್ಷಿಯಾಗಿದ್ದ ಸಿಂಗ್ ಸರಕಾರದಲ್ಲಿ ಭಾಗಿಯಾಗಿದ್ದ ಜನಸಂಘದ ಸದಸ್ಯರು ಆರೆಸ್ಸೆಸ್ ಸದಸ್ಯರೂ ಆಗಿರುವುದನ್ನು ಪ್ರಶ್ನಿಸಿ ತಗಾದೆ ತೆಗೆದು ಜನತಾ ಪಕ್ಷ ಹಾಗೂ ಸರಕಾರದಿಂದ ಹೊರನಡೆದರು. ಇವರೊಂದಿಗೆ ಸೋಷಲಿಸ್ಟ್ ಪಾರ್ಟಿ ಸದಸ್ಯರೂ ಪಕ್ಷ ತೊರೆದರು. ಪಾರ್ಲಿಮೆಂಟಿನಲ್ಲಿ ಬಹುಮತ ಕಳೆದುಕೊಂಡ ಮೊರಾರ್ಜಿ ಸರಕಾರ ೧೯೭೯ರ ಜುಲೈ ೧೫ರಂದು ಇಪ್ಪತ್ತೇಳು ತಿಂಗಳು ಅಧಿಕಾರ ನಡೆಸಿ ಉರುಳಿತು. ಕಾಂಗ್ರೆಸ್ ಬೆಂಬಲದಿಂದ ಪ್ರಧಾನಿಯಾದ ಚರಣ ಸಿಂಗ್ ಅಧಿಕಾರದಲ್ಲಿದ್ದುದು ಕೇವಲ ಏಳು ತಿಂಗಳು ಮಾತ್ರ. ಬಹುಮತ ಸಾಬೀತುಪಡಿಸಲು ಪಾರ್ಲಿಮೆಂಟಿನ ಮುಂದೆಯೇ ಬಾರದಿದ್ದ ಪ್ರಧಾನಿ ಲೋಕಸಭೆ ವಿಸರ್ಜನೆಗೆ ಶಿಫಾರಸು ಮಾಡಿ ರಾಜೀನಾಮೆ ಸಲ್ಲಿಸಿದರು. ಇದಕ್ಕೆ ಮುನ್ನ ಕಾಂಗ್ರೆಸ್ ತಾನು ನೀಡಿದ್ದ ಬೆಂಬಲ ಹಿಂದಕ್ಕೆ ತೆಗೆದುಕೊಂಡಿತ್ತು. ೧೯೮೦ರಲ್ಲಿ ನಡೆದ ಮಧ್ಯಂತರ ಚುನಾವಣೆಗಳಲ್ಲಿ ಕಾಂಗ್ರೆಸ್ ಮತ್ತೆ ಅಧಿಕಾರಕ್ಕೆ ಬಂದಿತು. ಇಂದಿರಾ ಗಾಂಧಿಯ ರಣತಂತ್ರ ಫಲಿಸಿತು. ಇಂದಿರಾ ನೇತೃತ್ವದ ಕಾಂಗ್ರೆಸ್ಸಿಗೆ ಚುನಾವಣೆಯಲ್ಲಿ ಮೂರನೇ ಎರಡರಷ್ಟು ಬಹುಮತ ದೊರೆಯಿತು. ೫೪೨ ಲೋಕಸಭಾ ಸ್ಥಾನಗಳ ಪೈಕಿ ಅದು ೩೫೩ ಸ್ಥಾನಗಳನ್ನು ಪಡೆಯಿತು. ತಮ್ಮ ಸ್ಥಾನಗಳನ್ನು ಉಳಿಸಿಕೊಂಡದ್ದು ಕಮ್ಯುನಿಸ್ಟ್ ಪಾರ್ಟಿಗಳು ಮಾತ್ರ. ೧೯೭೭ರಲ್ಲಿ ಜನತಾ ಪಾರ್ಟಿ ರಾಜ್ಯ ವಿಧಾನಸಭೆಗಳಿಗೆ ನಡೆಸಿದ ಚುನಾವಣೆಗಳಲ್ಲಿ ಪಶ್ಚಿಮ ಬಂಗಾಳದಲ್ಲಿ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಾರ್ಟಿ ನೇತೃತ್ವದಲ್ಲಿ ಸರಕಾರ ರಚನೆಯಾದರೆ, ತಮಿಳುನಾಡಿನಲ್ಲಿ ಎಐಎಡಿಎಂಕೆ ನೇತೃತ್ವದ ಸರಕಾರ ಅಧಿಕಾರಕ್ಕೆ ಬಂದಿತು. ಅದೇ ವರ್ಷ ಜನತಾ ಪಾರ್ಟಿ ನೀಲಂ ಸಂಜೀವ ರೆಡ್ಡಿಯವರನ್ನು ರಾಷ್ಟ್ರಪತಿಯಾಗಿ ಆಯ್ಕೆ ಮಾಡಿತು. ತುರ್ತುಪರಿಸ್ಥಿತಿಯ ಕಾಲದಲ್ಲಿ ಸಂವಿಧಾನಕ್ಕೆ ತಂದಿದ್ದ ತಿದ್ದುಪಡಿಯನ್ನು ರದ್ದುಗೊಳಿಸಿತು.

ಮೂವತ್ತನಾಲ್ಕು ತಿಂಗಳು ಕಳೆದ ನಂತರ ಇಂದಿರಾ ಗಾಂಧಿ ಮತ್ತೆ ಪ್ರಧಾನಿಯಾಗಿ ಆಯ್ಕೆಗೊಂಡರು. ಹಿಂದಿನ ಸರಕಾರದ ಮಾರ್ಗವನ್ನೇ ಅನುಸರಿಸಿ ಪ್ರಧಾನಿ ವಿಧಾನಸಭೆಗಳಿಗೂ ಚುನಾವಣೆ ನಡೆಸಿದರು. ಕಾಂಗ್ರೆಸ್ ಈಗ ಇಪ್ಪತ್ತೆರಡು ರಾಜ್ಯಗಳ ಪೈಕಿ ಹದಿನೈದರಲ್ಲಿ ಅಧಿಕಾರಕ್ಕೆ ಬಂದಿತು. ಇಂದಿರಾ ಗಾಂಧಿಯವರ ಎರಡನೇ ಅವಧಿ ಅಷ್ಟೇನೂ ಅರ್ಥಪೂರ್ಣವಾಗಿರಲಿಲ್ಲ. ಹೊಸ ಉಪಕ್ರಮಗಳಾಗಲೀ, ಯೋಜನೆಗಳಾಗಲೀ ಜಾರಿಗೊಳ್ಳಲಿಲ್ಲ. ಕಾಂಗ್ರೆಸ್ ಸಂಘಟನೆ ಶಿಥಿಲಗೊಳ್ಳುತ್ತಿತ್ತು. ಚುನಾವಣೆಗಳಲ್ಲಿ ಕಾಂಗ್ರೆಸ್ಸಿನ ಜಯಭೇರಿಗೆ ಬಹುತೇಕ ಕಾರಣ ಇಂದಿರಾ ಗಾಂಧಿ ವಿಚಾರದಲ್ಲಿ ಜನರಿಗಿದ್ದ ಸಹಾನುಭೂತಿ ಆಗಿತ್ತು. ೧೯೮೦ರ ಜೂನ್ ೨೩ರಂದು ತುರ್ತು ಪರಿಸ್ಥಿತಿ ಕಾಲದಲ್ಲಿ ಪ್ರಧಾನಿಗೆ ಬಲಗೈ ಭಂಟನಾಗಿದ್ದ ಕಿರಿಯ ಮಗ ಸಂಜಯ ಗಾಂಧಿ ವಿಮಾನಾಪಘಾತದಲ್ಲಿ

ಸಾವನ್ನಪ್ಪಿದ್ದು ಇಂದಿರಾ ಗಾಂಧಿಯವರಿಗೆ ಭಾರಿ ಆಘಾತ ಉಂಟುಮಾಡಿತು. ಅದರಿಂದ ಅವರಿಗೆ ಚೇತರಿಸಿಕೊಳ್ಳಲಾಗಲಿಲ್ಲ ಹಿರಿಯ ಮಗನನ್ನು ರಾಜಕೀಯಕ್ಕೆ ತಂದಾಗ್ಯೂ. ರಾಜಕೀಯದಿಂದ ದೂರ ಉಳಿದಿದ್ದ ರಾಜೀವ ಗಾಂಧಿಯನ್ನು ಸಂಜಯ ಗಾಂಧಿ ಸ್ಥಾನಕ್ಕೆ ತಂದು ೧೯೮೩ರಲ್ಲಿ ನಡೆದ ಉಪಚುನಾವಣೆಯಲ್ಲಿ ಆತನನ್ನು ಪಾರ್ಲಿಮೆಂಟ್ ಸದಸ್ಯನಾಗಿ ಮಾಡಿ, ಕಾಂಗ್ರೆಸ್ಸಿನ ಪ್ರಧಾನ ಕಾರ್ಯದರ್ಶಿ ಯನ್ನಾಗಿ ಮಾಡಿದರು. ಇದರಿಂದ ಅವರಿಗೆ ಹೆಚ್ಚು ಪ್ರಯೋಜನವೇನಾಗಲಿಲ್ಲ. ನೆಹರೂ ಕುಟುಂಬದ ಉತ್ತರಾಧಿಕಾರಿಯಾಗಿ ರಾಜೀವ ಗಾಂಧಿ ಮುಂದೆ ಪ್ರಧಾನ ಮಂತ್ರಿಯಾದರು.



ಇಂದಿರಾ ಗಾಂಧಿ ಪಾರ್ಥಿವ ಶರೀರ

ಸರಕಾರದ ಮೇಲೆ, ಕಾಂಗ್ರೆಸ್ ಸಂಘಟನೆಯ ಮೇಲೆ ಇಂದಿರಾ ಗಾಂಧಿ ಪರಮಾಧಿಕಾರ ಹೊಂದಿದ್ದರೂ ಪಾರ್ಟಿಯೊಳಗೆ ಗುಂಪುಗಾರಿಕೆ ವಿಪರೀತ ಮಟ್ಟಕ್ಕೆ ಹೋಗಿತ್ತು. ಇದರಿಂದ ಪಾರ್ಟಿಯ ಗೌರವ ಘನತೆಗಳಿಗೆ ಚ್ಯುತಿಯಾಗಿತ್ತು. ೧೯೮೩ರ ಜನವರಿಯಲ್ಲಿ ಕೆಲವು ರಾಜ್ಯಗಳಲ್ಲಿ ನಡೆದ ಶಾಸನಸಭೆ ಚುನಾವಣೆಗಳಲ್ಲಿ ಕಾಂಗ್ರೆಸ್ ಹಿನ್ನಡೆ ಅನುಭವಿಸಿತು. ಪರಂಪರಾಗತವಾಗಿ ಕಾಂಗ್ರೆಸ್ ಭದ್ರಕೋಟೆ ಎನಿಸಿದ್ದ ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಅದು ಅಧಿಕಾರ ಕಳೆದುಕೊಂಡಿತು. ಕರ್ನಾಟಕದಲ್ಲಿ ಕಾಂಗ್ರೆಸ್ ೨೨೪ ಸ್ಥಾನಗಳ ಪೈಕಿ ೮೧ ಸ್ಥಾನಗಳನ್ನು ಗಳಿಸಿದರೆ ಆಂಧ್ರಪ್ರದೇಶದಲ್ಲಿ ೬೦ ಸ್ಥಾನಗಳನ್ನು ಮಾತ್ರ ಪಡೆಯಿತು. ಕರ್ನಾಟಕದಲ್ಲಿ ಜನತಾ ಪಾರ್ಟಿ ನೇತೃತ್ವದಲ್ಲಿ ರಾಮಕೃಷ್ಣ ಹೆಗಡೆಯವರು, ಆಂಧ್ರಪ್ರದೇಶದಲ್ಲಿ ತೆಲುಗು ದೇಶಂನ ಎನ್. ಟಿ. ರಾಮರಾವ್ ಮುಖ್ಯಮಂತ್ರಿಗಳಾದರು. ಇದು ಕಾಂಗ್ರೆಸ್ಸಿಗೆ ಆದ ಅತಿ ದೊಡ್ಡ ಮುಖಭಂಗ. ಚುನಾಯಿತ ಸರಕಾರವನ್ನು ಪಲ್ಲಟಗೊಳಿಸಿ ಕಾಂಗ್ರೆಸ್ಸನ್ನು ಅಧಿಕಾರದಲ್ಲಿ ಕೂರಿಸಲು ಆಂಧ್ರಪ್ರದೇಶದಲ್ಲಿ ಪ್ರಧಾನಿ ರಾಜ್ಯಪಾಲರನ್ನು ಉಪಯೋಗಿಸಿಕೊಂಡು ನಡೆಸಿದ ಪ್ರಯತ್ನ ಅವರಿಗೇ ತಿರುಗೇಟಾಯಿತು. ಕಾಶ್ಮೀರ, ಅಸ್ಸಾಮ್ ಮತ್ತು ಪಂಜಾಬ್ ರಾಜ್ಯಗಳಲ್ಲಿ ಪ್ರತ್ಯೇಕವಾದಿಗಳ ಆಂದೋಳನ ಹೊಗೆಯಾಡುತ್ತಿತ್ತು. ಮತೀಯ ಘರ್ಷಣೆಗಳ ಉಪಟಳ ದಕ್ಷಿಣ ಭಾರತದ ರಾಜ್ಯಗಳೂ ಸೇರಿದಂತೆ ಹಲವೆಡೆ ಅಧಿಕಗೊಂಡಿತ್ತು. ಆರ್ಥಿಕ ಕ್ಷೇತ್ರದಲ್ಲಿ ಸ್ವಲ್ಪಮಟ್ಟಿನ ಪ್ರಗತಿ ಕಂಡುಬಂದರೂ ಹಣದುಬ್ಬರ ಕಾಡುತ್ತಿತ್ತು. ೧೯೮೩ರ ಮಾರ್ಚ್‌ನಲ್ಲಿ ದೆಹಲಿಯಲ್ಲಿ ಜರುಗಿದ ಅಲಿಪ್ತ ರಾಷ್ಟ್ರಗಳ ಶೃಂಗಸಭೆ ವಿದೇಶಾಂಗ ನೀತಿಯ ಸಾಧನೆಯಲ್ಲಿ ಮೈಲುಗಲ್ಲಾಗಿತ್ತು. ಅಲಿಪ್ತ ಚಳವಳಿಯ ಅಧ್ಯಕ್ಷ ಸ್ಥಾನದಲ್ಲಿದ್ದ ಇಂದಿರಾ ಗಾಂಧಿಯವರು ಹೊಸ ಅಂತರರಾಷ್ಟ್ರೀಯ ವ್ಯವಸ್ಥೆಯ ಸ್ಥಾಪನೆಗಾಗಿ ಶ್ರಮಿಸಿದರು. ಸೋವಿಯೆತ್ ಒಕ್ಕೂಟದೊಂದಿಗೆ ಸಂಬಂಧಗಳು ವರ್ಧನೆಯಾದರೂ ಅಮೆರಿಕದೊಂದಿಗೆ ಕುದುರಲಿಲ್ಲ. ಪಾಕಿಸ್ತಾನದ ಸೇನೆ ಸಿಯಾಚಿನ್ ಗಡಿಯಲ್ಲಿ ನಡೆಸಿದ ಕಿತಾಪತಿಗೆ ಪ್ರಧಾನಿ ದಿಟ್ಟ ಉತ್ತರ ನೀಡಿದರು. ಪಾಕ್ ಅತಿಕ್ರಮಣಕಾರರನ್ನು ಹಿಮ್ಮೆಟ್ಟಿಸಿತು ಭಾರತದ ಸೇನೆ.

ಪಂಜಾಬ್ ಪ್ರಾಂತದಲ್ಲಿ ಭುಗಿಲೆದ್ದ ಪ್ರತ್ಯೇಕವಾದಿ ಚಳವಳಿ ಇಂದಿರಾ ಗಾಂಧಿಯವರ ಜೀವಕ್ಕೇ ವಿಪತ್ತು ತಂದಿತು. ಸಂತ ಬಿಂದ್ರನ್‌ವಾಲೆ ನೇತೃತ್ವದಲ್ಲಿ ಪ್ರಾರಂಭವಾದ ಪ್ರತ್ಯೇಕ ಖಾಲಿಸ್ತಾನದ ಚಳವಳಿ ಬಿರುಸುಗೊಂಡು ಸಶಸ್ತ್ರ ಹೋರಾಟದ ಉಗ್ರರೂಪ ಪಡೆದುಕೊಂಡಿತು. ರಾಜಕೀಯವಾಗಿ ಪ್ರಬಲಗೊಳ್ಳುತ್ತಿದ್ದ ಅಕಾಲಿದಳವನ್ನು ಮುಗಿಸಲು ಪ್ರಧಾನಿ ಇಂದಿರಾ ಗಾಂಧಿ ಸಂತ ಬಿಂದ್ರನ್‌ವಾಲೆಯನ್ನು ಬಳಸಿಕೊಂಡಿದ್ದರು ಎಂಬ ಆಪಾದನೆಯೂ ಇದೆ. ಅದೇನೇ ಇರಲಿ, ಖಾಲಿಸ್ತಾನ ಪ್ರತ್ಯೇಕವಾದಿಗಳಿಗೆ ಅಮೆರಿಕದಲ್ಲಿ ನೆಲೆಸಿರುವ ಸಿಖ್ ಜನಾಂಗದವರಿಂದ, ಪಾಕಿಸ್ತಾನದ ಐಎಸ್ಐ ಗೂಢಚರ್ಯೆ ದಳದಿಂದ ಬೆಂಬಲವಿದ್ದದ್ದಂತೂ ನಿಜ. ಸಾಕಷ್ಟು ಹಣ ಮತ್ತು ಶಸ್ತ್ರಾಸ್ತ್ರಗಳು ಪ್ರತ್ಯೇಕ ವಾದಿಗಳ ಕೈಸೇರಿತ್ತು. ಒಂದು ಹಂತದಲ್ಲಿ ಅಮೃತಸರ ದಲ್ಲಿರುವ ಸಿಖ್ಖರ ಪವಿತ್ರ ಗುರುದ್ವಾರ–ಸ್ವರ್ಣಮಂದಿರ ಪ್ರತ್ಯೇಕವಾದಿಗಳ ಕೈವಶವಾಗಿ ಭದ್ರಕೋಟೆ ಯಾಯಿತು. ಶಾಂತಿಯುತವಾಗಿ ಸ್ವರ್ಣಮಂದಿರವನ್ನು ತೆರವುಗೊಳಿಸಲು ಸರಕಾರ ನಡೆಸಿದ ಪ್ರಯತ್ನ ಫಲಿಸದೇ ಹೋಯಿತು. ಪ್ರತ್ಯೇಕವಾದಿಗಳ ಅಬ್ಬರ ಭಾರತದ ಸಮಗ್ರತೆಗೆ ಸವಾಲಾಗಿತ್ತು. ಆಧುನಿಕ ಶಸ್ತ್ರಾಸ್ತ್ರಗಳಿಂದ ಸಜ್ಜಿತರಾಗಿದ್ದ ಖಾಲಿಸ್ತಾನಿವಾದಿಗಳು ದೇಶದ ಸಮಗ್ರತೆಯ ಮೇಲೆ ಯುದ್ಧವನ್ನೇ ಸಾರಿದ್ದರು. ಸಿಖ್ಖರ ಪವಿತ್ರ ಮಂದಿರದ ಮೇಲೆ ಸೇನೆಯ ಕಾರ್ಯಾಚರಣೆ ಅನಿವಾರ್ಯವೆಂದು ಬಗೆದ ಪ್ರಧಾನಿ ಇಂದಿರಾ ಗಾಂಧಿ 'ಆಪರೇಶನ್ ಬ್ಲೂ ಸ್ಟಾರ್' ಹೆಸರಿನಲ್ಲಿ ಅಮೃತಸರದ ಸ್ವರ್ಣಮಂದಿರದ ಮೇಲೆ ದಾಳಿ ನಡೆಸಿ ಪ್ರತ್ಯೇಕವಾದಿಗಳನ್ನು ಹೊರ ದೂಡಿದರು. ಈ ಕಾರ್ಯಾಚರಣೆ ಸಮರ್ಥನೀಯ ವೆನಿಸಿದರೂ ಅದು ಸಿಖ್ ಧರ್ಮೀಯರ ಮನ ಕಲಕಿತ್ತು. ಇದಾದ ಕೆಲ ತಿಂಗಳ ನಂತರ ೧೯೮೪ರ ಅಕ್ಟೋಬರ್ ೩೧ರಂದು ಮುಂಜಾನೆ ಶ್ರೀಮತಿ ಇಂದಿರಾ ಗಾಂಧಿಯವರ ಕೊಲೆಯಾಯಿತು. ಅವರ ಭದ್ರತಾ ಸಿಬ್ಬಂದಿಯಲ್ಲಿದ್ದ ಇಬ್ಬರು ಸಿಖ್ ಯೋಧರ ಗುಂಡಿನ ದಾಳಿಗೆ ಆಕೆ ಆಹುತಿಯಾದರು. ಅಲ್ಲಿಗೆ ಇಂದಿರಾ ಗಾಂಧಿಯವರ ಸುದೀರ್ಘಕಾಲದ ಆಡಳಿತ ಅಂತ್ಯಗೊಂಡಿತು.

***(ಮುಂದುವರಿಯುವುದು)***



ಸ್ವರ್ಣಮಂದಿರ, ಅಮೃತಸರ

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೭ನೇ ಕ್ರಾಸ್
ಬನಶಂಕರಿ ३ನೇ ಹಂತ, ३ನೇ ಬ್ಲಾಕ್, ಕತ್ರಿಗುಪ್ಪೆ
ಬೆಂಗಳೂರು – ೫೬೦ ೦೮೫

# ಕ್ಷ - ಕಿರಣ

- ಪ್ರಕಾಶ್ ಎಸ್.




ಕಾಮಚಂದ್ರಾಪುರ ಮಠದಲ್ಲಿ
ಪ್ರೇಮಲತೆಯ ಉರುಳು





ಸರಕಾರ ರೂಪಿಸಿದ ಸೌಲಭ್ಯಗಳ ಉದ್ದೇಶ ಜನರ ಬದುಕಿನಲ್ಲಿ ಅಭಿವೃದ್ಧಿಯನ್ನು ಸಾಧಿಸುವುದಾಗಿದೆ. ಅಭಿವೃದ್ಧಿಯನ್ನು ಎರಡು ನೆಲೆಯಲ್ಲಿ ವಿಂಗಡಿಸಿಕೊಳ್ಳಬಹುದು : ೧. ಮಾನವ ಕೇಂದ್ರಿತ ಅಭಿವೃದ್ಧಿ ೨. ಸಂಪನ್ಮೂಲ ಕೇಂದ್ರಿತ ಅಭಿವೃದ್ಧಿ. ಮಾನವ ಕೇಂದ್ರಿತ ಅಭಿವೃದ್ಧಿಯನ್ನು ಎರಡು ನೆಲೆಗಳಲ್ಲಿ ವಿಂಗಡಿಸಿಕೊಳ್ಳಬಹುದು : ೧. ಹಿಂದುಳಿಸಲ್ಪಟ್ಟಂತಹ ವರ್ಗಗಳ ಅಭಿವೃದ್ಧಿ ಹಾಗೂ ೨. ಲಿಂಗಸಂಬಂಧಗಳು ಮತ್ತು ಅಭಿವೃದ್ಧಿ.

ಹಿಂದುಳಿಸಲ್ಪಟ್ಟ ವರ್ಗಗಳಿಗೆ ಸೇರಿದ ಮಹಿಳೆಯರನ್ನು ಅಭಿವೃದ್ಧಿಗೆ ಒಳಪಡಿಸುವುದಕ್ಕಾಗಿ ಸರಕಾರವು ಸಮಾನ ಶಿಕ್ಷಣಕ್ಕಾಗಿ, ಸಮಾನ ವೇತನಕ್ಕಾಗಿ, ಸಮಾನ ರಾಜಕೀಯ ಅವಕಾಶ ಒದಗಿಸುವುದಕ್ಕಾಗಿ ಅನೇಕ ಯೋಜನೆಗಳನ್ನು ರೂಪಿಸಿದೆ. ಇಂತಹ ಯೋಜನೆಗಳ ಸೌಲಭ್ಯಗಳನ್ನು ಹಿಂದುಳಿಸಲ್ಪಟ್ಟ ವರ್ಗಗಳಿಗೆ ಸೇರಿದ ಎಲ್ಲ ಮಹಿಳೆಯರೂ ಪಡೆದುಕೊಂಡಿರುತ್ತಾರೆ ಎಂದಲ್ಲ. ಸೌಲಭ್ಯಗಳನ್ನು ಪಡೆದುಕೊಂಡವರು ಎಲ್ಲರೂ ನಿರೀಕ್ಷಿತ ಅಭಿವೃದ್ಧಿ ರೇಖೆಯೊಳಗೆ ಬರುತ್ತಾರೆಯೇ ? ಬರದೆ ಇದ್ದರೆ ಇದಕ್ಕೆ ಕಾರಣಗಳೇನು ? ಎಂಬುದನ್ನು ಕಂಡುಕೊಳ್ಳಬೇಕಿದೆ.

ರಾಜಕೀಯ ಮೀಸಲಾತಿ ಸೌಲಭ್ಯವು ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರಿಗೆ ಅನುಕೂಲಗಳನ್ನು ಕಲ್ಪಿಸಿದೆಯೇ ? ಎನ್ನುವುದನ್ನು ಗಮನಿಸಬೇಕಿದೆ. ಪಂಚಾಯತ್ ರಾಜ್ ವ್ಯವಸ್ಥೆಯ ಚುನಾಯಿತ ಹುದ್ದೆಗಳಲ್ಲಿ ೩೩%ರಷ್ಟು ಮೀಸಲಾತಿ ಅವಕಾಶ ಇರಬೇಕೆಂದು ೧೯೯೨ರಲ್ಲಿ ಸಂವಿಧಾನದ ೭೩ನೇ ತಿದ್ದುಪಡಿ ಮಸೂದೆಯನ್ನು ತಂದಿದ್ದು ನಮ್ಮೆಲ್ಲರಿಗೂ ಗೊತ್ತಿರುವ ಸಂಗತಿಯೆ. "ಪಿರಮಿಡ್‌ನ ಆಕಾರದಲ್ಲಿ ತ್ರಿಕೋನಾಕಾರವಾಗಿರುವ ಪಂಚಾಯತ್ ವ್ಯವಸ್ಥೆಯ ತಳದಲ್ಲಿ ಗ್ರಾಮ ಪಂಚಾಯತಿ, ಮಧ್ಯದಲ್ಲಿ ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತ್ ಕೆಲಸ ಮಾಡುತ್ತವೆ. ಒಟ್ಟು ಈ ವ್ಯವಸ್ಥೆಯಲ್ಲಿ ಗ್ರಾಮ ಪಂಚಾಯತಿ ಪ್ರಮುಖ ಪಾತ್ರ ವಹಿಸುವ ಅಂಗವಾಗಿದೆ. ಇದರ ಪರಿಣಾಮವಾಗಿ ದೇಶದಲ್ಲಿ ೬,೮೧,೨೫೮ ಮಹಿಳೆಯರು ಗ್ರಾಮ ಪಂಚಾಯತಿಗೆ, ೩೭,೧೦೯ ಮಹಿಳೆಯರು ತಾಲ್ಲೂಕು (ಬ್ಲಾಕ್) ಪಂಚಾಯತಿಗೆ ಮತ್ತು ೩೧೫೩ ಮಹಿಳೆಯರು ಜಿಲ್ಲಾ ಪಂಚಾಯತಿಗೆ ಆಯ್ಕೆಯಾಗಿದ್ದಾರೆ." ಗ್ರಾಮ ಪಂಚಾಯತಿಗಳಲ್ಲಿ ಹೆಚ್ಚಾಗಿ ಮಹಿಳೆಯರೇ ಇದ್ದಾರೆ. ಅದರಲ್ಲೂ ಹಿಂದುಳಿಸಲ್ಪಟ್ಟ ವರ್ಗಗಳಿಗೆ ಸೇರಿದ ಮಹಿಳೆಯರೇ ಹೆಚ್ಚಾಗಿದ್ದಾರೆ. ತಾಲ್ಲೂಕು ಪಂಚಾಯತಿಗಳಲ್ಲಿ ಮಹಿಳೆಯರ ಸಂಖ್ಯೆ ಕಡಿಮೆ. ಮೇಲ್ಜಾತಿ–ಮೇಲ್ವರ್ಗಗಳಿಗೆ ಸೇರಿದ ಮಹಿಳೆಯರೂ ಇದ್ದಾರೆ; ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರು ಕಾಣುವುದು ವಿರಳ. ಹಾಗೆಯೇ ಜಿಲ್ಲಾ ಪಂಚಾಯತಿಗಳಲ್ಲಿ ಗ್ರಾಮ ಪಂಚಾಯತಿಗಳಿಗಿಂತ, ಹಾಗೆಯೇ ತಾಲ್ಲೂಕು ಪಂಚಾಯತಿಗಳಿಗಿಂತ ಅತ್ಯಂತ ಕಡಿಮೆ ಸಂಖ್ಯೆಯಲ್ಲಿ ಮಹಿಳೆಯರಿದ್ದಾರೆ. ಬಹುಸಂಖ್ಯಾತರು ಪುರುಷರೆ. ಅತ್ಯಂತ ಕಡಿಮೆ ಸಂಖ್ಯೆಯಲ್ಲಿ ಕಾಣಿಸಿಕೊಳ್ಳುವ ಮಹಿಳೆಯರೆಲ್ಲರೂ ಉನ್ನತ ಶಿಕ್ಷಣ ಪಡೆದವರೂ, ಉನ್ನತ ವರ್ಗಕ್ಕೆ ಸೇರಿದವರೂ ಆಗಿದ್ದಾರೆ. ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರು ಜಿಲ್ಲಾ ಪಂಚಾಯತಿಗಳಲ್ಲಿ ಕಾಣಿಸುವುದು ವಿರಳ. ತಳಹಂತದಲ್ಲಿ, ಅಂದರೆ ಗ್ರಾಮ ಪಂಚಾಯತಿಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಾಣಿಸಿಕೊಳ್ಳುವ ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರು ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯತ್ ರಾಜ್ ವ್ಯವಸ್ಥೆಗಳಲ್ಲಿ ಯಾಕೆ ಅದೃಶ್ಯರಾಗುತ್ತಾರೆ ಎನ್ನುವುದರ ಕುರಿತಂತೆ ಸುದೀರ್ಘವಾದ ಅಧ್ಯಯನ ನಡೆಯುವ ಅಗತ್ಯವಿದೆ.

ರಾಜಕೀಯ ಕ್ಷೇತ್ರದಲ್ಲಿ ಗ್ರಾಮ ಪಂಚಾಯತ್‌ಗಳಲ್ಲಿ ಮಾತ್ರ ಬಹುಸಂಖ್ಯೆಯಲ್ಲಿ ಮಹಿಳೆಯರು ಅದರಲ್ಲೂ ಹಿಂದುಳಿಸಲ್ಪಟ್ಟ ವರ್ಗಗಳಿಗೆ ಸೇರಿದ ಮಹಿಳೆಯರು ಮೀಸಲಾತಿ ಗಡಿರೇಖೆಯನ್ನು ದಾಟಿ

# ಪಂಚಾಯತ್ ರಾಜ್ ವ್ಯವಸ್ಥೆ: ರಾಜಕೀಯ ಮೀಸಲಾತಿ ಅನುಷ್ಠಾನ ಸಂದರ್ಭದಲ್ಲಿನ ತೊಡಕುಗಳು



**ಡಾ॥ ಶೈಲಜ ಹಿರೇಮಠ**

ಬಹುಸಂಖ್ಯೆಯಲ್ಲಿ ಸದಸ್ಯರಾಗಿ ಹಾಗೂ ಅಧ್ಯಕ್ಷರಾಗಿ ಯಾಕೆ ಸ್ಥಾನ ಪಡೆದುಕೊಂಡಿದ್ದಾರೆ ಎನ್ನುವುದನ್ನು ವಿಶ್ಲೇಷಿಸಬೇಕಿದೆ. ಲೇಖನದ ಮಿತಿಯನ್ನು ಅನುಲಕ್ಷಿಸಿ ಎರಡು ಪ್ರಕರಣಗಳ ಅಧ್ಯಯನದೊಂದಿಗೆ ಗ್ರಾಮ ಪಂಚಾಯತಿಗಳಲ್ಲಿ ಬಹುಸಂಖ್ಯೆಯಲ್ಲಿ ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರೇ ಹೆಚ್ಚು ಸಂಖ್ಯೆಯಲ್ಲಿ ಯಾಕೆ ಕಾಣಿಸಿಕೊಳ್ಳುತ್ತಾರೆ ಎನ್ನುವುದನ್ನು ವಿಶ್ಲೇಷಿಸಲಾಗಿದೆ. ಸಿಂದಗಿ ತಾಲ್ಲೂಕಿನ ಗಣಿಯಾರದ ರೇಣುಕಾ, ಗಣಿಯಾರ ಗ್ರಾಮ ಪಂಚಾಯತಿಯಲ್ಲಿ ಎರಡು ಬಾರಿ ಸದಸ್ಯಳಾಗಿಯೂ, ಎರಡು ಬಾರಿ ಅಧ್ಯಕ್ಷಳಾಗಿಯೂ ಆಯ್ಕೆಯಾಗಿದ್ದಾಳೆ. ಗಣಿಯಾರದ ರೇಣುಕಾ ಮಾದರ ಜಾತಿಗೆ ಸೇರಿದವಳು. ಹಿಂದುಳಿಸಲ್ಪಟ್ಟ ಜಾತಿ ಹಾಗೂ ಹಿಂದುಳಿಸಲ್ಪಟ್ಟ ವರ್ಗಕ್ಕೆ ಸೇರಿದ ಗಣಿಯಾರದ ರೇಣುಕಾಳ ಆಯ್ಕೆಯನ್ನು ಗಣಿಯಾರ ಗ್ರಾಮದಲ್ಲಿನ ಅಥವಾ ಕರ್ನಾಟಕದಲ್ಲಿನ 'ಮಾದರ' ಜಾತಿಗೆ ಸೇರಿದ ಜನರು ಅಭಿವೃದ್ಧಿ ಹೊಂದಿದ್ದಾರೆ ಎನ್ನುವುದರ ಮಾಪನವನ್ನಾಗಿ ಪರಿಗಣಿಸಬೇಕೆ ? ಅಥವಾ ಮಾದರ ಜಾತಿಗೆ ಸೇರಿದ ಮಹಿಳೆಯರು ಅಭಿವೃದ್ಧಿ ಹೊಂದಿದ್ದಾರೆಂದು ಪರಿಗಣಿಸಬೇಕೆ ? ಅಥವಾ ಕೊನೆಯ ಪಕ್ಷ ಗಣಿಯಾರದ 'ಮಾದರ' ಜಾತಿಗೆ ಸೇರಿದ ಕೆಳವರ್ಗದ ರೇಣುಕಾ ಅಭಿವೃದ್ಧಿ ಹೊಂದಿದ್ದಾಳೆಂದು ಪರಿಗಣಿಸಬೇಕೆ ? ಅಥವಾ ಜಾತಿ ಮೀಸಲಾತಿ ಇಲ್ಲದೆ ಸಾಮಾನ್ಯ ಅಭ್ಯರ್ಥಿಯಾಗಿ ಸ್ಪರ್ಧಿಸಿಯೂ ರೇಣುಕಾ ಗಣಿಯಾರದ ಪಂಚಾಯತ್ ರಾಜ್ ವ್ಯವಸ್ಥೆಯ ಅಧ್ಯಕ್ಷಳಾಗಿದ್ದನ್ನೂ ಒಟ್ಟು ಗಣಿಯಾರ ಗ್ರಾಮದವರ ಪ್ರಗತಿಪರ ಧೋರಣೆ ಯೆಂದು ಪರಿಗಣಿಸಬೇಕೆ ? – ಈ ಪ್ರಶ್ನೆಗಳಿಗೆ ಉತ್ತರ ಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಎರಡು ಪ್ರಕರಣಗಳ ಅಧ್ಯಯನದ ಮೂಲಕ ಕಂಡುಕೊಳ್ಳಲು ಇಲ್ಲಿ ಪ್ರಯತ್ನಿಸಲಾಗಿದೆ.

ಹಾಡಿಕೆ ವೃತ್ತಿಯಲ್ಲಿರುವ ಗಣಿಯಾರದ ರೇಣುಕಾ ನಿರಂತರ ಹಾಡಿಕೆಯಲ್ಲಿ ತೊಡಗಿಸಿಕೊಂಡಿರುತ್ತಾಳೆ. ಅವಳು ರಾಜಕೀಯ ಜೀವನದ ಕುರಿತು ಹೇಳಿಕೊಂಡಿದ್ದಿಷ್ಟು; "ವರ್ಷದಾಗ ಹತ್ತು ತಿಂಗಳು ಪುರುಸೊತ್ತಿಲ್ಲದ ಹಾಡಕಿ ಮಾಡಿದ್ರ, ಉಳಿದ ಎರಡು ತಿಂಗಳು ಒಂದಿಲ್ಲಾ ಒಂದು ಕಡಿಗಿ ಹಾಡಕಿಗಿ ಹೋಗತಿರ್ತಿನಿ. ಪುರಸೊತ್ತು ಇದ್ದಾಗ ಪುರಾಣಗಳ ಪುಸ್ತಕಾ ಓದತಿರ್ತಿನಿ. ಹಂಗ, ಪುರಾಣಾ ಕೇಳಾಕೂ ಹೋಗತಿರ್ತಿನಿ. ಪಂಚಾಯ್ತಿ ಸದಸ್ಯಳಾಗ್ತಿನಿ, ಅಧ್ಯಕ್ಷ ಳಾಗ್ತಿನಿ ಅಂತ ಕನಸ ಮನಸ್ಸಿನ್ಯಾಗ ನೆನಸಿದವಳಲ್ಲ. ಊರಾಗಿನ ನಮ್ಮ ಗೌಡ್ರು, "ನೀನು ತಿಳಿದಾಕಿ ಅದಿ. ಪಂಚಾಯ್ತಿ ಸದಸ್ಯಳಾಗಬೇಕು" ಅಂತಂದ್ರು. "ಹಾಡಕಿ ಸಲವಂದ ನಾನು ಊರಾಗ ಇರಾಕ ಆಗುದಿಲ್ಲ ರೀ. ಮೀಟಿಂಗು–ಪೀಟಿಂಗು ಅಂತಾರ. ಮೀಟಿಂಗ್ಯೆತಿ ಅಂತ ಇಲ್ಲಿ ಕುಂತ್ರ ನಮ್ಮ ಹೊಟ್ಟಿ ಯಾರು ತುಂಬಸ್ತಾರು ? ರಾಜಕೀಯಾ ನಮ್ಮಂಥವರಿಗೆಲ್ಲಾ ಅಲ್ಲ ಬಿಡ್ರಿ." ಅಂತಂದ್ಯಾ. ಅದಕ್ಕ ಗೌಡ್ರು, "ಹುಚ್ಚಿ ಅದಿಯೇನು ? ನಿಮ್ಮಂಥವರೂ ರಾಜಕೀಯಕ್ಕ ಬರಬೇಕಂತ ಸರಕಾರದ ಆಸೆ. ನೀನೇನು ಇಲ್ಲೆ ಇರಬೇಕಂತಿಲ್ಲ. ಊರಾಗ ಇದ್ದಾಗ ನಾ ಕರಿಸಿದಾಗ ಬಂದು ಹೇಳಿದ ಕಡೆ ಸಹಿ ಮಾಡಿದ್ರ ಸಾಕು. ಉಳಿದಿದ್ದೆಲ್ಲಾ ನಾ ನೋಡ್ಕೋತಿನಿ. ದೊಡ್ಡೋರು ಅಂತ ಕರಿತೀಯಾ, ದೊಡ್ಡೋರ ಮಾತು ಮೀರೋದು ನಿನಗರs ಚಂದ ಕಾಣ್ತದೇನು ?" ಅಂತ ಗದರಿಸಿ ಎಲೆಕ್ಷನ್ನಿಗಿ ನಿಲ್ಲಿಸಿದ್ರು. ಅವ್ರ ಓಡಾಡಿ ನನ್ನಂಥಕಿನ್ನ ಗೆಲಿಸಿದ್ರು. ಪಂಚಾಯತಿ ಸದಸ್ಯಳನ್ನ ಮಾಡಿದ್ರು. ಎರ್ಡ ಸಲ ನಮ್ಮೂರ ಗ್ರಾಮ ಪಂಚಾಯತಿ ಸದಸ್ಯಳಾಗೇನಿ. ಕೂಲಿನಾಲಿ ಮಾಡು ಹೆಣ್ಣಮಕ್ಕಳ್ನ ಗೌಡ್ರು ಒಲ್ಲೆಂದ್ರೂ ಅವ್ರ್ನ ರಾಜಕೀಯಕ್ಕ ತರತಾರ. ನನ್ನಂಗ ಆರಿಸಿಬಂದ ಹೆಣ್ಣಮಕ್ಕಳು ಗೌಡ್ರ ಕರ್ದಾಗ ಹೋಗಿ ಸೈ ಮಾಡಿ ಬರ್ತಾರ. ಒಂದ ಸಲ ಗೌಡ್ರಿಗೆ ಏನನಸ್ತೋ ಏನೋ "ನೀವ ನಮ್ಮ ಊರಿನ ಪಂಚಾಯ್ತಿ ಅಧ್ಯಕ್ಷಳು ಯಾಕಾಗಬಾರ್ದು" ಅಂತಂದ್ರು. ನಾನು ಹೌರಾದ್ನಿ. "ನೀವು ಕೂಡೋ ಜಾಗದಾಗ ನಾ ಕೂಡೋದೇನ್ರಿ ? ನನಗೆಲ್ಲ ವ್ಯಾಳ್ಯಾ ಐತಿ ? ನೀವು ಸೈ ಮಾಡಂದಲ್ಲಿ ಮಾಡಕಿ ನಾನು. ನನಗ ಸಭಾ ಗಿಭಾ ನಡಿಸಿಕೊಂಡು ಹೋಗಾಕ ಆಗೂದಿಲ್ಲ" ಅಂತಂದೆ. "ನಿನಗ್ಯಾರ ನಡಸಕೊಂಡು ಹೋಗು ಅಂತಂದ್ರು. ಸದಸ್ಯಳಿದ್ದಾಗ ಹ್ಯಾಂಗಿದ್ದಿ ಹಾಂಗ ಇರು. ನಾನೆಲ್ಲ ನಡಸಕೊಂಡು ಹೋಗ್ತೀನಿ. ನೀ ಅದರ ಚಿಂತಿಬಿಡು" ಅಂತಂದ್ರು. ಗೌಡ್ರ ಹೇಳಿದಂಗ ಸಭಾ ನಡಸಕೊಂಡು ಹೋಗ್ತಾರು. ಅಧ್ಯಕ್ಷಳಾಗಿ ಇರಬೇಕಂತೇನಿಲ್ಲ. ನಾನು ಊರಿಗಿ ಬಂದಾಗ ನನ್ನ ಕಡಿಲಿಂದ ಎಲ್ಲಲ್ಲಿ ಬೇಕೋ ಅಲ್ಲಲ್ಲಿ ಸಹಿ ಮಾಡಿಸ್ಕೋತಾರು. ನಾನು ಪಂಚಾಯ್ತಿಗೆ ಹೋದ್ರ ಎಲ್ಲ್ರೂ ಬಾಳs ಗೌರವ ಕೊಡತಾರು."

ಹಾಡಕಿ ವೃತ್ತಿಯಲ್ಲಿ ಇರುವ ಮದನಹಳ್ಳಿ ಭೀಮಾಬಾಯಿಯ ಅನುಭವ ಗಣಿಯಾರದ ರೇಣುಕಾಗಿಂತ ಭಿನ್ನವಾಗಿದೆ. ಮದನಹಳ್ಳಿ ಭೀಮಾಬಾಯಿ ರಾಜಕೀಯ ಬದುಕು ಭದ್ರಗೊಂಡರೆ ಹಾಡಿಕೆ ವೃತ್ತಿಗೆ ವಿದಾಯ ಹೇಳಲು ಸಿದ್ಧವಿದ್ದವಳು. ಅವಳೆಷ್ಟೇ ಪ್ರಯತ್ನಿಸಿದ್ರೂ ರಾಜಕೀಯದ ಬಾಗಿಲು ತೆರೆಯಲೇ ಇಲ್ಲ. ಗಣಿಯಾರದ ರೇಣುಕಾಳಂತೆ ಇವಳೂ ಹಾಡಿಕೆ ವೃತ್ತಿಯಲ್ಲಿರುವವಳು. ಮಾದರ ಜಾತಿಗೆ ಸೇರಿದವಳು. ಮದನಹಳ್ಳಿಯ ಗ್ರಾಮ ಪಂಚಾಯತಿಯ ಸದಸ್ಯಳಾಗುವ ಆಸೆಯಿಂದ ಐದು ಬಾರಿ ಚುನಾವಣೆಗೆ ನಿಂತವಳು. ಸ್ಪರ್ಧಿಸಿದ ಐದು ಬಾರಿಯೂ ಊರಿನ ಮುಖಂಡರು ಹಾಗೂ ಆಕೆಯ ಸಮುದಾಯದ ಜನರಿಂದ ಅದರಲ್ಲೂ ವಿಶೇಷವಾಗಿ ಪುರುಷರಿಂದ 'ವಿಶೇಷವಾಗಿ' ಸೋಲಿಸಲ್ಪಟ್ಟವಳು. ಕಾರಣ ಇಷ್ಟೇ, ಮದನಹಳ್ಳಿ ಭೀಮಾಬಾಯಿ ರಾಜಕೀಯ ಮಹತ್ವಾಕಾಂಕ್ಷೆಯನ್ನು ಹೊಂದಿದವ ಳಾಗಿದ್ದಳು. ಸ್ವತಂತ್ರ ಮನೋಭಾವವನ್ನು ರೂಢಿಸಿ ಕೊಂಡವಳು. ಓದಲು ಸರಿಯಾಗಿ ಬರದೇ ಇದ್ದರೂ, ಬೇರೆಯವರಿಂದ ಆಡಳಿತದ ವಿಷಯ ತಿಳಿದುಕೊಂಡು ಸ್ವತಂತ್ರವಾಗಿ ಆಡಳಿತ ನಡೆಸುವ ಇರಾದೆ ಹೊಂದಿದವಳು. ಯಾರೊಬ್ಬರಿಗೂ ತಲೆಬಾಗು ವವಳಲ್ಲ. ತನ್ನ ಆಡಳಿತದಲ್ಲಿ ಮತ್ತೊಬ್ಬರ ಹಸ್ತಕ್ಷೇಪ ಸಹಿಸದವಳು. ತನ್ನ ನಿರ್ಧಾರವನ್ನು ನೇರವಾಗಿ ಅಭಿವ್ಯಕ್ತಿಸುವವಳು. ತನ್ನ ಕನಸಿನ ಯೋಜನೆಯನ್ನು ಜಾರಿಗೊಳಿಸುವಂತೆ ಒತ್ತಾಯಿಸುವವಳು. ಪಂಚಾಯತಿ

ಪಂಚಾಯತ್ ವ್ಯವಸ್ಥೆಯಲ್ಲಿನ ಮಹಿಳಾ ಮೀಸಲಾತಿ ಕುರಿತಂತೆ ಕೆಲವು ಅಪರೂಪದ ಬರಹಗಳನ್ನು ಹೊರತುಪಡಿಸಿದಂತೆ ಪ್ರಕಟಗೊಂಡ ಮಾಹಿತಿಯನ್ನು ಗಮನಿಸಬೇಕು. ಮಹಿಳಾ ಅಸಾಮರ್ಥ್ಯವನ್ನು ಮಾತ್ರ ಅನಾವರಣಗೊಳಸುವ ಇಂತಹ ಬರಹಗಳ ಹಿಂದಿನ ಉದ್ದೇಶ ಸ್ಪಷ್ಟ ; ಮಹಿಳೆಯರಿಗೆ ಅವಕಾಶ ನೀಡಿದ ನಂತರವೂ ಪುರುಷರೇ ಆಡಳಿತ ನಡೆಸುವುದಾದರೆ; ಅಥವಾ ಅದಕ್ಕೆ ಮಹಿಳೆಯರು ಸಮ್ಮತಿಸುವುದಾದರೆ ಮಹಿಳಾ ಮೀಸಲಾತಿ ಅಗತ್ಯವಿಲ್ಲ ಎನ್ನುವ ಧೋರಣೆಯನ್ನೇ ವ್ಯಕ್ತಪಡಿಸುತ್ತದೆ. ಹಾಗೂ ಮಹಿಳೆಯರಿಗೆ, ಹಿಂದುಳಸಲ್ಪಟ್ಟ ವರ್ಗಗಳ ಮಹಿಳೆಯರಿಗೆ ಮೀಸಲಾತಿ ಬೇಕಿಲ್ಲ ಎನ್ನುವ ನಿಲುವನ್ನು ಸಾಮಾಜಿಕ ಅಭಿಪ್ರಾಯವನ್ನಾಗಿ ರೂಪಿಸುವ ರಾಜಕಾರಣವನ್ನು ಮಾಡುತ್ತಿರುತ್ತದೆ. ಗ್ರಾಮಸಭೆಗಳಿಗೆ ಸದಸ್ಯರಾಗಿ ಆಯ್ಕೆಯಾದ ಮಹಿಳೆಯರು ಗ್ರಾಮಸಭೆಗಳಿಗೆ ಬಾರದೇ ಇರುವುದನ್ನು, ಆಕೆಯ ಅಸಾಮರ್ಥ್ಯದ ಮಾಪನವನ್ನಾಗಿ ಅರ್ಥೈಸಲಾಗುತ್ತದೆ; ಆಯ್ಕೆಗೊಂಡ ಕೆಲ ಮಹಿಳಾ ಸದಸ್ಯರು ಗ್ರಾಮಸಭೆಗಳಿಗೆ ಹಾಜರಾಗದೆ ಇರುವುದಕ್ಕೆ, ಅವರ ಕುಟುಂಬದ ಪುರುಷರು ಚುನಾಯಿತ ಸದಸ್ಯರಂತೆ ಹಾಜರಾಗುವುದಕ್ಕೆ ಕಾರಣಗಳನ್ನು ಶೋಧಿಸುವುದಿಲ್ಲ. ಇಂತಹ ಕೆಲವು ಉದಾಹರಣೆ ಗಳನ್ನು ಇಟ್ಟುಕೊಂಡು ಎಲ್ಲಾ ಮಹಿಳೆಯರಿಗೂ ಅನ್ವಯಿಸಿ, ಮಹಿಳೆಯರು ಅಸಮರ್ಥರು ಎಂದು ಬಿಂಬಿಸುವ ಧೋರಣೆಯ ಹಿಂದೆ, ರಾಜಕೀಯ ಮೀಸಲಾತಿಯು ಉಂಟುಮಾಡಿದ ಸಾಮಾಜಿಕ ಸಂಚಲನವನ್ನು ಸಹಿಸದ ವ್ಯವಸ್ಥೆಯ ನೆರಳಿದೆ.

ಸದಸ್ಯಳಾಗಿ ಆಯ್ಕೆಗೊಂಡ ಮೇಲೆ ಅಧ್ಯಕ್ಷ ಪಟ್ಟವನ್ನು ಅಲಂಕರಿಸುವ ಅದಮ್ಯ ಛಲ ಹೊಂದಿದವಳು; ಎಂ.ಎಲ್.ಎ. ಆಗುವ ಕನಸುಗಳನ್ನು ಚಿಗುರಿಸಿ ಕೊಂಡವಳು. ಭೀಮಾಬಾಯಿಯ ಜೀವನೋತ್ಸಾಹ, ಮಹತ್ವಾಕಾಂಕ್ಷೆಗಳಿಗೆ ಊರಿನ ಮುಖಂಡರನ್ನು ಒಳಗೊಂಡಂತೆ ಎಲ್ಲರೂ ಭಯಗೊಂಡಿದ್ದರು. "ಭೀಮಾಬಾಯಿ ಹೆಣ್ಣೇ ಅಲ್ಲ. ಗಂಡಸರಿಗೆ ಮರ್ಯಾದಿ ಕೊಡುದಿಲ್ಲ. ಗಂಡಸರನ್ನು ಕಂಡರೆ ತಲೆ ಮೇಲೆ ಸೆರಗು ಹಾಕಿಕೊಳ್ಳುವುದಿಲ್ಲ. ತಾನೇ ಎಲ್ಲವನ್ನು ಬಲ್ಲವರ ಹಾಗೆ ಮಾತಾಡ್ತಾಳೆ. ಹೆಂಗಸಿಗಿ ಎಷ್ಟು ತಿಳುವಳಿಕೆ ಇದ್ದೀತು ? ಅದಕ್ಕ ನಾವು ಆಕಿನ್ನ ಸೋಲ್ಸವಿ", ಎಂದು ಆಕೆಯ ಜಾತಿ ಸಮುದಾಯಕ್ಕೆ ಸೇರಿದ ಜನರು, ಅದರಲ್ಲೂ ಪುರುಷರು ಹೇಳುತ್ತಾರೆ; ಮೇಲ್ಜಾತಿಯ ಪುರುಷರೂ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಮಹಿಳೆಯರು ಕೂಡ ಮದನಹಳ್ಳಿಯ ಎಲ್ಲ ಪುರುಷರ ಧೋರಣೆಯನ್ನೇ ಹೇಳುತ್ತಾರೆ. ಇಂತಹ ವಾತಾವರಣದಲ್ಲೂ ಮದನಹಳ್ಳಿ ಭೀಮಾಬಾಯಿ ಐದು ಬಾರಿ ಹಟ ಬಿಡದೇ ಸ್ಪರ್ಧಿಸಿದ್ದಳು (ದುರ್ದೈವದಿಂದ ಮದನಹಳ್ಳಿ ಭೀಮಾಬಾಯಿ ೨೦೧೨ರಂದು ವಿಧಿವಶಳಾಗಿದ್ದಾಳೆ). ಮದನಹಳ್ಳಿ ಗ್ರಾಮದ ಅಂತರಂಗದಲ್ಲಿ ಜಾತಿ ಸಂಘರ್ಷಗಳು, ವರ್ಗ ಸಂಘರ್ಷಗಳು ಇದ್ದರೂ ಭೀಮಾಬಾಯಿಯನ್ನು ಸೋಲಿಸುವ ವಿಷಯದಲ್ಲಿ, ಇವೆಲ್ಲವನ್ನೂ ಮೀರಿ ಗ್ರಾಮದವರೆಲ್ಲ ಒಂದಾಗು ತ್ತಿದ್ದರು. 'ಜಾತಿ ಮೀಸಲಾತಿ' ಅಡಿಯಲ್ಲಿ ಗ್ರಾಮ ಪಂಚಾಯತಿ ಚುನಾವಣೆಗೆ ಸ್ಪರ್ಧಿಸಿದರೆ, ಭೀಮಾಬಾಯಿ ಸೇರಿದ ಜಾತಿಯಿಂದ (ಮಾದರ) ಮತ್ತೊಬ್ಬ ಮಹಿಳಾ ಸ್ಪರ್ಧಿಯನ್ನು ಅವಳೆದುರು ನಿಲ್ಲಿಸಿ, ಅವಳಿಗೆ ಬರುವ ವೋಟಿಗೆ ಕತ್ತರಿ ಹಾಕುತ್ತಿದ್ದರು. ಹೀಗಾಗಿ ಮಹಾನ್ ಮಹತ್ವಾಕಾಂಕ್ಷಿಯಾದ ಮದನಹಳ್ಳಿ ಭೀಮಾಬಾಯಿ ಒಂದು ಬಾರಿಯೂ ತನ್ನೂರಿನ ಗ್ರಾಮ ಪಂಚಾಯತಿಗೆ ಆಯ್ಕೆಯಾಗಲೇ ಇಲ್ಲ. ಇಡೀ ಗ್ರಾಮವೇ ಒಂದಾಗಿ ಆಕೆಯ ರಾಜಕೀಯ ಆಕಾಂಕ್ಷೆ ಗಳನ್ನು ಚಿಗುರೊಡೆಯದಂತೆ ನೋಡಿಕೊಂಡಿತು. ಇನ್ನು ಆಕೆ ಎಂ.ಎಲ್.ಎ. ಆಗುವ ಮಾತಂತೂ ದೂರ ಉಳಿಯಿತು.

ಮೇಲಿನ ಎರಡೂ ಪ್ರಕರಣಗಳು ಗ್ರಾಮಮಟ್ಟದ ರಾಜಕೀಯಕ್ಕೆ ಸಂಬಂಧಿಸಿದವುಗಳೇ ಆದರೂ, ಇವೆರಡೂ ಸಂಪೂರ್ಣ ಭಿನ್ನವಾಗಿವೆ. ಗ್ರಾಮಮಟ್ಟದ ಪಂಚಾಯತ್ ರಾಜಕಾರಣವಾದರೂ ಎಂತಹ ಮಹಿಳೆಯರು ರಾಜಕಾರಣದಲ್ಲಿ ಪ್ರವೇಶಿಸಬೇಕು, ಎಂತಹ ಮಹಿಳೆಯರು ಪ್ರವೇಶಿಸಬಾರದು ಎನ್ನುವುದನ್ನು ಗ್ರಾಮದ ಪುರುಷ ಪ್ರಧಾನತೆ ನಿರ್ಧರಿಸುತ್ತದೆ. ಗ್ರಾಮದಲ್ಲಿ ಅತ್ಯಂತ ಢಾಳಾಗಿರುವ ಜಾತಿ ಶ್ರೇಣೀಕೃತ, ವರ್ಗ ಶ್ರೇಣೀಕೃತ ವ್ಯವಸ್ಥೆಗಳೇ ಒಟ್ಟು ಗ್ರಾಮದ ಪುರುಷ ಪ್ರಾಧಾನ್ಯತೆಯನ್ನು ರೂಪಿಸುತ್ತವೆ. ಜಾತಿಗಳು ಪುರುಷ ಕೇಂದ್ರಿತವಾಗಿರು ವುದರಿಂದ, ಪ್ರತಿಯೊಂದು ಜಾತಿಯು ತನ್ನದೇ ಆದ ಪುರುಷ ಪ್ರಾಧಾನ್ಯತೆಯನ್ನು ಹೊಂದಿರುತ್ತದೆ; ಹಾಗೆಯೇ ಆಯಾ ಜಾತಿಗನುಗುಣವಾಗಿ ರೂಪುಗೊಂಡ ವರ್ಗ




ಶ್ರೇಣೀಕರಣಗಳು ಕೂಡ ತಮ್ಮದೇ ಆದ ಲಿಂಗ ಶ್ರೇಣೀಕೃತ ಮೌಲ್ಯಗಳನ್ನು ಹೊಂದಿರುತ್ತವೆ. ಒಂದೇ ಜಾತಿಗೆ ಸೇರಿದ ಜನರು ಕೂಡ ಒಂದೇ ಬಗೆಯ ಆರ್ಥಿಕ ಸ್ಥಾನಮಾನಗಳನ್ನು ಹೊಂದಿರುವುದಿಲ್ಲ. ಒಂದೇ ಜಾತಿಯವರಾಗಿದ್ದರೂ, ಅವರವರ ಆರ್ಥಿಕ ಸ್ಥಾನಮಾನಗಳಿಗೆ ಅನುಗುಣವಾಗಿ ಸ್ತ್ರೀ–ಪುರುಷರ ಸ್ಥಾನಮಾನಗಳು ಭಿನ್ನವಾಗಿರುತ್ತವೆ. ಹೀಗೆ ಒಂದು ಗ್ರಾಮದಲ್ಲಿನ ಜಾತಿಗನುಗುಣವಾದ ಪುರುಷ ಪ್ರಾಧಾನ್ಯತೆಗಳು, ಆಯಾ ಜಾತಿಯೊಳಗಿನ ವರ್ಗ ಶ್ರೇಣೀಕರಣಕ್ಕನುಗುಣವಾಗಿರುವ ಲಿಂಗ ತಾರತಮ್ಯದ ನೆಲೆಗಳು, ಜಾತಿಗನುಗುಣವಾಗಿ ರೂಪುಗೊಂಡ ವರ್ಗ ಶ್ರೇಣೀಕೃತದಲ್ಲಿನ ಹೆಣ್ಣು ಗಂಡಿನ ಸ್ಥಾನಮಾನಗಳು – ಗ್ರಾಮದಲ್ಲಿ ಪುರುಷ ಪ್ರಧಾನತೆಯನ್ನು ತುಂಬ ಬಲಾಢ್ಯವಾಗಿ ರೂಪಿಸಿರುತ್ತವೆ. ಆಯಾ ಪ್ರಾದೇಶಿಕತೆಗೆ ಅನುಗುಣವಾಗಿ, ಆಯಾ ಪ್ರದೇಶದೊಳಗಿರುವ ಗ್ರಾಮದ ಪುರುಷ ಪ್ರಧಾನತೆಯು ಭಿನ್ನವಾಗಿರುತ್ತದೆ. ಇಂತಹ ಗ್ರಾಮೀಣ ಪ್ರದೇಶಗಳಲ್ಲಿ ಸರಕಾರದಿಂದ ರೂಪುಗೊಂಡ ಲಿಂಗ ಸಮಾನತೆಯ ಆಶಯವುಳ್ಳ ಯೋಜನೆಗಳು, ಯಥಾವತ್ತಾಗಿ ಜಾರಿಗೊಳ್ಳುತ್ತವೆ ಎಂದು ಹೇಳಲಾಗುವುದಿಲ್ಲ. ಸಂವಿಧಾನಾತ್ಮಕ ನೆಲೆಯಲ್ಲಿ ಅದೆಷ್ಟೇ ಯೋಜನೆಗಳನ್ನು ರೂಪಿಸಿದರೂ, ಗ್ರಾಮದೊಳಗಿನ ಪುರುಷನಿಷ್ಠ ಮೌಲ್ಯಗಳು ಅವನ್ನು ತಟಸ್ಥಗೊಳಿಸುತ್ತವೆ; ತಮ್ಮ ಅಗತ್ಯಕ್ಕೆ ತಕ್ಕಂತೆ ಸರಕಾರದ ಯೋಜನೆಗಳನ್ನು ತಮ್ಮದೇ ಯೋಜನೆಗಳನ್ನಾಗಿ ಮಾರ್ಪಡಿಸಿಕೊಳ್ಳುತ್ತವೆ. ತಮ್ಮ ಅಪೇಕ್ಷೆಗೆ ತಕ್ಕಂತೆ ಹೊಂದಿಕೊಳ್ಳದವರನ್ನು ಹಾಗೂ ರೂಪುಗೊಳ್ಳದವರನ್ನು ಅಸ್ತಿತ್ವವಿಲ್ಲದಂತೆ ಸಂಪೂರ್ಣವಾಗಿ ಪಾತಾಳಕ್ಕೆ ತಳ್ಳುತ್ತವೆ. ಇವೆರಡಕ್ಕೂ ಅತ್ಯುತ್ತಮ ಉದಾಹರಣೆಗಳೆಂದರೆ ಗಣಿಯಾರದ ರೇಣುಕಾ ಹಾಗೂ ಮದನಹಳ್ಳಿ ಭೀಮಾಬಾಯಿ. ಇಬ್ಬರೂ ಜಾತಿಶ್ರೇಣೀಕರಣದಲ್ಲಿ ಅತ್ಯಂತ ಕೆಳಹಂತದ ಜಾತಿಗೆ ಸೇರಿದ ಮಹಿಳೆಯರೇ. ಆದರೂ ಇಬ್ಬರ ರಾಜಕೀಯ ಪ್ರಕರಣಗಳು ಭಿನ್ನ ವಾಗಿವೆ. ಹಾಡಿಕೆ ವೃತ್ತಿಯನ್ನೇ ಬದುಕಾಗಿಸಿಕೊಂಡ ಗಣಿಯಾರದ ರೇಣುಕಾಳಿಗೆ ರಾಜಕೀಯ ಜೀವನದ ಕುರಿತು ಯಾವ ಆಸಕ್ತಿಯೂ ಇಲ್ಲ. ಆದರೂ, ಊರ ಮುಖಂಡರನ್ನು ಒಳಗೊಂಡಂತೆ, ಇಡೀ ಗ್ರಾಮದೊಳಗಿನ ಪುರುಷ ಪ್ರಾಧಾನ್ಯತೆಯು ಅವಳನ್ನು ರಾಜಕೀಯ ಜೀವನದಲ್ಲಿರುವಂತೆ ಬಯಸುತ್ತದೆ; ಒತ್ತಾಯಿಸುತ್ತದೆ; ನಿರ್ಧರಿಸುತ್ತದೆ; ಹಾಗೂ ನಿರ್ದೇಶಿಸುತ್ತದೆ. ಅವಳೆಷ್ಟೇ ತಿರಸ್ಕರಿಸಿದರೂ ಗ್ರಾಮ ದಲ್ಲಿನ ಪುರುಷಾಧಿಕಾರವು ಅವಳನ್ನು ಹಾಗೂ ಅವಳಂತೆ ಇರುವ ಬಡ ಕೆಳವರ್ಗದ ಹೆಣ್ಣುಮಕ್ಕಳನ್ನು ಗ್ರಾಮಮಟ್ಟದ ರಾಜಕೀಯ ಜೀವನಕ್ಕೆ ತರುತ್ತದೆ. ಸದಾ ಹಾಡಿಕೆಯ ಗುಂಗಿನಲ್ಲಿರುವ, ಜೀವನದ ಬಗ್ಗೆ ಮಹಾ ವೈರಾಗ್ಯ ತಾಳಿರುವ ಗಣಿಯಾರದ ರೇಣುಕಾಳನ್ನು ಮೀಸಲಾತಿಯಲ್ಲಷ್ಟೇ ಅಲ್ಲ, ಸಾಮಾನ್ಯ ಅಭ್ಯರ್ಥಿಯಾಗಿಯೂ ಗೆಲ್ಲಿಸುತ್ತದೆ. ಸತತ ಮೂರನೆಯ ಬಾರಿ ಗ್ರಾಮ ಪಂಚಾಯತಿಯ ಅಧ್ಯಕ್ಷಳನ್ನಾಗಿಸುತ್ತದೆ. ರಾಜಕೀಯ ಎನ್ನುವುದು ನಿರಂತರ ಸಂಘರ್ಷದ ಬದುಕು. ದೇವದಾಸಿಯಾದ ಕಾರಣಕ್ಕಾಗಿ, ಹಾಡಿಕೆ ವೃತ್ತಿಯಲ್ಲಿದ್ದ ಕಾರಣಕ್ಕಾಗಿ ಹಲವಾರು ಸಂಘರ್ಷ ಗಳನ್ನು ನಿತ್ಯವೂ ಎದುರಿಸುವ ಗಣಿಯಾರದ ರೇಣುಕಾಳಿಗೆ ಮತ್ತೆ ಹೊಸ ಸಂಘರ್ಷದ ಬದುಕನ್ನು ಆಹ್ವಾನಿಸಲು ಇಷ್ಟವಿಲ್ಲ. ಅವಳ ಮನಃಸ್ಥಿತಿಯನ್ನು ಗ್ರಾಮದಲ್ಲಿ ಮುಂಚೂಣಿಯಲ್ಲಿರುವ ಪುರುಷರು ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರೆ. ಹೀಗಾಗಿಯೇ ರಾಜಕೀಯ ಎಂದರೆ ಮಾರುದೂರ ಹೋಗುವ ಆಕೆಯನ್ನು ಎಳೆದೆಳೆದು ಮೀಸಲಾತಿಯಲ್ಲಷ್ಟೇ ಅಲ್ಲ, ಸಾಮಾನ್ಯ ಅಭ್ಯರ್ಥಿಯಾಗಿ ಗೆಲ್ಲಿಸಿ ಅಧ್ಯಕ್ಷಳನ್ನಾಗಿಸುತ್ತಾರೆ.

ಆದರೆ ಹಾಡಿಕೆ ವೃತ್ತಿಗೆ ವಿದಾಯ ಹೇಳಿ ರಾಜಕೀಯ ಭವಿಷ್ಯವನ್ನು ಅಪೇಕ್ಷಿಸುತ್ತಿದ್ದ ಮದನಹಳ್ಳಿ ಭೀಮಾಬಾಯಿಯನ್ನು ಇಡೀ ಗ್ರಾಮವೇ ತನ್ನ ಒಳಜಗಳ ಗಳನ್ನೆಲ್ಲ ಮರೆತು ಒಂದಾಗಿ ಸೋಲಿಸಲೇಬೇಕೆಂದು ಪಟ್ಟು ಹಿಡಿದು ಸೋಲಿಸುತ್ತದೆ. ಮದನಹಳ್ಳಿ ಭೀಮಾಬಾಯಿಯೊಳಗಿನ ಆಲೋಚನಾ ಶಕ್ತಿ, ನಿರ್ಧಾರಕ ಶಕ್ತಿಗಳು ಇಡೀ ಗ್ರಾಮದ ಪುರುಷ ಪ್ರಾಧಾನ್ಯತೆಯನ್ನೇ ಅಧೀರರನ್ನಾಗಿಸುತ್ತದೆ. ಹೀಗಾಗಿಯೇ ಆಕೆ ಐದು ಬಾರಿ ಎಲೆಕ್ಷನ್‌ಗೆ ನಿಂತರೂ, ಪಟ್ಟುಹಿಡಿದು ಗೆಲ್ಲದಂತೆ ಮದನಹಳ್ಳಿ ಗ್ರಾಮವು ನೋಡಿಕೊಳ್ಳುತ್ತದೆ. ಹೀಗಾಗಿ ಮಹಿಳೆಯರಿಗೆ ಅಥವಾ ಹಿಂದುಳಿದ ಮಹಿಳೆಯರಿಗೆ ರಾಜಕೀಯ ಮೀಸಲಾತಿಯನ್ನು ರೂಪಿಸಿ ಜಾರಿಗೊಳಿಸಿದ ತಕ್ಷಣ, ಅವು ಅವರಿಗೆ

ತಲುಪುತ್ತವೆ ಎಂದು ಹೇಳಲಾಗುವುದಿಲ್ಲ. ಸರಕಾರವು ಮಹಿಳೆಯರ ಪರ, ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರ ಪರ ಯೋಜನೆಗಳನ್ನು ಜಾರಿಗೊಳಿಸಿದರೂ, ಅದನ್ನು ನಿಷ್ಕ್ರಿಯಗೊಳಿಸುವ ಪ್ರಯತ್ನ ಈ ವ್ಯವಸ್ಥೆಯಲ್ಲಿ ನಿರಂತರವಾಗಿ ನಡೆದೇ ಇರುತ್ತದೆ.

ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರ ಕುರಿತಾದ ರಾಜಕೀಯ ಭಾಗವಹಿಸುವಿಕೆಯನ್ನು ಸಾಮಾಜಿಕ ವ್ಯವಸ್ಥೆಯು ಎರಡು ನೆಲೆಗಳಲ್ಲಿ ನಿಷ್ಕ್ರಿಯಗೊಳಿಸಲು ನಿರಂತರವಾಗಿ ಪ್ರಯತ್ನಿಸುತ್ತದೆ:

೧. ರಾಜಕೀಯದಲ್ಲಿ ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರು ಪ್ರವೇಶಿಸಲು ಪ್ರಯತ್ನಿಸಿದರೂ, ಪುರುಷನಿಷ್ಠ ಮೌಲ್ಯಗಳು ರಾಜಕೀಯ ಕುತಂತ್ರಗಳನ್ನು ಹೆಣೆಯುತ್ತವೆ; ಆ ಮೂಲಕ ಮಹಿಳಾ ಪ್ರಯತ್ನಗಳನ್ನು ನಿರಸನಗೊಳಿಸುತ್ತವೆ; ಮಹಿಳೆಯರು ರಾಜಕೀಯದಲ್ಲಿ ಪಾಲ್ಗೊಳ್ಳದಂತೆ ಮಾಡುತ್ತವೆ. ೨. ತಾವು ಪ್ರಗತಿಯಲ್ಲಿ ಇದ್ದೇವೆ ಎಂದು ತೋರಿಸಿಕೊಳ್ಳಲು ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರನ್ನು ಯೋಜನೆಗಳಲ್ಲಿ ಪಾಲ್ಗೊಳ್ಳುವಂತೆ ಮಾಡುತ್ತವೆ. ಇಂತಹ 'ಪ್ರಗತಿಪರರು' ತಾವು ನಿರ್ದೇಶಿಸಿದಂತೆ ನಡೆಯುವ ಮಹಿಳೆಯರನ್ನು ಮಾತ್ರ ಆಯ್ಕೆಮಾಡುತ್ತಾರೆ. ದಾಖಲೆಯಲ್ಲಿ ಮಾತ್ರ ಮಹಿಳೆಯರು ರಾಜಕೀಯ ಮೀಸಲಾತಿಯ ಫಲಾನುಭವಿಗಳಾಗಿರುತ್ತಾರೆ; ಆದರೆ ಕ್ರಿಯಾನೆಲೆಯಲ್ಲಿ ಅಕ್ಷರಶಃ ಅದರ ಫಲಾನುಭವಿಗಳು ಪುರುಷರೇ ಆಗಿರುತ್ತಾರೆ.

ಗ್ರಾಮ ಪಂಚಾಯತಿಯಲ್ಲಿ, ಗ್ರಾಮದೊಳಗಿನ ಪುರುಷಾಧಿಕಾರವು ತಂದೊಡ್ಡುವ ಇಕ್ಕಟ್ಟಿನ ನಡುವೆಯೂ, ಯಶಸ್ವಿ ಆಡಳಿತ ನಡೆಸಿದ ಮಹಿಳೆಯರಿದ್ದಾರೆ. ಪತ್ರಿಕಾ ಕ್ಷೇತ್ರವು ಪುರುಷಕೇಂದ್ರಿತವಾಗಿ ಇರುವುದರಿಂದ ಉತ್ತಮ ಆಡಳಿತ ನಡೆಸಿದಂತಹ ಮಹಿಳೆಯರ ಸಾಧನೆಗಳನ್ನು ಬೆಳಕಿಗೆ ತರುವುದಿಲ್ಲ. ಬದಲಾಗಿ ಗ್ರಾಮ ಪಂಚಾಯತಿಯಲ್ಲಿ ಚುನಾಯಿತರಾದ ಮಹಿಳಾ ಸದಸ್ಯರು ಅಥವಾ ಮಹಿಳಾ ಅಧ್ಯಕ್ಷರ ಬದಲಿಗೆ ಅವರ ಗಂಡಂದಿರು, ಇಲ್ಲವೆ ಮಾವಂದಿರು, ಇಲ್ಲವೆ ಅಣ್ಣಂದಿರು ಕುಳಿತುಕೊಳ್ಳುತ್ತಾರೆ ಎನ್ನುವುದನ್ನು ಅತ್ಯಂತ ವ್ಯಂಗ್ಯವಾಗಿ ಪತ್ರಿಕೆಯವರು ಚಿತ್ರಿಸುತ್ತಾರೆ. ಇಂತಹ ಚಿತ್ರಣಗಳು ಮಹಿಳಾ ಪ್ರತಿನಿಧೀಕರಣದ ಭಾಗವಾಗಿಯೇ ಕಾಣಿಸಿಕೊಳ್ಳುತ್ತವೆ; ಈ ಬಗೆಯ ಪ್ರತಿನಿಧೀಕರಣಗಳು 'ಮಹಿಳೆಯರಿಗೆ ರಾಜಕೀಯ ಸಾಮರ್ಥ್ಯವಿರುವುದಿಲ್ಲ' ಎನ್ನುವುದನ್ನು ಬೆಂಬಲಿಸುತ್ತಿರುತ್ತವೆ; ನಿರ್ವಚಿಸುತ್ತವೆ. ಇತ್ತೀಚಿಗೆ ಪ್ರಜಾವಾಣಿಯು ಪಂಚಾಯತ್ ರಾಜ್ ಕುರಿತಂತೆ ವಿಶೇಷ ಮಾಹಿತಿಗಳನ್ನು ಪ್ರಕಟಿಸಿತು. ಇಲ್ಲಿನ ಕೆಲವು ಲೇಖನಗಳು ಪಂಚಾಯತ್ ಆಡಳಿತ ವ್ಯವಸ್ಥೆಯಲ್ಲಿ ಮಹಿಳಾ ಸದಸ್ಯರ ಸಮಸ್ಯೆಗಳನ್ನು ಗುರುತಿಸಿದಂತೆ, ಅವರ ಸಾಧನೆಗಳನ್ನು ಗುರುತಿಸಿವೆ. ಕೋಲಾರ ಜಿಲ್ಲೆಯ ವಿಟ್ಟೂರಿನ ಕುರಿತಂತೆ ೨೦.೧.೨೦೧೪ರಲ್ಲಿ ಪ್ರಜಾವಾಣಿಯಲ್ಲಿ 'ವಿಟ್ಟೂರಿನ ಪಂಚಾಯತ್ ವಸಂತ' ಎನ್ನುವ ಲೇಖನ ಪ್ರಕಟಗೊಂಡಿತು. ವಿಟ್ಟೂರಿನಲ್ಲಿ ಒಟ್ಟು ಪಂಚಾಯತ್ ಸದಸ್ಯರು ೧೩ ಜನರು; ಇವರಲ್ಲಿ ಆರು ಜನ ಮಹಿಳಾ ಸದಸ್ಯರು; ಏಳು ಜನ ಪುರುಷ ಸದಸ್ಯರು. ವಿಟ್ಟೂರಿನ ಗ್ರಾಮ ಪಂಚಾಯತಿಯ ಅಧ್ಯಕ್ಷೆ ಕೂಡ ಮಹಿಳೆಯೇ ಆಗಿದ್ದಾಳೆ. ಅಗತ್ಯ ಬಿದ್ದಾಗ ಗ್ರಾಮಸಭೆಗಳನ್ನು ಕರೆದು, ಅದರಲ್ಲಿ ವಿಟ್ಟೂರಿನ ಎಲ್ಲ ಜನರೂ ಪಾಲ್ಗೊಳ್ಳುವಂತೆ ಮಾಡುತ್ತಾರೆ. ಗ್ರಾಮ ಪಂಚಾಯತಿಯ ಸದಸ್ಯರು ಗ್ರಾಮದ ಅಗತ್ಯಗಳನ್ನು ಪರಿಗಣಿಸಿ, ಅದಕ್ಕೆ ಸಂಬಂಧಿಸಿದಂತೆ ಸಚಿವರ ಹಾಗೆ ಖಾತೆಗಳನ್ನು ಹಂಚಿಕೊಂಡಿದ್ದಾರೆ. ಹೆಚ್ಚಿನ ಸಂಖ್ಯೆಯಲ್ಲಿರುವ ಮಹಿಳೆಯರು ಹಾಗೂ ಪ್ರಗತಿಯತ್ತ ಮುಖ ಮಾಡಿದ ಕಿರಿಯ ಸದಸ್ಯರು ವಿಟ್ಟೂರಿನ ಗ್ರಾಮಪಂಚಾಯತಿಯ ವಿಕೇಂದ್ರೀಕರಣಕ್ಕೆ ಕಾರಣರಾಗಿದ್ದಾರೆ. ಹಾಗೆಯೇ ೨೨.೪.೨೦೧೪ರ ಪ್ರಜಾವಾಣಿಯ ಕರ್ನಾಟಕ ದರ್ಶನದಲ್ಲಿ 'ಹಳ್ಳಿಗರ ಬೆಳಕು ಪಂಚಾಯತ್ ರಾಜ್' ಲೇಖನವನ್ನು ಗಮನಿಸಬೇಕು. ಅದರಲ್ಲಿ ಕುಂದಾಪುರ ತಾಲ್ಲೂಕಿನ ಶಿರೂರು ಗ್ರಾಮದ ಗ್ರಾಮ ಪಂಚಾಯತಿಯ ಸದಸ್ಯಳಾಗಿ ಹಾಗೂ ಅಧ್ಯಕ್ಷಳಾಗಿ ಕಾರ್ಯ ನಿರ್ವಹಿಸಿದ ಹಾಗೂ ಕಾರ್ಯ ನಿರ್ವಹಿಸುತ್ತಿರುವ ದಿಲ್‌ಶಾದ್ ಅವರ ಯಶೋಗಾಥೆಯಿದೆ. ವಿಟ್ಟೂರಿನ ಪಂಚಾಯತ್ ಸದಸ್ಯೆಯರಾಗಿರಬಹುದು; ದಿಲ್‌ಶಾದ್ ಆಗಿರಬಹುದು. ಇವರೆಲ್ಲರೂ ಕುಟುಂಬದೊಳಗಿನ, ತಮ್ಮ ತಮ್ಮ ಜಾತಿ ಸಮುದಾಯದೊಳಗಿನ ಹಾಗೂ ಗ್ರಾಮದೊಳಗಿನ ಪುರುಷಪ್ರಾಧಾನ್ಯತೆಯನ್ನು ಜಾಣತನದಿಂದ ನಿಭಾಯಿಸುತ್ತಲೇ, ಆಡಳಿತವನ್ನು ನಡೆಸುತ್ತಿದ್ದಾರೆ. ಇಂತಹ ಉದಾಹರಣೆಗಳು ಕ್ಷೇತ್ರಕಾರ್ಯಕ್ಕೆ ಇಳಿದಾಗ ಬೇಕಾದಷ್ಟು ಸಿಗಬಹುದು.

ಪಂಚಾಯತ್ ವ್ಯವಸ್ಥೆಯಲ್ಲಿನ ಮಹಿಳಾ ಮೀಸಲಾತಿ ಕುರಿತಂತೆ ಕೆಲವು ಅಪರೂಪದ ಬರಹಗಳನ್ನು ಹೊರತುಪಡಿಸಿದಂತೆ ಪ್ರಕಟಗೊಂಡ ಮಾಹಿತಿಯನ್ನು ಗಮನಿಸಬೇಕು. ಮಹಿಳಾ ಅಸಾಮರ್ಥ್ಯವನ್ನು ಮಾತ್ರ ಅನಾವರಣಗೊಳಿಸುವ ಇಂತಹ ಬರಹಗಳ ಹಿಂದಿನ ಉದ್ದೇಶ ಸ್ಪಷ್ಟ; ಮಹಿಳೆಯರಿಗೆ ಅವಕಾಶ ನೀಡಿದ ನಂತರವೂ ಪುರುಷರೇ ಆಡಳಿತ ನಡೆಸುವುದಾದರೆ; ಅಥವಾ ಅದಕ್ಕೆ ಮಹಿಳೆಯರು ಸಮ್ಮತಿಸುವುದಾದರೆ

## ಕರಾವಳಿಯ ಮಂಜು

ಕರಾವಳಿಯ ಮಂಜು
ಮಡಿಕೇರಿಗೆ ಬಂದ
ಅರೆ ! ಇವನು ಹೇಗೆ ಬಂದ
ಎಲ್ಲಾಗಿ ಬಂದ ಏಕಾಗಿ ಬಂದ ಯಾವಾಗ ಬಂದ
ಸಾಗರದ ಮೇಲಿಂದ ನೆಗೆದ ಆಂಜನೇಯ ಸ್ವಾಮಿಯ ಹಾಗೆ
ಕಾಳಿದಾಸನ ಮೇಘದೂತದ ಹಾಗೆ
ದಿಢೀರೆಂದು ಹೀಗೆ
ಆಕಾಶದಲ್ಲೆ ಬಂದನೋ ಹೇಗೆ
ಏನೋ ಗೊತ್ತಿಲ್ಲ
ಅಂತೂ ಕರಾವಳಿಯ ಮಂಜು
ಮಡಿಕೇರಿಗೆ ಬಂದ
ತಾನೇ ಸ್ವತಃ ಇಬ್ಬನಿಯಲ್ಲಿ ಮಿಂದ




ಗಿರಿ ಶಿಖರಗಳನ್ನು
ಹತ್ತಿ ಸುತ್ತಿ ಕಣಿವೆಗಳನ್ನು
ಬಯಲುಗಳನ್ನು ನೋಡುತ್ತ ನಿಂದ
ಮಡಿಕೇರಿಯನ್ನು ನೋಡುತ್ತ ನಿಂದ
ಸುಂದರಿಯೊಬ್ಬಳನ್ನು
ದುರುಗುಟ್ಟಿ ನೋಡುವ
ಚೆಂದದ ಹುಡುಗನ ಹಾಗೆ
ಅಲ್ಲಿ ಚಿಗುರುತ್ತಿರುವ
ಒಂದೊಂದು ಹುಲ್ಲನ್ನೂ
ನವುರಾಗಿ ಮುತ್ತಿಟ್ಟಂತೆ
ಕನಸು ಕಂಡ



**ಡಾ॥ ಕೆ. ರಮಾನಂದ ಬನಾರಿ,** ಗಣರಾಜ್ ಕ್ಲಿನಿಕ್, ಮಂಜೇಶ್ವರ – ೬೭೧ ೩೨೩, ಕಾಸರಗೋಡು ಜಿಲ್ಲೆ

ಮಹಿಳಾ ಮೀಸಲಾತಿ ಅಗತ್ಯವಿಲ್ಲ ಎನ್ನುವ ಧೋರಣೆಯನ್ನೇ ವ್ಯಕ್ತಪಡಿಸುತ್ತದೆ. ಹಾಗೂ ಮಹಿಳೆಯರಿಗೆ, ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರಿಗೆ ಮೀಸಲಾತಿ ಬೇಕಿಲ್ಲ ಎನ್ನುವ ನಿಲುವನ್ನು ಸಾಮಾಜಿಕ ಅಭಿಪ್ರಾಯವನ್ನಾಗಿ ರೂಪಿಸುವ ರಾಜಕಾರಣವನ್ನು ಮಾಡುತ್ತಿರುತ್ತದೆ. ಗ್ರಾಮಸಭೆಗಳಿಗೆ ಸದಸ್ಯರಾಗಿ ಆಯ್ಕೆಯಾದ ಮಹಿಳೆಯರು ಗ್ರಾಮಸಭೆಗಳಿಗೆ ಬಾರದೇ ಇರುವುದನ್ನು, ಆಕೆಯ ಅಸಾಮರ್ಥ್ಯದ ಮಾಪನವನ್ನಾಗಿ ಅರ್ಥೈಸಲಾಗುತ್ತದೆ; ಆಯ್ಕೆಗೊಂಡ ಕೆಲ ಮಹಿಳಾ ಸದಸ್ಯರು ಗ್ರಾಮಸಭೆಗಳಿಗೆ ಹಾಜರಾಗದೆ ಇರುವುದಕ್ಕೆ, ಅವರ ಕುಟುಂಬದ ಪುರುಷರು ಚುನಾಯಿತ ಸದಸ್ಯರಂತೆ ಹಾಜರಾಗುವುದಕ್ಕೆ ಕಾರಣಗಳನ್ನು ಶೋಧಿಸುವುದಿಲ್ಲ. ಇಂತಹ ಕೆಲವು ಉದಾಹರಣೆಗಳನ್ನು ಇಟ್ಟುಕೊಂಡು ಎಲ್ಲಾ ಮಹಿಳೆಯರಿಗೂ ಅನ್ವಯಿಸಿ, ಮಹಿಳೆಯರು ಅಸಮರ್ಥರು ಎಂದು ಬಿಂಬಿಸುವ ಧೋರಣೆಯ ಹಿಂದೆ, ರಾಜಕೀಯ ಮೀಸಲಾತಿಯು ಉಂಟು ಮಾಡಿದ ಸಾಮಾಜಿಕ ಸಂಚಲನವನ್ನು ಸಹಿಸದ ವ್ಯವಸ್ಥೆಯ ನೆರಳಿದೆ.

ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿನ ಮಹಿಳಾ ಮೀಸಲಾತಿಯೊಂದೇ ಅಲ್ಲ, ಯಾವ ಯಾವ ಸೌಲಭ್ಯಗಳು ಮಹಿಳೆಯರನ್ನು ಕೇಂದ್ರವಾಗಿಟ್ಟುಕೊಂಡು ರೂಪುಗೊಂಡಿವೆಯೋ ಅವೆಲ್ಲ ಯೋಜನೆಗಳಿಗೂ ಈ ಮೇಲಿನ ಮಾತು ಅನ್ವಯಿಸುತ್ತಿರುತ್ತದೆ. ಮಹಿಳಾ ಕೇಂದ್ರಿತವಾದಂತಹ ಯೋಜನೆಗಳು ಅಥವಾ ಸೌಲಭ್ಯಗಳು ಸಾಮಾಜಿಕ ಸಂಚಲನೆಯನ್ನು ಉಂಟು ಮಾಡಿದಾಗಲೆಲ್ಲ, ಅದರ ಬಗೆಗೆ ನೇತ್ಯಾತ್ಮಕ ಧೋರಣೆಗಳನ್ನು ಅತ್ಯಂತ ಢಾಳಾಗಿ ಬಿಂಬಿಸಲಾಗುತ್ತದೆ. ಮಹಿಳೆಯರಿಗೆ ಹಾಗೂ ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರಿಗಾಗಿ ರೂಪಿಸಿದ ಯಾವ ಯೋಜನೆಗಳು ವೈಫಲ್ಯಗೊಂಡಿವೆ ಎಂದು ಹೆಚ್ಚು-ಹೆಚ್ಚು ಚರ್ಚೆಗೆ ಒಳಗಾಗುತ್ತಿರುತ್ತದೆಯೋ, ಆ ಯೋಜನೆಗಳು ಸಮಾಜದಲ್ಲಿನ ಆಳದ ಬೇರನ್ನು ಅಲ್ಲಾಡಿಸಿದೆ ಎಂದೇ ಅರ್ಥ. ಮಹಿಳಾ ಕೇಂದ್ರಿತವಾದ, ಹಾಗೂ ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳಾ ಕೇಂದ್ರಿತವಾದ ಯೋಜನೆಗಳು ಯಶಸ್ವಿಗೊಂಡಾಗಲೆಲ್ಲಾ, ಮಹಿಳೆಯರ, ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರ ಅಸಾಮರ್ಥ್ಯದ ಕುರಿತು, ಯೋಜನೆಗಳ ವೈಫಲ್ಯದ ಕುರಿತು ಅನೇಕ ಬಗೆಯ ಸಂಕಥನಗಳು ಹುಟ್ಟಿಕೊಳ್ಳುತ್ತವೆ. ಈ ಬಗೆಯ ಸಂಕಥನಗಳು, ಸಾಮಾಜಿಕ ಸಂಚಲನೆಗೆ ತಡೆಯೊಡ್ಡುವ ರಾಜಕೀಯ ಉದ್ದೇಶಗಳನ್ನು ಒಳಗೊಂಡಿರುತ್ತವೆ.

**ಕೊನೆ ಟಿಪ್ಪಣಿ**

೧. ಸರಕಾರವಾಗಲಿ, ಖಾಸಗಿ ಸಂಘ-ಸಂಸ್ಥೆಗಳಾಗಲಿ, ವಿಶ್ವವಿದ್ಯಾಲಯಗಳಾಗಲಿ ಯಾವ ವರ್ಗಗಳನ್ನು 'ಹಿಂದುಳಿದ ವರ್ಗಗಳು' ಎಂದು ಪರಿಗಣಿಸುತ್ತವೆಯೋ ಆ ವರ್ಗಗಳು ಅವುಗಳಷ್ಟಕ್ಕೆ ಹಿಂದುಳಿದವುಗಳಲ್ಲ. ಪ್ರಬಲ ವರ್ಗದವರು ತಮ್ಮ ನಿರಂತರ ರಾಜಕಾರಣದಿಂದಾಗಿ ಹಲವಾರು ವರ್ಗದವರನ್ನು 'ಹಿಂದುಳಿದ ವರ್ಗ'ಕ್ಕೆ ಪರಿವರ್ತಿಸಿವೆ. ಹೀಗಾಗಿ ಪ್ರಬಲ ವರ್ಗದವರ ದಾಳಿಗೆ ಒಳಗಾದಂತಹ ಹಿಂದುಳಿದ




ವರ್ಗಗಳು ಅಸ್ತಿತ್ವ ಹಾಗೂ ಅಸ್ಮಿತೆ ಇವೆರಡನ್ನೂ ಕಳೆದುಕೊಂಡಿವೆ. 'ಹಿಂದುಳಿದ ವರ್ಗಗಳು' ಎಂದರೆ ದುರ್ಬಲ ವರ್ಗಗಳನ್ನೇ ಹೊಣೆಯಾಗಿಸಿದಂತಾಗುತ್ತದೆ. ದುರ್ಬಲ ವರ್ಗಗಳ ಹಿಂದುಳಿಯುವಿಕೆಗೆ ಅವುಗಳಲ್ಲಿ ಇರುವ ಸಾಮರ್ಥ್ಯದ ಕೊರತೆಯೇ ಕಾರಣವೆಂದು ಒಪ್ಪಿಕೊಂಡಂತಾಗುತ್ತದೆ. ಅವುಗಳ ಹಿಂದಿರುವ ಸಾಮಾಜಿಕ ಹೊಣೆಗಾರಿಕೆಯನ್ನು ನಿರ್ಲಕ್ಷಿಸಿದಂತೆ ಆಗುತ್ತದೆ. ದುರ್ಬಲ ಸಮುದಾಯದವರ ಅಸಾಮರ್ಥ್ಯವನ್ನೇ ಪ್ರಧಾನವಾಗಿ ಧ್ವನಿಸುವ 'ಹಿಂದುಳಿದ ವರ್ಗಗಳು' ಎನ್ನುವ ಪಾರಿಭಾಷಿಕ ಪದವನ್ನು ಉದ್ದೇಶಪೂರ್ವಕವಾಗಿಯೇ ಕೈಬಿಡಲಾಗಿದೆ. 'ಹಿಂದುಳಿಸಲ್ಪಟ್ಟ ವರ್ಗಗಳು' ಎನ್ನುವ ಪಾರಿಭಾಷಿಕ ಪದವನ್ನು ಉದ್ದೇಶಪೂರ್ವಕವಾಗಿಯೇ ಕಟ್ಟಿಕೊಂಡಿದೆ.

'ಹಿಂದುಳಿಸಲ್ಪಟ್ಟ' ಎನ್ನುವ ಪರಿಭಾಷೆಯು ಸಾಮಾಜಿಕ ಚೌಕಟ್ಟಿನಲ್ಲಿ ಹಿಂದಿನಿಂದಲೂ ನಡೆದು ಬಂದಂತಹ ಅಸಮಾನತೆಯನ್ನು ಸೂಚಿಸುವ ಪದವಾಗಿದೆ. ಈ ಚೌಕಟ್ಟಿಗೆ ಸಮಾಜದಲ್ಲಿರುವ ಎಲ್ಲಾ ಜಾತಿಯ, ಎಲ್ಲಾ ಸಮುದಾಯದ, ಎಲ್ಲಾ ವರ್ಗಗಳ ಮಹಿಳೆಯರು ಒಳಪಡುತ್ತಾರೆ. ಶತಮಾನಗಳಿಂದಲೂ 'ಹೆಣ್ಣು' ಎಂಬ ಕಾರಣಕ್ಕಾಗಿಯೇ ದಮನಕ್ಕೊಳಗಾದ ಮಹಿಳೆಯರನ್ನು ಹಿಂದುಳಿಸಲ್ಪಟ್ಟ ವರ್ಗಕ್ಕೆ ಸೇರಿದವರೆಂದು ಪರಿಗಣಿಸಬಹುದು. ಯಾವ ಜಾತಿಗಳಲ್ಲಿ ಬಹುಸಂಖ್ಯೆಯಲ್ಲಿ ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಬೌದ್ಧಿಕವಾಗಿ ಹಾಗೂ ಆರ್ಥಿಕವಾಗಿ ಹಿಂದುಳಿಸಲ್ಪಟ್ಟವರಾಗಿರುತ್ತಾರೋ ಅವರನ್ನು 'ಹಿಂದುಳಿಸಲ್ಪಟ್ಟ ವರ್ಗದವರು' ಎಂದು ಸಂವಿಧಾನವು ಗುರುತಿಸುತ್ತದೆ. ಹಾಗೆಯೇ ಯಾವ ಜಾತಿಗೂ ಸೇರದ ಬುಡಕಟ್ಟು ಪಂಗಡದವರನ್ನು, ಅಲೆಮಾರಿಗಳನ್ನು ಕೂಡ ಹಿಂದುಳಿಸಲ್ಪಟ್ಟ ವರ್ಗಕ್ಕೆ ಸೇರಿದವರೆಂದೇ ಗುರುತಿಸಲಾಗುತ್ತದೆ. ಬಹುಸಂಖ್ಯಾತರಲ್ಲದ ಹಾಗೂ ಉಪಜಾತಿಗಳನ್ನು ಹೊಂದಿರದ ಅಲ್ಪಸಂಖ್ಯಾತ ಸಮುದಾಯದವರನ್ನು (ಮುಸಲ್ಮಾನ, ಕ್ರಿಶ್ಚಿಯನ್) ಈ ನೆಲೆಯಲ್ಲಿಯೇ ಸಂವಿಧಾನವು ಗುರುತಿಸುತ್ತದೆ. ಸರಕಾರವು ಲೈಂಗಿಕ ಅಲ್ಪಸಂಖ್ಯಾತರನ್ನು ಹಿಂದುಳಿಸಲ್ಪಟ್ಟ ವರ್ಗಗಳ ಅಡಿಯಲ್ಲಿಯೇ ಗುರುತಿಸುತ್ತದೆ. ಹಿಂದುಳಿಸಲ್ಪಟ್ಟ ವರ್ಗಗಳ ಕುರಿತಂತೆ ನಿರ್ವಚಿಸಿಕೊಂಡ ಎಲ್ಲ ನಿರ್ವಚನಗಳನ್ನು ಅಧ್ಯಯನದಲ್ಲಿ ಯಥಾವತ್ತಾಗಿ ಅಳವಡಿಸಿಕೊಳ್ಳಲಾಗಿದೆ.

'ಹಿಂದುಳಿಸಲ್ಪಟ್ಟ ವರ್ಗಗಳು' ಎನ್ನುವ ಪರಿಕಲ್ಪನೆಯೊಳಗಿರುವ ಬಹುವಚನವೇ ಈ ವರ್ಗಗಳಿಗೆ ಸೇರಲ್ಪಟ್ಟ ಮಹಿಳೆಯರನ್ನು ಏಕರೂಪಿಯಾಗಿ ಗ್ರಹಿಸಲಾಗುವುದಿಲ್ಲ ಎನ್ನುವುದನ್ನು ಹೇಳುತ್ತದೆ. ತಳ ವರ್ಗಗಳಲ್ಲಿ ತುಳಿತಕ್ಕೊಳಗಾದ ಅನೇಕ ಜಾತಿಗಳಿವೆ, ಸಮುದಾಯಗಳಿವೆ, ಅಲ್ಪಸಂಖ್ಯಾತರು ಎಂದು ಗುರುತಿಸಲ್ಪಟ್ಟ ಮುಸ್ಲಿಂ, ಕ್ರಿಶ್ಚಿಯನ್ ಧರ್ಮಕ್ಕೆ ಸೇರಿದವರೂ ಇದ್ದಾರೆ, ಅಲೆಮಾರಿಗಳಿದ್ದಾರೆ, ಬುಡಕಟ್ಟಿನವರಿದ್ದಾರೆ, ಲೈಂಗಿಕ ಅಲ್ಪಸಂಖ್ಯಾತರೂ ಇದ್ದಾರೆ.

ಆಯಾ ಜಾತಿಗಳಿಗೆ, ಬುಡಕಟ್ಟುಗಳಿಗೆ, ಸಮುದಾಯಗಳಿಗೆ, ಧರ್ಮಗಳಿಗೆ ಸೇರಿದ ಭಿನ್ನ-ಭಿನ್ನ ಪಿತೃಪ್ರಧಾನ ಮೌಲ್ಯಗಳು ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರ ಸಂಕಥನವನ್ನು ಏಕರೂಪಿಯಾಗಿ ನೋಡಲು ನಿರಾಕರಿಸುತ್ತವೆ. ಹಾಗೆಯೇ ಒಂದೇ ಜಾತಿಗೆ, ಒಂದೇ ಸಮುದಾಯಕ್ಕೆ, ಒಂದೇ ಬುಡಕಟ್ಟಿಗೆ, ಒಂದೇ ಧರ್ಮಕ್ಕೆ ಸೇರಿದ ಮಹಿಳೆಯರೆಲ್ಲರನ್ನು ಒಂದು ಕಟ್ಟಿಗೆ ಒಳಪಡಿಸಿ ನೋಡಲಾಗುವುದಿಲ್ಲ. ಅದರಂತೆಯೇ ಒಂದೇ ಜಾತಿಗೆ, ಒಂದೇ ಸಮುದಾಯಕ್ಕೆ, ಒಂದೇ ಬುಡಕಟ್ಟಿಗೆ, ಒಂದೇ ಧರ್ಮಕ್ಕೆ ಸೇರಿದ ಹಿಂದುಳಿಸಲ್ಪಟ್ಟ ಮಹಿಳೆಯರನ್ನು ಒಂದೇ ಚೌಕಟ್ಟಿಗೆ ಅಳವಡಿಸಿ ಸಂಕಥನವನ್ನು ರೂಪಿಸಲಾಗುವುದಿಲ್ಲ. ಇವರಲ್ಲಿ, ಸರಕಾರಿ ಸೌಲಭ್ಯಕ್ಕೆ ಒಳಗಾದ ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರ ಸಂಕಥನ ಒಂದು ಬಗೆಯದಾದರೆ, ಸರಕಾರದ ಸೌಲಭ್ಯಕ್ಕೆ ಒಳಗಾಗದೇ ಇರುವ ಮಹಿಳೆಯರ ಸಂಕಥನ ಮತ್ತೊಂದು ಬಗೆಯದು. ಅದರಂತೆಯೇ ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳೆಯರಲ್ಲಿ ಕೆಲವರು ಸಾಮಾಜಿಕ ನೆಲೆಯಲ್ಲಿ ಸ್ಪೃಶ್ಯರೆಂದು ಗುರುತಿಸಲ್ಪಟ್ಟರೆ, ಮತ್ತೆ ಕೆಲವರು ಅಸ್ಪೃಶ್ಯರೆಂದು ಗುರುತಿಸಲ್ಪಡುತ್ತಾರೆ. ಹೀಗೆ ಸ್ಪೃಶ್ಯ-ಅಸ್ಪೃಶ್ಯರೆಂದು ಗುರುತಿಸಲ್ಪಡುವ ಮಹಿಳೆಯರ ಸಂಕಥನಗಳು ಭಿನ್ನವಾಗಿರುತ್ತವೆ. ಅದೇ ರೀತಿ ಕರ್ನಾಟಕದಲ್ಲಿನ ಹಿಂದುಳಿಸಲ್ಪಟ್ಟ ವರ್ಗಗಳ ಮಹಿಳಾ ಸಂಕಥನಗಳನ್ನು ರೂಪಿಸುವಾಗ ಆಯಾ ಪ್ರಾದೇಶಿಕ ಹಿನ್ನೆಲೆಯನ್ನು ಗಮನಿಸಬೇಕಾಗುತ್ತದೆ. ಯಾಕೆಂದರೆ ಕರ್ನಾಟಕದ ಪ್ರಾದೇಶಿಕ ಭಿನ್ನತೆಗೆ ಅನುಗುಣವಾಗಿ ಆರ್ಥಿಕ ಹಾಗೂ ಸಾಮಾಜಿಕ ಸಂಕಥನಗಳು ಭಿನ್ನವಾಗಿರುತ್ತವೆ. 'ಹಿಂದುಳಿಸಲ್ಪಟ್ಟ ವರ್ಗಗಳು' ಎನ್ನುವ ಪರಿಭಾಷೆಯೊಳಗಿನ ಬಹುವಚನವೇ ಈ ವರ್ಗಗಳಿಗೆ ಸೇರಿದ ಎಲ್ಲಾ ಮಹಿಳೆಯರ ಸಂಕಥನಗಳು ಭಿನ್ನವಾಗಿರುತ್ತವೆ ಎನ್ನುವುದನ್ನು ಹೇಳುತ್ತದೆ.

---


**ಡಾ॥ ಶೈಲಜ ಹಿರೇಮಠ**
ಸಹ ಪ್ರಾಧ್ಯಾಪಕರು, ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬







## ನನ್ನ ಪ್ರೀತಿಯ ಅಪ್ಪ

**(ಕೈಫಿ ಆಜ್ಮಿ ಕವಿತೆಗಳು)**

*ಶಬನಾ ಆಜ್ಮಿ;*

*ಕನ್ನಡಕ್ಕೆ : ರಾಹು/ವಿಭಾ*

**ಪುಟ : ೬೪**

**ಬೆಲೆ : ರೂ. ೪೦**

**ಲಡಾಯಿ ಪ್ರಕಾಶನ**

೨೧ ಪ್ರಸಾದ್ ಹಾಸ್ಟೆಲ್

ಗದಗ – ೫೮೨ ೧೦೧

"ನನಗೆ ಒಂಭತ್ತು ತುಂಬುವವರೆಗೆ ನಾವು ಕಮ್ಯುನಿಸ್ಟ್ ಪಕ್ಷದ ರೆಡ್ ಫ್ಲ್ಯಾಗ್ ಹಾಲ್‌ನಲ್ಲಿ ವಾಸವಾಗಿದ್ದೆವು. ಪ್ರತಿಯೊಬ್ಬ ಕಾಮ್ರೇಡ್‌ನ ಕುಟುಂಬಕ್ಕೂ ಒಂದೇ ಒಂದು ಕೋಣೆಯ ಮನೆಯಿತ್ತು... ಆರಂಭದಲ್ಲಿ ಅಪ್ಪ ಗಳಿಸುತ್ತಿದ್ದೆಲ್ಲವನ್ನೂ ಕಮ್ಯುನಿಸ್ಟ್ ಪಕ್ಷಕ್ಕೆ ಕೊಡುತ್ತಿದ್ದರು. ತಿರುಗಿ ಕಮ್ಯುನಿಸ್ಟ್ ಪಕ್ಷದಿಂದ ಪಡೆಯುತ್ತಿದ್ದ ಮಾಸಿಕ ಅಲೋಯೆನ್ಸ್ ರೂ. ನಲವತ್ತು... ಅವ್ವ ಅಪ್ಪನನ್ನು ಪ್ರೀತಿಸಿದ್ದುದು ಅವನೊಬ್ಬ ಕವಿ, ಸತ್ವತಃ ಜನತೆಯ ವ್ಯಕ್ತಿ ಎಂಬುದು. ತತ್ಕಾರಣ, ಅವನು ತನ್ನ ಕುಟುಂಬದ ಖಾಸಗಿ ಆಸ್ತಿಯಾಗಿರುವ ಬದಲು ವಿಶಾಲ ಜನತೆಯ ಸೊತ್ತಾಗಿ ಪರಿಣಮಿಸಿದ..." ಭಾರತದ ಪ್ರತಿಭಾವಂತ, ಪ್ರಖ್ಯಾತ ನಟಿ ಶಬಾನಾ ಆಜ್ಮಿ ತನ್ನ ಅಪ್ಪ ಈ ದೇಶ ಕಂಡ ಮಹಾನ್ ಕವಿ ಕೈಫಿ ಆಜ್ಮಿ ಕುರಿತು ಬರೆದ ಮಾತುಗಳಿವು. ಇಂಥ ಅನೇಕ ಅವಿಸ್ಮರಣೀಯ ನೆನಪುಗಳ ವಿವರಗಳನ್ನು ಶಬಾನಾ ಕಟ್ಟಿಕೊಟ್ಟಿದ್ದಾರೆ. ಅವುಗಳನ್ನು ವಿವರವಾಗಿ ರಾಹು ಕನ್ನಡಕ್ಕೆ ಅನುವಾದಿಸಿದ್ದಾರೆ.

'ಇದಕ್ಕೆ ಧರ್ಮವೆನ್ನಿ, ಅಥವಾ ನೀತಿಯೆನ್ನಿ! ನಮಗೆ ಕಲಿಸುತ್ತ ನಡೆದಿದ್ದೀರಿ ನೀವು ಆತ್ಮಹತ್ಯೆಯ ಕಲೆ, ನಾನೆದ್ದೆ ಅಹಿಂಸೆಯ ಪಾಠ ಜನಕೆ ಹೇಳಿಕೊಡಲು! ಅದೇ ಜಗತ್ತು ನನಗೆ ಫಾಸಿ ನೀಡಿತು', 'ನನ್ನದೆಂದು ನೀವು ಲೂಟಿ ಮಾಡಿದ ವಸ್ತು, ಓ ನೆರೆಯವರೆ, ಅದು ನಿಮ್ಮ ಮರ್ಯಾದೆಯಲ್ಲದೆ ಬೇರೇನೂ ಅಲ್ಲ'. ಇಂಥ ಅದ್ಭುತ ಮೌಲಿಕ ಸಾಲುಗಳನ್ನುಳ್ಳ ಕೈಫಿಯ ಹಲವಾರು ಕವನಗಳನ್ನು ಅನುವಾದಿಸಿದ್ದಾರೆ ಕನ್ನಡದ ಕವಯಿತ್ರಿ ವಿಭಾ. ಸೂರ್ಯನಂಥ ಕೈಫಿಯ ಕುರಿತು, ಪೂರ್ಣಿಮೆಯಂಥ ಶಬಾನಾ ಬರೆದಿದ್ದಾರೆ.

## ಕತ್ತಲೆಯಿಂದ ಬೆಳಕಿನೆಡೆಗೆ (ಅಂಧಶ್ರದ್ಧೆ ನಿರ್ಮೂಲನೆ ಕುರಿತ ಲೇಖನಗಳು)

*ಮರಾಠಿ ಮೂಲ : ಡಾ॥ ನರೇಂದ್ರ ದಾಭೋಲ್ಕರ್; ಕನ್ನಡಕ್ಕೆ : ಚಂದ್ರಕಾಂತ ಪೋಕಳೆ*

**ಪುಟ : ೧೨೮** **ಬೆಲೆ : ರೂ. ೮೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ನಮ್ಮಲ್ಲಿ ಬೇರೂರಿರುವ ಮೂಢನಂಬಿಕೆಗಳನ್ನು ಗುರುತಿಸಿ ಅವನ್ನು ಹೋಗಲಾಡಿಸಲು ಈ ಲೇಖನಗಳು ಕರೆ ನೀಡುತ್ತವೆ. ಮೌಢ್ಯದ ಬಲೆಗೆ ಬಿದ್ದು ಯಾವುದನ್ನು ನಾವು ತ್ಯಜಿಸಬೇಕು ಮತ್ತು ಏನನ್ನು ಅಂಗೀಕರಿಸಬೇಕೆಂದು ನಿರ್ಧಾರ ಮಾಡಲಾಗದ ಸ್ಥಿತಿಯಲ್ಲಿ ನಾವಿದ್ದೇವೆ. ಯಾರೋ ಹೇಳಿದರೆಂದು ನಮ್ಮ ಸಂಕಷ್ಟಗಳ ಪರಿಹಾರಕ್ಕಾಗಿ ಜ್ಯೋತಿಷಿ–ಬಾಬಾ–ಮಂತ್ರವಾದಿಗಳ ಮೊರೆಹೋಗುತ್ತೇವೆ. ನಮ್ಮ ಪಾಪ–ಕರ್ಮ – ಪೂರ್ವಜನ್ಮ – ಗ್ರಹಚಾರಗಳ ಕತೆ ಹೇಳಿ ನಂಬಿಸಿ ನಮ್ಮನ್ನು ವಂಚಿಸಲಾಗುತ್ತದೆ. ನಿಮ್ಮ, ನಿಮ್ಮ ಮಕ್ಕಳ ಜಾತಕದಲ್ಲಿ ಮಾರಣಾಂತಿಕ ದೋಷ ಇದೆಯೆಂದೂ ಪೂಜೆ–ಹವನ–ಹೋಮ – ದೇವಾಲಯ ದರ್ಶನ ಮಾಡಿದರೆ ಮಾತ್ರ ಪರಿಹಾರವಾಗುವುದೆಂಬ ಅವರ ಬತ್ತಳಿಕೆಯ ಬಾಣಗಳಿಗೆ ನಾವು ಹೆದರಿ ಕಂಗಾಲಾಗುತ್ತೇವೆ. ಮೊದಲೇ 'ಗ್ರಹಚಾರ ಸರಿ ಇಲ್ಲದ' ನಾವು ಅವರನ್ನು ಎದುರುಹಾಕಿಕೊಳ್ಳುವುದುಂಟೇ? ನಮ್ಮ ಅಮೂಲ್ಯ ಸಮಯ, ಬೆವರಿಳಿಸಿ ದುಡಿದ ಹಣ ಎರಡನ್ನೂ ವ್ಯಯಿಸುತ್ತೇವೆ. ಅವರು ಇನ್ನಷ್ಟು ಬಲಾಢ್ಯರಾಗುತ್ತಾರೆ, ಇನ್ನಷ್ಟು ಜನರಿಗೆ ಮಂಕುಬೂದಿ ಎರಚುತ್ತಾರೆ. ಈ ಕೃತಿಯಲ್ಲಿ ಇಂಥ ಹಲವಾರು ಸಂಗತಿಗಳನ್ನು ಪ್ರಸ್ತಾಪಿಸಿ ನಿಮಗೆ ಅಮೂಲ್ಯ ಸಲಹೆ ನೀಡಿ ಅಜ್ಞಾನದಿಂದ ಜ್ಞಾನದ ಕಡೆಗೆ ಹೊರಳುವ ದಾರಿ ತೋರಲಾಗಿದೆ. ನಿಮ್ಮ ಶ್ರದ್ಧೆ ನಂಬಿಕೆಗಳನ್ನು ಉಳಿಸಿಕೊಂಡೇ ಅಂಧಶ್ರದ್ಧೆ–ಮೂಢನಂಬಿಕೆಗಳನ್ನು ಹೋಗಲಾಡಿಸುವ ಬಗೆಗೆ ತಿಳಿಯಹೇಳಲಾಗಿದೆ.




## ಕೋಮು ಸಾಮರಸ್ಯ ಶತಮಾನಗಳ ಕಾವ್ಯಸಾಕ್ಷಿ

*ಸಂ. : ಡಾ॥ ಕಾ. ವೆಂ. ಶ್ರೀನಿವಾಸ ಮೂರ್ತಿ, ಡಾ॥ ರೇಣುಕಾ, ಡಾ॥ ಎಸ್. ಭಾಗ್ಯಲಕ್ಷ್ಮಿ*

**ಪುಟ : ೨೨೦** **ಬೆಲೆ : ರೂ. ೧೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ಕ್ರೌರ್ಯದ ಪರಮಾವಧಿಯೇ ರಕ್ತಪಾತ. ಅದಂತೂ ಯಾರಿಗೂ ಇಷ್ಟವಿರುವುದಿಲ್ಲ. ಮಾನವ ಜನಾಂಗ ಒಂದೇ ಆದರೂ ಅಲ್ಲಿಯೂ ಮೇಲು–ಕೀಳು–ವರ್ಗ–ಧರ್ಮ–ಜಾತಿ ಭೇದಗಳನ್ನು ಸೃಷ್ಟಿಸಿಕೊಂಡು ದ್ವೇಷದಿಂದ ಬಡಿದಾಡುವುದು ಪುರಾಣಕಾಲದಿಂದಲೂ ಇದ್ದಿತು. ಈಗಂತೂ ಅದು ಮೇರೆ ಮೀರಿ ಮೆರೆದಾಡುತ್ತಿದೆ. ರಾಜ–ಮಹಾರಾಜರುಗಳು ತಮ್ಮ ಸಾಮ್ರಾಜ್ಯ ವಿಸ್ತರಿಸುವ ನೆಪದಲ್ಲಿ ಭೂಮಿಯ ಮೇಲೆ ರಕ್ತದ ಹೊಳೆಗಳನ್ನೇ ಹರಿಸಿದ್ದಾರೆ. ಇವೆಲ್ಲವೂ ಮೌಖಿಕ ಹಾಡುಗಳಾಗಿ, ಕಥನಗಳಾಗಿ ಮುಂದೆ ಸಾಹಿತ್ಯ–ಕಾವ್ಯಗಳಲ್ಲಿ ದಾಖಲಾಗಿ ಇಂದಿಗೂ ನಮ್ಮ ಕಣ್ಣಮುಂದಿವೆ. ಯಾಕೆ ಈ ವಿದ್ವೇಷ? ಹಿಂದಿನವರು ಶಾಂತಿ–ಸೌಹಾರ್ದ – ಸಾಮರಸ್ಯದ ಬಗ್ಗೆ ಚಿಂತಿಸಿಲ್ಲವೆ? ಇಂತಹ ಅಮಾನವೀಯ ಕೃತ್ಯಗಳನ್ನು ಖಂಡಿಸಿಲ್ಲವೆ? ಖಂಡಿತವಾಗಿಯೂ ಮಾನವ ಕುಲವೆಲ್ಲ ಒಂದೇ ಎಂದು ಪಂಪನಂತಹ ಆದಿಕವಿಯೇ ಘೋಷಿಸಿದ್ದಾನೆ. ಅಂದಿನ ವರ್ಗ ತಾರತಮ್ಯವೇ ಇನ್ನಷ್ಟು ಬಣ್ಣ ಬಳಿದುಕೊಂಡು ಕೋಮು ವಿದ್ವೇಷದ ಘೋರ ರೂಪ ತಾಳಿ ಇಂದು ನಮ್ಮ ಮುಂದೆ ನಿಂತಿದೆ. ಶತಮಾನಗಳಿಂದಲೂ ದಾಖಲಾದ ಕಾವ್ಯಗಳನ್ನು ಅವಲೋಕಿಸಿದರೆ ಸಹೃದಯ ಕವಿಗಳು ಜನತೆಯಲ್ಲಿ ಸಾಮರಸ್ಯವನ್ನು ಮೂಡಿಸಲು ತಮ್ಮ ಲೇಖನಿಯನ್ನು ಬಳಸಿದ್ದು ವೇದ್ಯವಾಗುತ್ತದೆ. ಅಂತಹ ಕಾವ್ಯಗಳನ್ನು ತಾಳ್ಮೆಯಿಂದ ಸಂಗ್ರಹಿಸಿಕೊಟ್ಟಿದ್ದಾರೆ. ಡಾ॥ ಕಾ. ವೆಂ. ಶ್ರೀನಿವಾಸ ಮೂರ್ತಿ ಹಾಗೂ ಸಹಲೇಖಕರು. ಕೋಮು ಸಾಮರಸ್ಯವನ್ನು ಪಸರಿಸಲು ಇಲ್ಲಿನ ಕವಿತೆಗಳು ನೆರವಾಗಬಹುದೇನೋ!

– **ಇಂದಿರಾಕುಮಾರಿ,** ಯಶವಂತಪುರ, ಬೆಂಗಳೂರು – ೨೨

## ಕಾವ್ಯಕ್ಕೆ ಉರುಳು

*ಡಾ॥ ರಾಜಶೇಖರ ಮಠಪತಿ (ರಾಗಂ)*

**ಪುಟ : ೧೨೦** **ಬೆಲೆ : ರೂ. ೮೦**

**ಕಣ್ವ ಪ್ರಕಾಶನ,** 'ಕಾಲ ಕನಸು', ನಂ. ೯೬೪, ೧ನೇ ಮುಖ್ಯರಸ್ತೆ, ನಿಸರ್ಗ ಬಡಾವಣೆ, ಚಂದ್ರಾ ಲೇಔಟ್, ಬೆಂಗಳೂರು – ೫೬೦ ೦೭೨




ವ್ಯವಸ್ಥೆಯ ಉರಿ, ಬೆಂಕಿ, ಜ್ವಾಲೆಗೆ ಬಲಿಯಾದ ನೂರಾರು ಚಿಂತಕರ, ಹೋರಾಟಗಾರರ ಕುರಿತ ಲೇಖನಗಳ ಗುಚ್ಛ 'ಕಾವ್ಯಕ್ಕೆ ಉರುಳು' ಎಂಬ ಕೃತಿ. ತಮ್ಮ ಕ್ರಿಯಾಶೀಲ ಚಿಂತನೆ, ಲೇಖನಗಳ ಕಾರಣಕ್ಕೆ ವ್ಯವಸ್ಥೆಯ ಕೆಂಗಣ್ಣಿಗೆ ವಿಶ್ವದ ಹಲವಾರು ಚೇತನಗಳು ಬಲಿಯಾಗಿವೆ. ಅಂಥ ೨೫ ಜನರ ಸಂಕ್ಷಿಪ್ತ ಪರಿಚಯವನ್ನು ಲೇಖಕ ರಾಜಶೇಖರ ಮಠಪತಿ (ರಾಗಂ) ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಅಂಕಣಕ್ಕಾಗಿ ಬರೆದ ಲೇಖನಗಳನ್ನು ಈ ಕೃತಿಯಲ್ಲಿ ಸಂಗ್ರಹಿಸಲಾಗಿದೆ. ವಿವಿಧ ದೇಶಗಳಲ್ಲಿ ವ್ಯವಸ್ಥೆಯ ಹಿಂಸೆ, ಅದು ಪ್ರಭುತ್ವ ಅಥವಾ ಸಾಮಾಜಿಕ, ಧಾರ್ಮಿಕ ಯಾವುದೇ ಆಗಿರಬಹುದು, ಅಂಥ ವ್ಯವಸ್ಥೆಯ ದಾಳಿಯನ್ನೆದುರಿಸಿದ, ಅದಕ್ಕೆ ಬಲಿಯಾದ ಚೇತನಗಳ ಪರಿಚಯ ಈ ಕೃತಿಯಲ್ಲಿದೆ. ಭಾರತದಲ್ಲಿ ಸಫ್ದರ್ ಹಶ್ಮಿ, ಬಲರಾಜ್ ಸಾಹ್ನಿ, ಕೆ. ಎ. ಅಬ್ಬಾಸ್, ಮಂಟೋ ಮುಂತಾದವರಂತೆ ವಿಶ್ವವ್ಯಾಪ್ತಿಯಲ್ಲಿ ಸಾಕ್ರೆಟಿಸ್ ಆದಿಯಾಗಿ ಸಲ್ಮಾನ್ ರಶ್ದಿ, ತಸ್ಲಿಮಾ, ಫ್ರಿದಾ, ಅನ್ನಾ ಶೊರೆಂಕೊ, ಫ್ರಾನ್ಸಿಸ್ ಆ್ಯಡಮ್ಸ್, ಹರ್ಮನ್ ಸೇಸ್, ಮಾಫೋಜ್, ಡಿಂಗ್‌ಡಿಂಗ್ ಹೀಗೆ ಪೂರ್ವದಿಂದ ಪಶ್ಚಿಮದವರೆಗೆ ಭೂಖಂಡದಲ್ಲಿ ತಮ್ಮ ಪರಿಸರದ ಮಿತಿಯನ್ನು ಮೀರಿ ತಮ್ಮ ಸೃಜನಶೀಲತೆಯನ್ನು ಸಾಬೀತುಪಡಿಸಿದವರ ಮತ್ತು ವ್ಯವಸ್ಥೆಗೆ ಮುಖಾಮುಖಿಯಾದವರ, ಬಲಿಯಾದವರ ಬದುಕಿನ ವಿವರಗಳು ರಾಗಂ ಅವರ ಅದ್ಭುತವಾದ ಶೈಲಿಯಲ್ಲಿ 'ಕಾವ್ಯಕ್ಕೆ ಉರುಳು' ಕೃತಿಯಲ್ಲಿ ದಾಖಲಾಗಿದೆ. ಕೇವಲ ಕುತೂಹಲಕ್ಕಲ್ಲದೆ ವ್ಯವಸ್ಥೆಯ ಕ್ರೌರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ಹಾಗೂ ಐತಿಹಾಸಿಕ ಸತ್ಯಗಳನ್ನು ಅರಿಯಲು ಬೆಳಕಿಂಡಿಯ ರೂಪದಲ್ಲಿ ಈ ಕೃತಿ ನೆರವಾಗುತ್ತದೆ. ಇದು ಈ ಕೃತಿಯ ಭಾಗ – ೧ ಅಂತಿರುವುದರಿಂದ ಮುಂದೆ ಇನ್ನೂ ಹೆಚ್ಚಿನ ಇಂಥ ಮಾಹಿತಿಗಳನ್ನು ಈ ಲೇಖಕರಿಂದ ನಿರೀಕ್ಷಿಸಬಹುದು.

– **ಶ್ರೀ ಸುಮಿತ್ರಾಸುತ,** *ಅಗಸಬಾಳ*






ಕೊಟ್ರೇಶ್ ಎಸ್. ಉಪ್ಪಾರ್

ಓಬಳಾಪುರ ಎಂಬ ಪುರಾತನ ಗ್ರಾಮ. ಅಲ್ಲಿ ಬಡ್ಡಿ ಬಸಣ್ಣ ಎಂಬುವನು ಹೇರಳವಾಗಿ ಹಣ ಸಂಪಾದನೆ ಮಾಡಿದ್ದನು. ಅವನು ಗಳಿಸಿದ ಸಂಪತ್ತಿನಲ್ಲಿ ಅವನಿಂದ ಬೆವರು ಹರಿದು ಬಂದ ಒಂದು ನಯಾಪೈಸೆಯೂ ಕೂಡ ಅದರಲ್ಲಿರಲಿಲ್ಲ. ದೀನ ದಲಿತರ ವಡವೆ–ವಸ್ತುಗಳನ್ನು ಒತ್ತೆ ಇರಿಸಿಕೊಂಡು ದುಬಾರಿ ಬಡ್ಡಿಗೆ ಹಣವನ್ನು ಸಾಲದ ರೂಪದಲ್ಲಿ ನೀಡುತ್ತಿದ್ದ. ಒಂದು ಪಕ್ಷ ಗೊತ್ತು ಮಾಡಿದ ಸಮಯ ಮೀರಿದರೆ ಸಾಲಗಾರರೊಡನೆ ಕಟುಕನಂತೆ ವರ್ತಿಸುತ್ತಿದ್ದ. ಭಿಕ್ಷುಕರಿಗೂ ಕೂಡ ಒಂದಾಣೆಯಷ್ಟು ಸಹ ದಾನಮಾಡುವ ಕೈ ಅವನದಲ್ಲ. ಆದರೆ ಸುತ್ತೂರಿನಲ್ಲಿಯೇ ಹೆಸರು ಮಾಡಿಕೊಂಡಿದ್ದ. ಅವನ ತಂದೆ–ತಾಯಿ ಗಳಿಸಿಕೊಟ್ಟ ಆಸ್ತಿ–ಸಂಪತ್ತನ್ನು ಸಹ ಜವಾಬ್ದಾರಿಯುತವಾಗಿ ನೋಡಿಕೊಳ್ಳದೆ ಹೊಲಗಳನ್ನೆಲ್ಲಾ ಬೀಳುಕೆಡವಿ ಸಂಗ್ರಹ ಸಂಪತ್ತನ್ನು ಹೇರಳವಾಗಿ ಬಡ್ಡಿಯ ರೂಪದಲ್ಲಿ ನೀಡಿ ಬಡವರ ಹೊಟ್ಟೆ ಹೊಡೆದು ತಾನು ಬದುಕುವ ಶೈಲಿಯನ್ನು ಮಾತ್ರ ಮನಮೋಹಕವಾಗಿ ಅರಿತಿದ್ದ.

ಒಂದು ದಿನ ಬೆಳಗಿನ ಜಾವ ಕಾಡುಸಿದ್ದನೊಬ್ಬ ಭಿಕ್ಷೆಗೆ ಬರುತ್ತಾ ಬಸಣ್ಣನ ಬಾಗಿಲಿಗೆ ಬಂದು 'ಶಂಖ' ಊದಿದ. "ಬೆಳ್ಳಂಬೆಳಗ್ಗೆ ಏನು, ಮುಂದಕ್ಕೆ ಹೋಗಿ ಬಾರಯ್ಯ" ಎಂದ ಬಸಣ್ಣ. "ಸ್ವಾಮಿ ನಿಮ್ಮದು ಮೊದಲನೇ ಮನೆ. ಹೀಗೆನ್ನಬೇಡಿ. ನಾನು ಧರ್ಮಸ್ಥಳದ ಶ್ರೀ ಕ್ಷೇತ್ರಕ್ಕೆ ಪಾದಯಾತ್ರೆ ಮಾಡುತ್ತಿದ್ದೇನೆ. ಅದು ಹಲವಾರು ದಿನಗಳಾಗಬಹುದು. ಸ್ವಲ್ಪ ಉದಾರ ಮನಸ್ಸು ಮಾಡಿ ಧನಸಹಾಯ ಮಾಡಿ. ನಿಮಗೆ ದೇವರೊಳ್ಳೆಯದು ಮಾಡುತ್ತಾನೆ" ಎಂದು ಬೇಡಿಕೊಂಡ ಭಿಕ್ಷುಕ.




ಬಸಣ್ಣ ಕಣ್ಣು ಕೆಂಪಗೆ ಮಾಡಿಕೊಂಡು, "ಹೋಗು, ಹೋಗು, ಪುಕ್ಕಟೆ ಧರ್ಮದ ರೂಪದಲ್ಲಿ ಕೊಡುವವ ರಾದರೆ ತಿಪ್ಪೆಯ ನಾಯಿಗೂ ಹಣ ಬೇಕಾದೀತು. ಬಂದು ಬಿಟ್ಟ ದೊಡ್ಡದಾಗಿ. ಇದನ್ನು ಸಂಪಾದನೆ ಮಾಡಿ ನಾನು ಈ ಸ್ಥಿತಿಯಲ್ಲಿರಬೇಕಾದರೆ ಎಷ್ಟು ಬೆವರು ಸುರಿಸಿ ಗಳಿಸಿದ್ದೇನೆ ಎಂದು ತಿಳಿದಿದ್ದೀಯಾ ? ನಿನ್ನ ಹಾಗೆ ಕಾಡಿ ಬೇಡಿ ದಯ್ಯಾ! ದಪ್ಪಾ! ಎಂದು ಸಂಗ್ರಹಿಸಿದ್ದರೆ ನೀರಿನಂತೆ ಬಾಚಿ ಬಾಚಿ ದಾನ ಮಾಡುತ್ತಿದ್ದೆ" ಎಂದು ರೇಗಿದ.

ಸಿದ್ದಯ್ಯ ಜೋರಾಗಿ ಗಹಗಹಿಸಿ ನಗತೊಡಗಿದ. ಬಸಣ್ಣ "ಏ ಮೂರ್ಖ, ಏಕೆ ಹಾಗೆ ಹುಚ್ಚನಂತೆ ನಗುತ್ತೀಯಾ ?" ಎಂದು ಗುಡುಗಿದ.

ಸಿದ್ದಯ್ಯ, "ನಾನಲ್ಲಯ್ಯ ಹುಚ್ಚ. ಇನ್ನು ಕೆಲವೇ ಕ್ಷಣಗಳಲ್ಲಿ ನೀನೇ ಆಗುತ್ತೀಯ. ಇಂದು ರಾತ್ರಿ ೧೨.೦೦ಕ್ಕೆ ನಿನ್ನ ಹಣೆಬರಹ ಮುಗೀತು. ನಂತರ ನೀನು ಗಳಿಸಿದ ಸಂಪತ್ತನ್ನು ನಿನ್ನ ಹಿಂದೇನೆ ಒಯ್ಯುವೆಯಾ ? ಇಲ್ಲವೇ ಪಾಪ, ಪುಣ್ಯ ಬಡ್ಡಿ ಒಯ್ಯುತ್ತೀಯಾ ?" ಎಂದು ಪ್ರಶ್ನಿಸಿದ.

ಸಾವಿನ ಹೆಸರು ಕೇಳುತ್ತಿದ್ದಂತೆಯೇ ಬಸಣ್ಣ ಸಿಡಿಲು ಬಡಿದ ಮರದಂತಾದ ! ಅವನ ಎದೆ ಒಳಗೊಳಗೇ ಢವಢವಗುಟ್ಟತೊಡಗಿತು. ಎರಡು ಸಾಗರಗಳಂತೆ ಕಣ್ಣುಗಳಲ್ಲಿ ನೀರು ಬಿತ್ತರಿಸಿ ಬಂದವು. ಕೂಡಲೇ ಸಿದ್ದಯ್ಯನ ಕಾಲು ಹಿಡಿದು, "ಓ ಮಹಾತ್ಮ ! ನನ್ನನ್ನು ಕ್ಷಮಿಸಿಬಿಡಿ. ಈಗ ನನ್ನ ಪಾಲಿನ ದೇವರು ನೀವೇ. ಹಣ, ಸಂಪತ್ತನ್ನೆಲ್ಲ ಧಾರೆ ಎರೆಯುತ್ತೇನೆ. ನನ್ನ ಪ್ರಾಣ ಉಳಿಯುವ ಬಗೆ ಇದ್ದರೆ ತಿಳಿಸಿ ನನ್ನನ್ನು ಪ್ರಾಣದ ಭೀತಿಯಿಂದ ಕಾಪಾಡುವಿರೆನ್ನುವ ತನಕ ನಿಮ್ಮ ಪಾದ ಗಳಿಂದ ಎನ್ನಯ ಕರಗಳನ್ನು ಮೇಲೆತ್ತಲಾರೆ" ಎಂದು ಗೋಗರೆಯತೊಡಗಿದ.

ಸಿದ್ದಯ್ಯನ ಬೆಂಕಿಯಂತಾದ ಮನಸ್ಸು ಕರಗಿ ತಣ್ಣಗಾಯಿತು. "ನೋಡು, ಇಷ್ಟೊಂದು ಬೇಡಿಕೊಳ್ಳುತ್ತಿ ಎಂದು ಪ್ರಾಣ ಭಿಕ್ಷೆಯ ಬಗ್ಗೆ ಒಂದು ಸಲಹೆ ನೀಡುವೆ. ಹೊತ್ತು ಮುಳುಗುವುದರೊಳಗಾಗಿ ನೀನು ಸಾಕಿದ ಪ್ರಾಣಿಯೋ, ಪಕ್ಷಿಯೋ, ಬಂಧುಗಳೋ ಯಾರಾದರೂ ಸಿಕ್ಕರೆ ಊರಾಚೆ ಇರುವ ಮೈಲಾರಲಿಂಗೇಶ್ವರ ದೇವಸ್ಥಾನದ ಬಳಿ ಬಂದುಬಿಡು. ಇದಲ್ಲದೆ ಬೇರೆ ಮಾರ್ಗ ನನ್ನಲ್ಲಿಲ್ಲ" ಎಂದು ಹೇಳಿ ಹೆಜ್ಜೆ ಕಿತ್ತ.

ಇತ್ತ ಬಸಣ್ಣನು ತನಗಾಗಿ ಯಾರಾದರೂ ಜೀವತ್ಯಾಗ ಮಾಡುವವ ರಿದ್ದಾರೆಯೇ ಎಂದು ತಿಳಿಯಲು ಅಣಿಯಾದ. ತಕ್ಷಣ ತಾನು ಪ್ರೀತಿಯಿಂದ ಸಾಕಿದ ಹುಂಜವನ್ನು ಕೇಳಿದ : "ಹುಂಜವೇ, ಇಷ್ಟು ದಿನ ನಿನಗೆ ಕಾಳು–ನೀರು ಹಾಕಿ ವಿನಯದಿಂದ ಸಾಕಿ ಬೆಳೆಸಿದ್ದೇನೆ. ಆದರೆ ನನಗೀಗ ಮರಣ ಕಾಲ ಸಮೀಪಿಸಿದೆ. ನಾನು ಇನ್ನೂ ಬದುಕಿ ಸಾಧಿಸುವ ಮಾರ್ಗಗಳು ಹಲವಾರಿವೆ. ಆದ ಕಾರಣ ನೀನು ನನ್ನ ಬದಲಿ ಜೀವ ತೆತ್ತು ಸಹಾಯ ಮಾಡುವೆಯಾ ?" "ಅದಕ್ಕೇನಂತೆ ಒಡೆಯಾ, ನನ್ನನ್ನು ಸಾಕಿ ಸಲಹಿದವರೇ ನೀವು. ಇಂದಲ್ಲ ನಾಳೆ ಯಾರಿಗಾದರೂ ಮಾರಿದರೆ ನನ್ನನ್ನು ಅವರು ಕತ್ತರಿಸಿ ತಿನ್ನುವುದಿಲ್ಲವೇ ? ಮರಣ ನನ್ನ ಪಾಲಿಗೆ ಎಂದಿಗೂ ಹೇಳಿ ಬರುವುದಿಲ್ಲ. ಆದರೆ ಇಂದೇ ಸಾಯಲು ಅಡ್ಡಿಯೇನು ? ನನಗೀಗ ನಿಮಗೆ ಮರುಜನ್ಮ ನೀಡಿದ ಪುಣ್ಯವಾದರೂ ಸಿಗಲಿ" ಎಂದು ಹೇಳಿತು ಹುಂಜ.

ಅಷ್ಟರಲ್ಲಿ ಬಾನಿನಿಂದ ಅಶರೀರ ವಾಣಿಯೊಂದು ಕೇಳಿಬಂತು : "ಹುಂಜವೇ, ಆ ನರ ಮಾನವನಿಗೋಸ್ಕರ ನೀನು ಪ್ರಾಣ ಕಳೆದುಕೊಳ್ಳಲು ಹೊರಟೆಯಾ ? ನನ್ನ ಗತಿ ಏನು ? ನೀನು ನನಗೆ ಅವಶ್ಯಕವಾಗಿ ಬೇಕೇ ಬೇಕು. ನೀನಿಲ್ಲದಿದ್ದರೆ, 'ಬೆಳಗಾಗಿದೇ ಎದ್ದೇಳು' ಎಂದು ಯಾರು ನನ್ನನ್ನು ಕೂಗಿ ಎಬ್ಬಿಸುತ್ತಾರೆ ? ಊರಿನಲ್ಲಿನ ಹುಳಹುಪ್ಪಟೆಗಳನ್ನು ಯಾರು ತಿಂದು

ಶುಚಿ ಮಾಡುತ್ತಾರೆ ? ನಿನ್ನ ಸಂತತಿಯನ್ನು ಯಾರು ಬೆಳೆಸುತ್ತಾರೆ. ನಿನ್ನ ಸತಿ, ಮಕ್ಕಳ ಕಷ್ಟಕ್ಕೆ ಪಾರವೇ ಇಲ್ಲವೇ ? ಆದ ಕಾರಣ ನೀನು ಸಾಯಬೇಡ" ಎನ್ನುತ್ತ "ಎಲವೋ ನರ ಮಾನವ, ನಿನ್ನ ಸ್ವಾರ್ಥಕ್ಕೆ ಮೂಕಪ್ರಾಣಿಗಳನ್ನು ಬಲಿಪಶುಗಳನ್ನಾಗಿ ಮಾಡುವೆಯಾ ?" ಎಂದು ಬಸಣ್ಣನಿಗೆ ಕೇಳಿತು.

ಇದರಿಂದ ಕುಪಿತಗೊಂಡ ಬಸಣ್ಣ ಮನೆಯೊಳಗೆ ಹೋಗುತ್ತಲೇ ತಾನು ಸಾಕಿದ 'ಮನೆ ಚಿರತೆ' ರಾಜನಂತೆ ಬಾಲ ಅಲ್ಲಾಡಿಸುತ್ತಾ ಒಡೆಯನ ಕಾಲುಗಳನ್ನು ನೇವರಿಸಹತ್ತಿತು. ಅದನ್ನು ಕುರಿತು ಬಸಣ್ಣ ಅಲ್ಲಿಯೂ ಸಹ ತನ್ನ ವಿಚಾರ ಧಾರೆಯನ್ನು ಸ್ಪಷ್ಟಪಡಿಸಿದ. ಬೀದಿಯಲ್ಲಿರಬೇಕಾದುದು ಅವನಿಂದಲೇ ಮನೆಯಲ್ಲಿ ತೋಳದಂತೆ ಬೆಳೆದ ಬೆಕ್ಕು ಚಿಂತಿಸಿ ತನ್ನ ಒಡೆಯನಿಗೋಸ್ಕರ ತನ್ನ ಪ್ರಾಣವನ್ನು ತ್ಯಜಿಸುವುದಾಗಿ ಹೇಳಿತು.

ಕೂಡಲೇ 'ಧರಿತ್ರಿ', "ಬೇಡ ಮಾರ್ಜಾಲ, ನೀನು ಸಾಯಲು ಮುಂದಾಗಬೇಡ. ನೀನೇನಾದರೂ ಸತ್ತರೆ ನಮ್ಮ ಗತಿ ಏನು ? ಆ ಇಲಿಗಳು ನನ್ನ ಮೈಯನ್ನೆಲ್ಲಾ ತೂತು ಮಾಡಿ ನನಗೆ ಚಿತ್ರಹಿಂಸೆ ಕೊಟ್ಟಾವು. ನೀನಿಲ್ಲವಾದರೆ ನನ್ನ ಮಡಿಲಲ್ಲಿ ವಿಷಜಂತುಗಳೇ ಅಧಿಕವಾಗುತ್ತವೆ. ಈ ಸ್ವಾರ್ಥಿ ನರಮಾನವನ ಮಾತನ್ನು ನಂಬಬೇಡ" ಎಂದಿತು.

ಹಾಗೆಯೇ ಆಲೋಚನಾಗ್ರಸ್ತನಾಗಿ ಬಸಣ್ಣ ಚಿಂತಿಸತೊಡಗಿದ. ದನದ ಕೊಟ್ಟಿಗೆಯಿಂದ 'ಅಂಬಾ' ಎಂದು ಅವನ ಅಚ್ಚುಮೆಚ್ಚಿನ ಮೋಬಳಿ ಆಕಳು ಗೌರಿ ಒದರಿತ್ತು. ತಕ್ಷಣವೇ ಎದ್ದು ಅದರ ಬಳಿಗೆ ಬಂದು, "ಗೌರಿ, ನಿನಗೆ ದಿನಾಲು ಸಾಕಾಗುವಷ್ಟು ಹಿಂಡಿ, ಮೇವನ್ನು ಹಾಕಿ ತೋಳದಂತೆ ಬೆಳೆಸಿದ್ದೇನೆ. ಆದರೆ ನನಗೀಗ ಯಮಧರ್ಮನಿಂದ ಕರೆಯೋಲೆ ಬಂದಿದೆ. ನಾನು ಇನ್ನು ನಿನ್ನಂಥ ಹಲವಾರು ಹಸುಗಳನ್ನು ಸಾಕಿ ಸಲಹಬೇಕೆಂದುಕೊಂಡಿದ್ದೇನೆ. ಆದಕಾರಣ ನನ್ನ ಬದಲು ನೀನು ಹೋಗಿ ನನಗೆ ಪ್ರಾಣ ಭಿಕ್ಷೆ ನೀಡುವೆಯಾ ?" ಎಂದು ದೈನ್ಯತೆಯಿಂದ ಬಿನ್ನವಿಸಿಕೊಂಡ. ತಕ್ಷಣವೇ ಗೌರಿ ಸೂಕ್ಷ್ಮವಾಗಿ ಯೋಚಿಸಿ, "ಒಡೆಯಾ. ನಾನು ಹೀಗೆ ಬೆಳೆಯಲು ಸುಖವಾಗಿರಲು ನೀವೇ ಕಾರಣ. ನಿಮಗೋಸ್ಕರ ನನ್ನ ಕೈಯಿಂದ ಅಷ್ಟನ್ನು ಮಾಡಲಾಗದೆ ? ಇದರಿಂದಾದರೂ ಸಂತೋಷವಾಗಿ ಪ್ರಾಣ ತೆತ್ತು ಕಿಂಚಿತ್ತಾದರೂ ನಿಮ್ಮ ಋಣ ತೀರಿಸುವ ಭಾಗ್ಯ ಒದಗಿಬಂತಲ್ಲಾ ! ತುಂಬಾ ಆನಂದವಾಗ್ತಾ ಇದೆ" ಎಂದಿತು.

"ತಾಳು, ತಾಳು, ಜನನಿ. ಆ ನರಮಾನವನಿಗೆ ಭಾಷೆ ಕೊಡಬೇಡ. ನೀನಿಲ್ಲ ದಿದ್ದರೆ ನಮ್ಮ ಗತಿ ಏನು ? ಹೈನ ಊಟ ಮಾಡುವವರ ಪಾಡೇನು ? ನಮ್ಮಲ್ಲಿರುವ ಪೌಷ್ಟಿಕಾಂಶವನ್ನೆಲ್ಲಾ ಈ ನರರು ಹೀರಿಬಿಟ್ಟಿದ್ದಾರೆ. ಆಹಾರ ರೂಪದಲ್ಲಿ ನಿನ್ನಯ ಕಾಯಕ ಅಪಾರ. ನೀನಿದ್ದರೆ ನಮಗೆ ಆಹಾರ. ನೀನು ಹೋದರೆ ನಮ್ಮ ಚೈತನ್ಯಕ್ಕೆ ಮುಂದಾರು ಗತಿ ?" ಎಂದು ಪಕ್ಕದ ಹೊಲ ಮತ್ತು ಸಸ್ಯ ಸಂಕುಲಗಳು ಕೂಗಿ ಕೇಳಿದವು. "ಈ ನರಮಾನವ ತನ್ನ ಬೇಳೆ ಬೇಯಿಸಿಕೊಳ್ಳುವುದಕ್ಕೆ ಅನ್ಯರ ಜೀವ ತಿನ್ನುವುದು ತನ್ನ ಕಸುಬು ಮಾಡಿಕೊಂಡಿದ್ದಾನೆ" ಎಂದು ಬಸಣ್ಣನನ್ನು ಕುರಿತು ಹಂಗಿಸಿದವು. ನಂತರ ಬಸಣ್ಣ ತಾನು ಸಾಕಿ ಸಲುಹಿದ ಮುದ್ದು ಗಿಳಿಯ ಪಂಜರದ ಬಳಿ ಬಂದು, "ಮುದ್ದು ಗಿಳಿಯೆ, ನಿನ್ನನ್ನು ಸುಂದರವಾಗಿ ಈ ಪಂಜರದಲ್ಲಿ ಸಾಕಿ ಬೆಳೆಸಿದ್ದೇನೆ. ಆದರೆ ನನಗೀಗ ಕೊನೆಗಾಲ ಬಂದಿದೆ. ನಿನಗೆ ದುಃಖವೆನಿಸುವುದಿಲ್ಲವೇ ? ನನಗಾಗಿ ನಿನ್ನ ಜೀವ ಕೊಟ್ಟು ನನ್ನನ್ನು ಕಾಪಾಡುವೆಯಾ ?" ಎಂದು ಪರಿಪರಿಯಾಗಿ ಬೇಡಿಕೊಂಡನು. ಗಿಳಿಯು "ನೀನೆಲ್ಲಿ ಸುಂದರವಾಗಿ ಸಾಕಿರುವೆ ? ನನ್ನ ತಂದೆ, ತಾಯಿ, ಅಕ್ಕ, ತಂಗಿಯರನ್ನು ಅಗಲಿಸಿದ ಮಹಾಪಾಪಿ ನೀನು ಎಂದು ಮನಸ್ಸಿನಲ್ಲೇ ಅಂದು ಕೊಳ್ಳುತ್ತಾ, ಯೋಚಿಸಿ, "ಒಡೆಯಾ, ನನ್ನ ಚೆಲುವಾದ ಸೌಂದರ್ಯಕ್ಕೆ ನೀವೇ ಕಾರಣ. ನಿಮಗೋಸ್ಕರ ಅದನ್ನಾದರೂ ಮಾಡಿ ತೃಣ ಹಂಗನ್ನು ಇಳಿಸಿಕೊಳ್ಳುವೆ. ನಾನು ಸಾಯಲು ಸಿದ್ಧನಿದ್ದೇನೆ" ಎನ್ನುತ್ತಿದ್ದಂತೆಯೇ, "ನಿಲ್ಲು ನಿಲ್ಲು ಗಿಳಿಯೇ" ಎಂದು ಎಲ್ಲಿಯೋ ಗುಡುಗಿದಂತಾಯ್ತು ! "ನಮ್ಮ ದೇಹದಲ್ಲಿ ಪಾಪದ ಹಣವನ್ನು ತುಂಬಿಕೊಂಡು ಅದರ ರಕ್ತದ ಮಡುವಿನಲ್ಲಿ ಜೀವಿಸಿ ಸಾಕಾಗಿದೆ. ಇಷ್ಟು ದಿವಸ ನಿನ್ನ ಚಿಲಿಪಿಲಿ ಧ್ವನಿಯ ಕೇಳಿ ಸ್ವಲ್ಪ ನೆಮ್ಮದಿಯಿಂದಿದ್ದೆನು. ನೋಡುಗರನ್ನು ಆಕರ್ಷಿಸಿ ಸುಂದರವಾಗಿ ಕಾಣುತ್ತಿದ್ದೆನು. ನೀನಿಲ್ಲದಿದ್ದರೆ ನಾನು ಮಸಣದಂತಾಗಿಬಿಡುವೆನು. ದಯವಿಟ್ಟು ನನ್ನನ್ನು ತೊರೆಯಬೇಡ" ಎಂದು ಬಸಣ್ಣನ ಜೀವಿತ ಮನೆಯು ಹೇಳಿತು.

ಬಸಣ್ಣ ಬಸವಳಿದು ಮೂಲೆ ಹಿಡಿದು ಊಟ, ನೀರು ದೂರಮಾಡಿ ಚಿಂತನಾಲೋಕದ ದಳ್ಳುರಿಯಲ್ಲಿ ಮನವ ಬೇಗುದಿಯಾಗಿಸಿಕೊಂಡ. 'ಬಸಣ್ಣಾ' ಎಂಬ ಮುಗಿಲ ಮಧುರ ಧ್ವನಿಯು ಅವನ ಕಿವಿಯಲ್ಲಿ ಹೂಂಕರಿಸಿತು. ಒಮ್ಮೆಲೇ ಬೆಚ್ಚಿಬಿದ್ದು ದಿಗ್ಭ್ರಮೆಗೊಂಡು, "ಯಾರು ನೀನು ? ನನಗಿನ್ನು ರಾತ್ರಿ ೧೨ರ ತನಕ ಸಮಯವಿದೆ ಹತ್ತಿರ ಬರಬೇಡ" ಎಂದು ಹಿಂದೆ ಸರಿಯತೊಡಗಿದ. "ಹೆದರಬೇಡ. ನಾನೇನು ಮೃತ್ಯುವಲ್ಲ. ನೀನು ಸಂಗ್ರಹಿಸಿದ ನಿಧಿದೇವತೆ ಮಾತನಾಡುತ್ತಿದ್ದೇನೆ. ನೀನು ಒಪ್ಪಿಗೆ ನೀಡುವುದಾದರೆ ನಾನು ನಿನಗೋಸ್ಕರ ಸಾಯಲು ಸಿದ್ಧ. ಈ ರಕ್ತ ಪಿಪಾಸಿ ವಾಸನೆಯಿಂದ ಮುಕ್ತಿ ಹೊಂದಬೇಕೆಂದು ನಿರ್ಧರಿಸಿಬಿಟ್ಟಿದ್ದೇನೆ. ಇಲ್ಲಿಂದ ಜೀವತೆತ್ತು ಸ್ವತಂತ್ರವಾಗಲು ನಿಶ್ಚಯಿಸಿದ್ದೇನೆ" ಎಂದಳು ನಿಧಿದೇವತೆ. "ಧನ್ಯನಾದೆ ತಾಯಿ ! ನೀನಾದರೂ ನನ್ನ ಪ್ರಾಣ ಕಾಪಾಡಲು ಮುಂದೆ ಬಂದೆಯಲ್ಲ. ಇಷ್ಟು ದಿನ ನಿನ್ನ ಸಾಕಿ ಸಲುಹಿದ್ದಕ್ಕೆ ಸಾರ್ಥಕವಾಯಿತು" ಎಂದ ಬಸಣ್ಣ. ಇನ್ನೊಂದು ತುದಿಯಿಂದ ಕರ್ಕಶವಾಗಿ, "ಎಲವೋ ಮೂಢ ! ಅಷ್ಟು ಸುಲಭವಾಗಿ ನೀನು ಬದುಕಲು ಸಾಧ್ಯವಿಲ್ಲ. ಅವಳನ್ನು ನಾನು ಬಿಟ್ಟುಕೊಡುವುದಿಲ್ಲ. ಅವಳು ನನ್ನ ಬಾಳಸಂಗಾತಿ" ಎಂದಿತು ಪಾಪ ದೇವತೆಯ ಧ್ವನಿ. ಬಸಣ್ಣ ಸಿಟ್ಟಿನಿಂದ "ಯಾರು ನೀನು ?" ಎಂದು ಕೇಳಿದ. "ನಾನು ನಿನ್ನ ಪಾಪದೇವತೆ. ನಿನ್ನ ಪಾಪದ ಕೊಡ ತುಂಬಿದೆ. ಆದಕಾರಣ ಅವಳನ್ನು ಈ ಮನೆಯಿಂದ ಬೀಳ್ಕೊಡಲು ನಾನು ಸಿದ್ಧವಿಲ್ಲ. ಎಲೇ ಭಾಗ್ಯಲಕ್ಷ್ಮಿಯೇ, ದಯವಿಟ್ಟು ನನ್ನನ್ನು ಬಿಟ್ಟು ತೊಲಗಬೇಡ. ಈ ರಕ್ತದಾಹಿ ನರಮಾನವ ಬಾಳದಿರಲಿ" ಎಂದು ಗುಡುಗಿತು ಪಾಪದೇವತೆ. ಇದರಿಂದ ಬಸಣ್ಣ ನಿರಾಸೆಗೊಂಡ.

ಅಷ್ಟೊತ್ತಿಗಾಗಲೇ ಸೂರ್ಯ ತನ್ನ ಮಾತೆಯ ಮಡಿಲ ಸೇರಿ ಸಮಯ ಕಳೆದಿದ್ದ. ಬಸಣ್ಣ ಕಂಡ ಆಸೆಗಳೆಲ್ಲವೂ ಮೇಣದಂತೆ ಕರಗಿಹೋದವು. ಬಸಣ್ಣ ನಿರಾಸೆಯಿಂದ ಅಳತೊಡಗಿದ. ಎಲ್ಲಾ ಯೋಚಿಸಿ ಬೇರೆ ವಿಧಿ ಇಲ್ಲದೆ ಊರಾಚೆಯಿರುವ ಮೈಲಾರಲಿಂಗೇಶ್ವರ ದೇವಸ್ಥಾನದ ಬಳಿಗೆ ಧಾವಿಸಿದ. ಅವನ ಬರುವಿಕೆಯನ್ನು ನೋಡುತ್ತಿದ್ದಂತೆಯೇ ಸಿದ್ದಯ್ಯ ಎಲ್ಲ ಅರಿತುಕೊಂಡ. ಬಸಣ್ಣ ಬಂದವನೆ ಸಿದ್ದಯ್ಯನ ಕಾಲನ್ನು ಹಿಡಿದ. "ನನಗೆ ಜೀವದಾನ ಮಾಡುವವರು ನನ್ನವರೆಂದು ಯಾರೂ ಉಳಿಯಲಿಲ್ಲ ಸ್ವಾಮಿ. ನೀವೇ ನನ್ನನ್ನು ಕಾಪಾಡಬೇಕೆಂದು ಬೇಡಿಕೊಂಡ. ಮುಗುಳ್ನಗುತ್ತಾ ಸಿದ್ದಯ್ಯ, "ನೋಡಿದೆಯಾ ಬಸಣ್ಣ, ನಾನು ಸ್ವಲ್ಪ ಹಣ ಸಹಾಯಮಾಡು ಎಂದರೆ ನೀನು ಎಷ್ಟೊಂದು ಮಾತಾಡಿಬಿಟ್ಟೆ ? ಈ ಜಗತ್ತಿನಲ್ಲಿರುವ ಪ್ರತಿಯೊಂದು ಜೀವಸಂಗಾತಿಗಳು ಒಂದಿಲ್ಲೊಂದು ರೀತಿಯಲ್ಲಿ ಅವಶ್ಯಕವಾಗಿವೆ. ಬದುಕಿಗೆ ಅವುಗಳ ಸಹಾಯ ಅಗತ್ಯ. ಆದರೆ ಈ ನರಮಾನವನಿಂದ ಏನು ಸಿಗುತ್ತದೆ ? ನೀನೇ ಆತ್ಮವಿಮರ್ಶೆ ಮಾಡಿಕೋ, ನಿನ್ನಿಂದ ಉಪಕಾರವಾಗಿದೆ, ನೀನು ಬೇಕು ಎಂದು ನಿನ್ನ ಯಾವ ಜೀವ ಸಂಗಾತಿಗಳಿಗೂ ಕೂಡ ಮನಸ್ಸು ಬರಲಿಲ್ಲ. ದೀನದಲಿತರ ರಕ್ತ ಹೀರಿ ಇಷ್ಟು ದಿವಸ ಬದುಕಿ ಜೀವನ ಸಾಗಿಸಿದೆಯಲ್ಲಾ? ಯಾರಿಗಾಗಿ ? ಏತಕ್ಕಾಗಿ ? ಈಗ ನಿನಗೆ ಮರಣ ಬಂದಾಗ ಉಪಯೋಗಕ್ಕಾಗಿ ಬಾರದಿದ್ದುದನ್ನು ಎಷ್ಟು ಗಳಿಸಿದರೇನು ? ಎಂದು ಪ್ರಶ್ನಿಸಿದ.

"ಹೌದು ಸ್ವಾಮಿಗಳೆ, ಗಳಿಕೆ ನಶ್ವರ. ನಿಮ್ಮಿಂದ ಜ್ಞಾನೋದಯವಾಯಿತು. ನೀವು ಮಹಾತ್ಮರು. ನಾನು ನನ್ನ ಜೀವನದಲ್ಲಿ ಹಣ ಗಳಿಸುವುದರಲ್ಲಿಯೇ ತಲ್ಲೀನನಾದೆ. ಅದರ ಬದಲು ಕಿಂಚಿತ್ತಾದರೂ ಪುಣ್ಯ ಎಂಬುದನ್ನು ಪಡೆದುಕೊಂಡಿದ್ದರೆ ಈಗ ಅದಾದರೂ ನನಗೆ ಪ್ರಾಣಸಂಕಟದಿಂದ ಪಾರಾಗಲೂ ಸಹಾಯವಾಗುತ್ತಿತ್ತೇನೋ ?" ಎಂದು ನೆಮ್ಮದಿಯ ನಿಟ್ಟುಸಿರುಬಿಟ್ಟು, "ನಾನು ಇನ್ನು ಬದುಕಿದ್ದು ಸಾರ್ಥಕವಿಲ್ಲ. ಬದುಕಿರಬಾರದು, ಏತಕ್ಕಾಗಿ ಬದುಕಬೇಕು ? ಯಾರಿಗಾಗಿ ಬದುಕಬೇಕು ? ಈ ಪಾಪಭರಿತ ದುರಾಸೆಗಾಗಿ ಬದುಕಲೇ ?" ಎಂಬಿತ್ಯಾದಿಯಾಗಿ ನೊಂದುಕೊಳ್ಳುತ್ತಾ ಕುಸಿದುಬಿದ್ದ. ಸಿದ್ದಯ್ಯ, "ಅದಕ್ಕೆ ಇನ್ನೂ ಕಾಲ ಮಿಂಚಿಲ್ಲ ಬಸಣ್ಣ ! ನಿನಗೆ ಇನ್ನೂ ಅವಕಾಶವುಂಟು. ನೀನು ಸಾಕಿದ ಆ ನಶ್ವರವಾದ ಸಂಪತ್ತನ್ನು ಈಗಲಾದರೂ ಜಗದ ಪುಣ್ಯಕಾರ್ಯಗಳಿಗೆ, ಕಷ್ಟದಲ್ಲಿರುವವರಿಗೆ, ಭಿಕ್ಷುಕರಿಗೆ ವಿನಿಯೋಗಿಸಲು ಅರೆಘಳಿಗೆ ಕಾಲಾವಕಾಶವಿದೆ. ಅಷ್ಟು ಮಾಡಿದರೆ ಈ ಘಳಿಗೆಯಲ್ಲಿ ಗಳಿಸಿದ ಪುಣ್ಯವಾದರೂ ಸಾಕು ನಿನ್ನನ್ನು ರಕ್ಷಿಸಲು" ಎಂದ ಸಿದ್ದಯ್ಯ.

ಇದನ್ನು ಕೇಳುತ್ತಿದ್ದಂತೆಯೇ ಬಸಣ್ಣನಿಗೆ ಕುರುಡನಿಗೆ ಕಣ್ಣುಗಳು ಬಂದಂತಾದವು. ತಾನು ಜಿಪುಣತನದಿಂದ ಸಂಗ್ರಹಿಸಿದ ಎಲ್ಲಾ ಸಂಪತ್ತನ್ನೂ ಸಮಾಜದ ಸತ್ಕಾರ್ಯಗಳಿಗೆ ವಿನಿಯೋಗ ಮಾಡಿ, ನೀರಿನಂತೆ ದಾನಮಾಡಿ ಸಾವಿನ ದಡದಿಂದ ತಪ್ಪಿಸಿಕೊಂಡು ಕೊನೆಗೆ ತನ್ನದೆಂಬ ಯಾವ ಸ್ವಾರ್ಥವನ್ನೂ ಉಳಿಸಿಕೊಳ್ಳದೆ ವಿರಾಗಿಯಾಗಿ ಬಾಳಿದ.

**ಕೊಟ್ರೇಶ್ ಎಸ್. ಉಪ್ಪಾರ್**
ಆಲೂರು, ತೇಜೂರು ರಸ್ತೆ, ಶಾಂತಿನಗರ, ಹಾಸನ – ೫೭೩ ೨೦೧

*ಕಾಲ ಮರಳಿನ ಮೇಲೆ ನಡೆದು ಹೋದವರೆಲ್ಲ*
*ತಮ್ಮ ಹೆಜ್ಜೆಯ ಗುರುತ ಬಿಟ್ಟರೇನಿಲ್ಲಿ ?*
*ಇಲ್ಲೊಬ್ಬರಲ್ಲೊಬ್ಬರಿರಬಹುದು ಹಿರಿತನಕೆ;*
*ಮಹತಿ ಬಲು ಅಪರೂಪ : ಮುದ್ದುರಾಮ.* – ಎನ್. ಎಲ್. ಆನಂದ



**ಎನ್. ಎಲ್. ಆನಂದ**

# ಗಾಂಧೀವಾದಿ ಸುರೇಂದ್ರ ಕೌಲಗಿ ಅವರೊಂದಿಗೆ ಸಂವಾದ

**ಗಾಂಧೀಜಿಯವರು ಭಾರತಕ್ಕೆ ಕೇವಲ ಸ್ವಾತಂತ್ರ್ಯ ದೊರಕುವುದರಲ್ಲಿ ಪ್ರಮುಖರೆಂಬ ಒಂದೇ ಕಾರಣಕ್ಕಲ್ಲದೆ, ಇಡೀ ಮನುಕುಲಕ್ಕೆ ಬದುಕುವ 'ಸುಸ್ಥಿರ ಮಾರ್ಗ'ವೊಂದನ್ನು ತೋರಿಸಿಕೊಟ್ಟಿರುವುದರಿಂದಲೂ ಅವರು ಪೂಜ್ಯರೆನಿಸಿದ್ದಾರೆ. ಸತ್ಯ, ಅಹಿಂಸೆ, ಮಾನವತೆಯ ತಳಹದಿಯ ಮೇಲೆ ನಿಂತಿದ್ದ ಅವರ ಜೀವನವೇ ಒಂದು ಸಂದೇಶ. ಈ ಮಾರ್ಗದಲ್ಲಿ ನಡೆದು ಜೀವನದಲ್ಲಿ ಸಾರ್ಥಕತೆ ಕಂಡವರು ಅನೇಕರು. ಅಂತಹವರ ಸಾಲಿನ ಒಬ್ಬ ಅನನ್ಯ ವ್ಯಕ್ತಿಯನ್ನು ಪರಿಚಯಿಸಲು, ಅವರ ಕೆಲವಾರು ವಿಚಾರಗಳನ್ನು ತಮ್ಮೊಂದಿಗೆ ಹಂಚಿಕೊಳ್ಳಲು ಹೆಮ್ಮೆ ಎನಿಸುತ್ತದೆ. ಆ ಮಹನೀಯರೇ ಗಾಂಧೀ ತತ್ತ್ವಗಳನ್ನು ಸಮಾಜದಲ್ಲಿ ಮೈಗೂಡಿಸಲು ಶ್ರಮಿಸುತ್ತಿರುವ ಗಾಂಧೀವಾದಿ ಶ್ರೀ ಸುರೇಂದ್ರ ಕೌಲಗಿ ಅವರು.**

**ದ. ರಾ. ಬೇಂದ್ರೆಯವರನ್ನು ಒಮ್ಮೆ ಸಂದರ್ಶಕರೊಬ್ಬರು, ''ಏನು ಸ್ವಾಮಿ, ಅರವತ್ತರ ನಂತರ ಎಲ್ಲರೂ, 'ಅರಳೋ...ಮರಳೋ' ಅಂತಾರೆ. ನೀವೇನಂತೀರಿ ?'' ಎಂದಾಗ ಬೇಂದ್ರೆ, ''ಅಯ್ಯೋ, ಅದು ಅರಳೋ ಮರಳೋ ಅನ್ನೋ ಕಾಲ ಅಲ್ಲ, ಮರಳಿ ಅರಳುವ ಕಾಲ'' ! ಎಂದರಂತೆ. ಈ ಮಾತಿಗೆ ರೂಪಕವೆಂಬಂತೆ ಬದುಕುತ್ತಿರುವ ಸುರೇಂದ್ರ ಕೌಲಗಿಯವರಿಗೀಗ ೭೬ ವರ್ಷದ ಪ್ರಾಯ. ತಮ್ಮ ಕ್ರಿಯಾಶೀಲತೆ, ಲವಲವಿಕೆಯಿಂದ ಯುವಕರನ್ನೂ ನಾಚಿಸುವ ಅವರು, 'ಗುಪ್ತದಾನದ ಮಹಾಸಿದ್ಧಾಂತ'ಕ್ಕೆ ದಾರಿಯಾದ 'ಖಾದಿ'ಯನ್ನು ಜೀವನ ಮಾರ್ಗವಾಗಿ ರೂಪಿಸಿಕೊಂಡು ಸಮಾಜಕ್ಕೆ ಮಾದರಿಯಾದವರು. ಈ ಇಳಿವಯಸ್ಸಿನಲ್ಲೂ ಯುವಕರ 'ಶಾಂತಿದಳ'ವನ್ನು ರಚಿಸಿ, ಆಂದೋಲನ ರೂಪಿಸಿ, ಸಮಾಜದಲ್ಲಿ ಸುಧಾರಣೆ ತರಬೇಕೆಂಬುವ ಅವರ ಅದಮ್ಯ ಹುರುಪು ಸಕಲರನ್ನೂ ಜಾಗೃತಗೊಳಿಸುವಂತಹದ್ದು. ಅಂತಹ ಮಹನೀಯರ ಜೊತೆ ಸಮಾಜದ ವಿವಿಧ ಆಯಾಮಗಳ ಬಗ್ಗೆ ನಡೆಸಿದ ಸಂವಾದದ ಸಾರ ಇಲ್ಲಿದೆ.**

**ಎನ್. ಎಲ್. ಆನಂದ :** ಪ್ರಸ್ತುತ ಸಮಾಜ ಯಾವ ದಿಕ್ಕಿನೆಡೆ ಸಾಗುತ್ತಿದೆ ?

**ಸುರೇಂದ್ರ ಕೌಲಗಿ :** ನಾನು ಗಾಂಧೀಜಿಯವರ ವಿಚಾರದ ಹಿನ್ನೆಲೆಯಿಂದ ಮಾತನಾಡುತ್ತೇನೆ. ಅವರ ಚಿಂತನೆಗಳು ಸರ್ವಕಾಲಕ್ಕೂ ಅನ್ವಯವಾದವುಗಳು ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ. ಇದಕ್ಕೆ ಮುಖ್ಯ ಉದಾಹರಣೆ, ಅವರ ಪಾಶ್ಚಿಮಾತ್ಯ ಸಂಸ್ಕೃತಿಯ ಖಂಡನೆ ಇತ್ಯಾದಿ. ಇದರ ಬಗ್ಗೆ ಗಾಂಧೀಜಿಯವರು ತಮ್ಮ ಪುಸ್ತಕ 'ಹಿಂದ್‌ಸ್ವರಾಜ್' (೧೯೦೯)ನಲ್ಲಿ ದೀರ್ಘವಾಗಿ ಬರೆಯುತ್ತಾ, 'ಕೈಗಾರಿಕಾಭಿವೃದ್ಧಿಯು ಯಾವುದೇ ದೇಶದ ಸಮಾಜದಲ್ಲಿ ಬಿರುಗಾಳಿ ಸೃಷ್ಟಿಸುತ್ತದೆಂದೂ, ಸಮಾಜ ಅವನತಿಯಾಗುತ್ತದೆ ಎಂದೂ' ಎಚ್ಚರಿಸಿದ್ದರು. ಇಂದು ಅದರ ನಿಜಾಂಶವನ್ನು ಕಾಣುತ್ತಿದ್ದೇವೆ. ಇಂದಿನ ಸಮಾಜವನ್ನು ಸೂಕ್ಷ್ಮವಾಗಿ ವಿಶ್ಲೇಷಣೆ ಮಾಡಿದರೆ, ಪ್ರಪಾತದ ಕಡೆಗೆ ಸಾಗುತ್ತಿರುವುದು ತಿಳಿಯುತ್ತದೆ. ಜನಸಾಮಾನ್ಯರ ಜೀವನವನ್ನು ಹಸನುಗೊಳಿಸಬೇಕಾದ ಸಮಾಜದ ನೇತಾರರು, ಸರ್ಕಾರ, ಮುಖಂಡರು, ಕೊನೆಗೆ ಶಿಕ್ಷಣ ಸಂಸ್ಥೆಗಳೂ ಕೂಡ ಮುಗ್ಧ ಜನತೆಯನ್ನು ಶೋಷಿಸುತ್ತಾ ಅವರ ಅಧೋಗತಿಗೆ ಕಾರಣವಾಗುತ್ತಿರುವುದನ್ನು ನೋಡಬಹುದು.

ಸಂದರ್ಶನ

**ಆನಂದ :** ಇಂದಿನ ಸಾಮಾಜಿಕ ಸಮಸ್ಯೆಗಳಿಗೆ ಕಾರಣವೇನು ?

**ಕೌಲಗಿ :** ಮುಖ್ಯವಾಗಿ, ಸಾಮಾಜಿಕ ಸಮಸ್ಯೆಗಳಿಗೆ ಎರಡು ಕಾರಣಗಳನ್ನು ನೀಡಬಹುದು. ಮೊದಲನೆಯದಾಗಿ ಜನರು ಹಣ, ಸಂಪತ್ತಿನ ಹಿಂದೆ ಬಿದ್ದು ತಮ್ಮ 'ಚಿಂತನಾಶಕ್ತಿ'ಯನ್ನು ಕಳೆದುಕೊಂಡಿರುವುದು. ಅವರು ಹಣದಿಂದ ಎಲ್ಲವೂ



*ಕೌಲಗಿ ದಂಪತಿಗಳು*

ದೊರೆಯುತ್ತದೆ ಎಂಬ ಭ್ರಮೆಯಲ್ಲಿ ಹಣವಂತರ ಕೈಗೊಂಬೆಯಾಗಿದ್ದಾರೆ. ಎರಡನೆಯದಾಗಿ, ಜನಸಾಮಾನ್ಯರಿಗೆ 'ಸಾಮಾಜಿಕ ಶಿಕ್ಷಣ' ನೀಡಬೇಕಾದ ಸರ್ಕಾರ, ಸಂಘ ಸಂಸ್ಥೆಗಳು ಅವರಲ್ಲಿನ ಹಣದ ದುರಾಸೆಯನ್ನು ಬಳಸಿಕೊಂಡು ಅವರನ್ನು ಪರಾವಲಂಬಿಗಳನ್ನಾಗಿ ಮಾಡಿದ್ದು. ಇದಕ್ಕೆ ಒಂದು ದೃಷ್ಟಾಂತವೆಂದರೆ, ದೇಶದಲ್ಲಿ ನೆರೆ, ಬರ ಉಂಟಾದಾಗ ಸರ್ಕಾರ ಮಾಡುವ ಕೆಲಸವೆಂದರೆ, ಒಂದಷ್ಟು ಹಣವನ್ನು ಚೆಲ್ಲಿ ಕೈಕಟ್ಟಿ ಕುಳಿತುಕೊಳ್ಳುವುದು. ಆದರೆ, ಈ ನಿಟ್ಟಿನಲ್ಲಿ ನಿಜವಾಗಿಯೂ ಆವಶ್ಯಕವಿರುವುದು ಜನರು ಪರಸ್ಪರ ಹಂಚಿ ತಿನ್ನುವ, ಸಹಾಯ ಮಾಡಿಕೊಳ್ಳುವ 'ಸಹಕಾರಿ' ಮನೋಭಾವವನ್ನು ಬೆಳೆಸಬೇಕಾದದ್ದು. ಅಂದೊಮ್ಮೆ ದೇಶದಲ್ಲಿ ಅತೀವ ಬರ ಉಂಟಾದಾಗ ಅಂದಿನ ಪ್ರಧಾನಿಗಳಾದ ಶ್ರೀ ಲಾಲ್‌ಬಹದ್ದೂರ್ ಶಾಸ್ತ್ರಿಯವರು 'ಪ್ರತಿಯೊಬ್ಬರೂ ಒಂದು ದಿನದ ಉಪವಾಸ ವ್ರತ ಕೈಗೊಳ್ಳಬೇಕೆಂಬ' ಕರೆ ನೀಡಿದರು. ಎಲ್ಲರೂ ಸ್ಪಂದಿಸಿದರು. ಬರವನ್ನು ಸಮಾಜವೇ ನಿರ್ವಹಣೆ ಮಾಡಿಕೊಂಡಿತು. ಅಂತಹ ಸಾಮಾಜಿಕ ಶಿಕ್ಷಣ ಜನರಿಗೆ ಬೇಕು. ಇಂದಿನ ಜನರ ದುಃಸ್ಥಿತಿಯನ್ನು ಮೊದಲೇ ಅರಿತಿದ್ದ ಮಹಾತ್ಮಾ ಗಾಂಧೀಜಿಯವರು ವಯಸ್ಕರ ಶಿಕ್ಷಣದ ಮೂಲಕ ಸಾಮಾಜಿಕ ಶಿಕ್ಷಣವನ್ನು ನೀಡುವಲ್ಲಿ ನಿರತರಾಗಿದ್ದರು. 'ಹಣಶಕ್ತಿ'ಗಿಂತ 'ಜನಶಕ್ತಿ' ಅತಿ ಮುಖ್ಯವೆಂದು ಸಾರಿದರು. ಆದರೆ, ಇಂದು ಪರಿಸ್ಥಿತಿ ಇದಕ್ಕೆ ವಿರುದ್ಧವಿರುವುದು ದುರಂತವೇ ಸರಿ.

**ಆನಂದ :** ಗಾಂಧೀಜಿಯವರು ಪ್ರಸ್ತುತ ಸಮಸ್ಯೆಗಳಿಗೆ ಹೇಗೆ ಪರಿಹಾರವಾಗುತ್ತಾರೆ?

**ಕೌಲಗಿ :** ಹೌದು. ಅವರು ಹಾಕಿಕೊಟ್ಟ ಮಾರ್ಗ, ಪ್ರಯೋಗಗಳು ಖಂಡಿತ ಇಂದಿನ ಸಮಸ್ಯೆಗಳಿಗೆ ಪರಿಹಾರವಾಗಬಲ್ಲವು. ಇದಕ್ಕೆ ಸ್ವಾತಂತ್ರ್ಯ ಆಂದೋಲನವು ಬಹುಮುಖ್ಯ ಉದಾಹರಣೆ. ಗಾಂಧೀಜಿಯವರ ಕರೆಗೆ ಧ್ವನಿಗೂಡಿಸಿದ ಜನರು ಸ್ವ-ಪ್ರೇರಣೆಯಿಂದ ಹೋರಾಟಗಳಿಗೆ ಧುಮುಕಿದರು. ಜಯಪ್ರಕಾಶ್ ನಾರಾಯಣರ 'ಸಂಪೂರ್ಣ ಕ್ರಾಂತಿ'ಯ ಆಂದೋಲನ, ವಿನೋಬಾ ಅವರ 'ಭೂದಾನ ಚಳುವಳಿ'ಗಳು ಯಶಸ್ವಿಯಾಗಲು ಜನರ ಪಾಲ್ಗೊಳ್ಳುವಿಕೆಯೇ ಕಾರಣವೆನ್ನುವುದರಲ್ಲಿ ಸಂಶಯವಿಲ್ಲ. ಇತ್ತೀಚಿನ ಅಣ್ಣಾ ಹಜ಼ಾರೆ ಅವರ 'ಭ್ರಷ್ಟಾಚಾರ ವಿರೋಧಿ' ಆಂದೋಲನವೂ ತಕ್ಕಮಟ್ಟಿಗೆ ಜನರ ಗಮನ ಸೆಳೆಯಲು ಸಾಧ್ಯವಾಗಿದ್ದು ಜನರಲ್ಲಿ ಅರಿವು ಉಂಟಾದ್ದರಿಂದ. ಈ ರೀತಿಯಲ್ಲಿ ಜನರು ಅಹಿಂಸಾತ್ಮಕ ಹೋರಾಟಗಳಿಂದ ಸದ್ಯದ ಸಮಸ್ಯೆಗಳಿಗೆ ಪರಿಹಾರ ಹುಡುಕುವ ಪ್ರಯತ್ನವಾಗಬೇಕು. ಸರ್ಕಾರದಿಂದಲ್ಲ. ಆದರೆ ದುರಂತವೆಂದರೆ, ಜನರು ಪ್ರತಿಯೊಂದಕ್ಕೂ ಸರ್ಕಾರದೆಡೆಗೆ ಬೆರಳು ತೋರಿಸುವ, ಕೈ ಚಾಚುವ ಪರಿಪಾಠ ರೂಢಿಸಿಕೊಂಡಿದ್ದಾರೆ. ಸರ್ಕಾರಕ್ಕೆ ಅಷ್ಟೊಂದು ಮಹತ್ವ ಕೊಡಬೇಕಾದ ಅಗತ್ಯವೇನಿಲ್ಲ. ಜೆ. ಪಿ.ಯವರೊಮ್ಮೆ ಹೇಳಿದ ಹಾಗೆ, ಸರ್ಕಾರವನ್ನು 'ಮನೆ ಕಸ ಗುಡಿಸುವ ಪೊರಕೆಯಂತೆ', ರೈಲಿನಲ್ಲಿರುವ 'ಎಚ್ಚರಿಕೆಯ ಸರಪಳಿ'ಯಂತೆ ಇಟ್ಟುಕೊಂಡಿರಬೇಕು. ಎಲ್ಲಕ್ಕಿಂತ ಮುಖ್ಯವೆಂದರೆ, ಸಾಮಾನ್ಯ ಮನುಷ್ಯ, 'ಈ ದೇಶ ನನ್ನದು' ಎಂಬ ಭಾವನೆ ಬೆಳೆಸಿಕೊಳ್ಳಬೇಕು. ಸರಕಾರವನ್ನು ಸೇವಕನಂತೆ ಕಾಣಬೇಕು. ಸಮಾಜದ ಸಮಸ್ಯೆಯನ್ನು ಸಮಾಜವೇ ಬಗೆಹರಿಸಿಕೊಳ್ಳಬೇಕು.

**ಆನಂದ :** ೭೦ರ ದಶಕದ ನಂತರದ ಹೋರಾಟ/ಚಳುವಳಿಗಳಿಂದ ನಿರೀಕ್ಷಿತ ಫಲಿತಾಂಶ ಪಡೆಯಲು ಸಾಧ್ಯವಾಗಿಲ್ಲ. ಏಕೆ ?

**ಕೌಲಗಿ :** ಚಳುವಳಿ ಮಾಡುವವರಿಗೆ ವಿಶೇಷ ವ್ಯಕ್ತಿತ್ವವಿರಬೇಕು. ಅವರು ನಿಃಸ್ವಾರ್ಥತೆಯಿಂದ ಹೋರಾಟ ಕೈಗೊಳ್ಳಬೇಕು. ಮುಖ್ಯವಾಗಿ ವೈಚಾರಿಕತೆಯನ್ನು ಮೈಗೂಡಿಸಿಕೊಳ್ಳಬೇಕು. ಇಂದಿನ ಚಳುವಳಿಗಳನ್ನು ಗಾಂಧೀ ಮಾರ್ಗದಲ್ಲಿ ನಡೆಸುತ್ತೇವೆನ್ನುವ ನಾಯಕರು, ಗಾಂಧೀಜಿಯವರನ್ನೇ ಸರಿಯಾಗಿ ಅರ್ಥೈಸಿಕೊಂಡಿರುವುದಿಲ್ಲ. ಗಾಂಧೀ ಅವರ ತಂತ್ರಗಳನ್ನು ಅರಿಯದೆ ಮುನ್ನಡೆಯುತ್ತಾರೆ. 'ವಿಜ್ಞಾನ ಅರಿಯದ ಉಪವಾಸ, ಅದರ ಹಿಂದಿರುವ ಮರ್ಮ ಅರಿಯದೆ ಕುಳಿತರೆ ಪ್ರಯೋಜನವಿಲ್ಲ.' ಚಳುವಳಿಕಾರರಿಗೆ ದೂರ ದೃಷ್ಟಿಯಿರಬೇಕು. ಮುಖ್ಯವಾಗಿ ಎದುರಾಳಿಗಿಂತ ತಾನು ಚಿಕ್ಕವನು ಎಂದು ಭಾವಿಸಬೇಕೇ ಹೊರತು, ದೊಡ್ಡವನೆಂದಲ್ಲ. ('ಎನಗಿಂತ ಕಿರಿಯರಿಲ್ಲ' ಎಂಬಂತಿರಬೇಕು) ಚಳುವಳಿಗಳು ಯಶಸ್ವಿಯಾಗಲು ಅದರಲ್ಲಿನ ತತ್ತ್ವ, ಆದರ್ಶ, ವಿಚಾರಗಳನ್ನು ತಿಳಿದುಕೊಂಡು



**ಸುದ್ದಿ ಚಿತ್ರ**



ದಿನಾಂಕ ೧೪-೯-೨೦೧೪ರಂದು ಜಿಲ್ಲಾ ಸಾಹಿತ್ಯ ಪರಿಷತ್ತು ಗುಲ್ಬರ್ಗಾ, ನವಕರ್ನಾಟಕ ಪ್ರಕಾಶನ ಹಾಗೂ ನವಭಾರತ ಚಿಂತನ ವೇದಿಕೆ ಇವರ ಸಂಯುಕ್ತ ಆಶ್ರಯದಲ್ಲಿ ಗುಲ್ಬರ್ಗಾ ನಗರದ ಕನ್ನಡ ಭವನದಲ್ಲಿ ವಿಶೇಷ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಅಂದು, ಕುವೆಂಪು ಭಾಷಾಭಾರತಿ ಪ್ರಾಧಿಕಾರದ ಗೌರವ ಪ್ರಶಸ್ತಿ ಪುರಸ್ಕೃತ ಹಾಗೂ ಪ್ರಗತಿಶೀಲ ಚಿಂತಕ ಪ್ರೊ|| ಆರ್. ಕೆ. ಹುಡಗಿ ಅವರಿಗೆ ಸನ್ಮಾನ ಸಮಾರಂಭ ಮತ್ತು ನವಕರ್ನಾಟಕ ಪ್ರಕಾಶನದ ಐದು ವೈಚಾರಿಕ ಪುಸ್ತಕಗಳ ಲೋಕಾರ್ಪಣೆ ನಡೆಯಿತು. ಸಮಾರಂಭದ ಅಧ್ಯಕ್ಷತೆ ಶ್ರೀ ಮಹಿಪಾಲ ರೆಡ್ಡಿ ಮುನ್ನೂರು (ಅಧ್ಯಕ್ಷರು, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಗುಲ್ಬರ್ಗಾ) ವಹಿಸಿದ್ದು, ಮುಖ್ಯ ಅತಿಥಿಗಳಾಗಿ ಶ್ರೀ ಬಿ. ಆರ್. ಪಾಟೀಲ್ (ಶಾಸಕರು, ಮಾಜಿ ಉಪಸಭಾಪತಿಗಳು) ಆಗಮಿಸಿದ್ದರು. ಶ್ರೀ ಟಿ. ವಿ. ಶಿವಾನಂದನ್, ಪ್ರೊ|| ಉಪಳಾಂವಕರ, ಡಾ|| ಶಿವಗಂಗಾರುಮ್ಮಾ, ಡಾ|| ಖಾನಾಪುರೆ, ಡಾ|| ಸಂಪತ್ತರಾವ್ ಮುಂತಾದ ಗಣ್ಯರು ವೇದಿಕೆಯಲ್ಲಿದ್ದು ಅಪಾರ ಸಂಖ್ಯೆಯಲ್ಲಿ ಓದುಗರು, ಅಭಿಮಾನಿಗಳು ನೆರೆದಿದ್ದರು.

ಜನರು ಚಳುವಳಿಗೆ ಬರಬೇಕೇ ಹೊರತು, ವ್ಯಕ್ತಿಯನ್ನು ನೋಡಿ ಅಲ್ಲ. ಆದರೆ, ಇಂದು ವ್ಯಕ್ತಿ ಪೂಜೆಗೆ ಮಹತ್ವ ನೀಡುತ್ತಿದ್ದು, ನಿಜವಾದ ತತ್ತ್ವ ಆದರ್ಶಗಳನ್ನ ಗಾಳಿಗೆ ತೂರಿದ್ದಾರೆ.

**ಆನಂದ :** ಚಳುವಳಿಗಳನ್ನು ಕಟ್ಟುವುದು ಹೇಗೆ? ಅದರಲ್ಲಿ ಯುವಕರ ಪಾತ್ರವೇನು ?

**ಕೌಲಗಿ :** ಚಳುವಳಿಯೆನ್ನುವುದು ನಿರಂತರವಾದ ಪ್ರಕ್ರಿಯೆ. ಅದಕ್ಕೆ ಸೂಕ್ತ ಸಿದ್ಧತೆ ಬೇಕು. ಚಳುವಳಿ ಕೈಗೊಳ್ಳುವವರು ಸಮಾಜದ ಸಮಸ್ಯೆಗಳ ಆಳ, ಅಗಲ ತಿಳಿದಿರಬೇಕು. ಜನರ ನಾಡಿಮಿಡಿತ ಅರಿಯಬೇಕು. ಇದರಲ್ಲಿ ಯುವಕರ ಪಾತ್ರ ಮಹತ್ವವಾದದ್ದು. ಒಂದು ದೇಶದ ಪ್ರಗತಿ ಯುವಪೀಳಿಗೆಯಿಂದ ಸಾಧ್ಯವಾಗು ವುದರಿಂದ ಅವರನ್ನು ಸೂಕ್ತವಾಗಿ ತರಬೇತಿಗೊಳಿಸಬೇಕು. ಅದಕ್ಕೆ ಪಕ್ಷಾತೀತವಾಗಿ 'ಶಿಬಿರಗಳ' ಆಯೋಜನೆಯಾಗಬೇಕು. ಇದರಲ್ಲಿ ವಿದ್ಯಾರ್ಥಿಗಳಿಗೆ ಪಾಲ್ಗೊಳ್ಳಲು ಅವಕಾಶ ನೀಡಬೇಕು. ಆ ಶಿಬಿರದಲ್ಲಿ ಸಮಾಜ, ದೇಶ, ತತ್ತ್ವಾದರ್ಶಗಳು, ಮೌಲ್ಯಗಳ ಬಗ್ಗೆ ಯುವಕರಿಗೆ ಮನನ ಮಾಡಬೇಕು. ಅವರನ್ನು 'ಶಾಂತಿ ಸೈನಿಕರಂತೆ' ತಯಾರು ಮಾಡಬೇಕು. ದೇಶದ ಯಾವುದೇ ಮೂಲೆಯಲ್ಲಿ ಐಕ್ಯತೆ, ಭದ್ರತೆ, ಕೋಮು ಸೌಹಾರ್ದತೆ ಕದಡಿದ ತಕ್ಷಣ ಸ್ಪಂದಿಸುವಂತಿರಬೇಕು. ಇವರು ಸಾಮಾಜಿಕ ಚಳುವಳಿಗಳನ್ನು ಕಟ್ಟುವುದರ ಜೊತೆಗೆ, ಜನಾಭಿಪ್ರಾಯ ರೂಪಿಸಬೇಕು. ಜನಪರ ಚಳುವಳಿಗಳಲ್ಲಿ ಪಾಲ್ಗೊಂಡು ಬೆಂಬಲ ಸೂಚಿಸಬೇಕು.

**ಆನಂದ :** ಇಂದಿನ ಪೀಳಿಗೆ 'ಹಕ್ಕು'ಗಳಿಗೆ ಮಹತ್ವ ಕೊಟ್ಟಷ್ಟು, 'ಕರ್ತವ್ಯ'ಗಳಿಗೆ ಕೊಡುವುದಿಲ್ಲ. ಏಕೆ ?

**ಕೌಲಗಿ :** ಇದು ತುಂಬ ಸಂಕೀರ್ಣವಾದ ಪ್ರಶ್ನೆ. ನನ್ನ ಪ್ರಕಾರ ಇದಕ್ಕೆ ಮುಖ್ಯ ಕಾರಣ ಜನರಲ್ಲಿ 'ನಿಜವಾದ ದೇಶಾಭಿಮಾನ' ಇಲ್ಲದಿರುವುದೇ ಆಗಿದೆ. ಈ ದೇಶವನ್ನು ನಿಷ್ಕಲ್ಮಶವಾಗಿ ಪ್ರೀತಿಸುವವರ ಸಂಖ್ಯೆ ಕಡಿಮೆಯಿದೆ. ಗಾಂಧೀಜಿಯವರ ದೇಶಪ್ರೇಮ ಅಪರಿಮಿತ ವಾಗಿತ್ತು. ಭಾರತ ದೇಶವು ಇಡೀ ಪ್ರಪಂಚದಲ್ಲಿ ನಾಯಕನ ಪಾತ್ರವನ್ನು ವಹಿಸಬೇಕು, ಮಾದರಿ ಸಮಾಜ ಸೃಷ್ಟಿಸುವಲ್ಲಿ ಪ್ರಮುಖ ಪಾತ್ರ ವಹಿಸಬೇಕು ಎಂಬ ಅದಮ್ಯ ಆಕಾಂಕ್ಷೆಯನ್ನು ಗಾಂಧೀಜಿ ಯವರು ಹೊಂದಿದ್ದರು. ಅಂತಹ ದೇಶಾಭಿಮಾನ ನಮ್ಮ ಭಾರತೀಯರಲ್ಲಿ ಇಲ್ಲವಾಗಿದೆ. ಇದಕ್ಕೆ ಬಹುಮುಖ್ಯ ಕಾರಣ, ಇಂದಿನ ಆಧುನಿಕ ಶಿಕ್ಷಣ ಪದ್ಧತಿ ಎಂದರೆ ತಪ್ಪಲ್ಲ, ಬ್ರಿಟಿಷರ ರಾಷ್ಟ್ರ ಧ್ವಜ ಕೆಳಗಿಳಿದು ಭಾರತದ ಬಾವುಟ ಮೇಲೆ ಹೋದ ತಕ್ಷಣವೇ ಇಂಗ್ಲಿಷ್ ಶಿಕ್ಷಣ ಕೆಳಗಿಳಿದು, ಭಾರತದ ಭಾಷೆಗಳು ಮೇಲೆ ಹೋಗಬೇಕಿತ್ತು. ಆದರೆ, ಇಂದು ಭಾರತೀಯತೆಯ ಮೇಲೆ 'ಪಾಶ್ಚಿಮಾತ್ಯೀಕರಣ' ಸವಾರಿ ಮಾಡುತ್ತಿದೆ. ಇದಕ್ಕೆ ಜನರು ರತ್ನಗಂಬಳಿಯ ವೇದಿಕೆ ರೂಪಿಸಿದ್ದಾರೆ. ಆದ್ದರಿಂದ ಇಂದು ಪಾಶ್ಚಿಮಾತ್ಯರ 'ಹಕ್ಕು' ಕಲ್ಪನೆ ಮೇಲೆ ಹೋಗಿ, ಭಾರತೀಯರ 'ಕರ್ತವ್ಯ' ಕಲ್ಪನೆಯು ಪಾತಾಳ ಸೇರಿದೆ. ಈ ನಿಟ್ಟಿನಲ್ಲಿ ಜನರನ್ನು ಪರಾವಲಂಬಿಗಳನ್ನಾಗಿ ಮಾಡಿದ ಸರ್ಕಾರದ ಪಾತ್ರವನ್ನು ಅಲ್ಲಗಳೆಯುವಂತಿಲ್ಲ.

**ಆನಂದ :** ಹಿಂದಿನ ರಾಜಕಾರಣಕ್ಕೂ, ಇಂದಿನ ರಾಜಕಾರಣಕ್ಕೂ, ಇರುವ ವ್ಯತ್ಯಾಸವೇನು ?

**ಕೌಲಗಿ :** ರಾಜಕಾರಣಕ್ಕೂ ಜನಜೀವನಕ್ಕೂ ಕರುಳುಬಳ್ಳಿಯ ಸಂಬಂಧವಿದೆ. ಹಿಂದೆ ಆ ಸಂಬಂಧ ಸಮೃದ್ಧವಾಗಿತ್ತು. ಆದರೆ ಇಂದು ಅದು ತುಂಡಾಗಿದೆ. ಇವೆರಡೂ 'ನಾನೊಂದು ತೀರ, ನೀನೊಂದು ತೀರ' ಎಂಬಂತಾಗಿದೆ. ಆಗಸ್ಟ್ ತಿಂಗಳಲ್ಲಿ ಕಡ್ಡಾಯವಾಗಿ 'ಗ್ರಾಮಸಭೆ' ನಡೆಸಬೇಕೆಂದಿದ್ದರೂ, ಇಂದು ಅದು ರಾಜಕೀಯವಾಗಿ ಛಿದ್ರವಾಗಿ ತನ್ನ ಅರ್ಥ ಕಳೆದುಕೊಂಡಿದೆ. ಗ್ರಾಮದ ಹಿತವನ್ನು ಚಿಂತನೆಗೆ ಒಯ್ಯಬೇಕಾಗಿದ್ದ ಗ್ರಾಮಸಭೆ, ಇಂದು ಪಟ್ಟಭದ್ರ ಹಿತಾಸಕ್ತಿಗಳ, ಶಕ್ತರ ಹಿತ ಕಾಪಾಡಲು ಮಾಡಿಕೊಂಡ ಯಂತ್ರದಂತಿದೆ. ರಾಜಕಾರಣ


ಮಕ್ಕಳೊಂದಿಗೆ ಕೌಲಗಿಯವರು

ಉಳಿಯಬೇಕಾದರೆ ಜನರ ಬೆಂಬಲ ಅಗತ್ಯ. ಅದು ಬೆಳೆಯಬೇಕಿರುವುದು ಸಮಾಜದ ಪೋಷಣೆಯಿಂದ. ಅದೇ ಇಂದಿನ ಬಹುದೊಡ್ಡ ಕೊರತೆ.

**ಆನಂದ :** ಇಂದಿನ ಸಮಾಜದಲ್ಲಿ ಮೌಲ್ಯ ಮತ್ತು ಆದರ್ಶಗಳು ಅಪರೂಪವಾಗುತ್ತಿವೆಯಲ್ಲ ? ಇದಕ್ಕೆ ಪರಿಹಾರವೇನು ?

**ಕೌಲಗಿ :** ಹೌದು, ಇಂದಿನ ಪೀಳಿಗೆಯು ಹಿಂದಿನಿಂದ ನಡೆದುಬಂದ ಮೌಲ್ಯ, ಆದರ್ಶಗಳನ್ನು 'ನಮಗಲ್ಲ ಬಿಡಿ' ಎಂಬ ದೃಷ್ಟಿಯಲ್ಲಿ ಕಾಣುತ್ತಿದೆ. ಅದು ಎಂದೂ ಒಳ್ಳೆಯದಲ್ಲ. ಅಧೋಗತಿಯ ಸಂಕೇತವಿದು. ಇವುಗಳನ್ನು ಮೈಗೂಡಿಸಿಕೊಳ್ಳಬೇಕೆಂದರೆ, ಮೊದಲಿಗೆ ಮೌಲ್ಯಗಳು ಶಿಕ್ಷಣದ ಅಂಗವಾಗಬೇಕು. ಮೌಲ್ಯಾಧಾರಿತ ಶಿಕ್ಷಣದಿಂದ, ಮೌಲ್ಯಾಧಾರಿತ ಸಮಾಜದ ಸೃಷ್ಟಿ ಸಾಧ್ಯ. ಗಾಂಧೀಜಿಯವರು ಪ್ರತಿಪಾದಿಸಿದ 'ಏಕಾದಶಿ ವ್ರತ', ಸತ್ಯ, ಅಹಿಂಸೆ, ಬ್ರಹ್ಮಚರ್ಯ, ಅಸಂಗ್ರಹ, ಆಸ್ವಾದ, ಸರ್ವಧರ್ಮ ಸಮಾನತೆ ಮುಂತಾದ ಮೌಲ್ಯಗಳನ್ನು ವಿದ್ಯಾರ್ಥಿಗಳಿಗೆ, ಯುವಕರಿಗೆ ಅರ್ಥವಾಗುವಂತೆ ಹೇಳಿ, ಮನದಟ್ಟುಮಾಡಬೇಕು. ಅದು ಸಮಾಜದಲ್ಲಿ ಗಮನಾರ್ಹ ಬದಲಾವಣೆಗೆ ಕಾರಣವಾಗುತ್ತದೆ. ಉದಾಹರಣೆ : ಇಂದಿನ ಸಮಾಜಕ್ಕೆ ಅಂಟಿಕೊಂಡಿರುವ ಕ್ಯಾನ್ಸರ್‌ನಂತಹ, ಭ್ರಷ್ಟಾಚಾರವನ್ನು ಹೋಗಲಾಡಿಸಲು 'ಅಸಂಗ್ರಹ' (ಅವಶ್ಯಕತೆಗಿಂತ ಹೆಚ್ಚಿಗೆ ಸಂಗ್ರಹಿಸಿಟ್ಟುಕೊಳ್ಳದಿರುವುದು), 'ಆಸ್ತೇಯ' (ಕಳ್ಳತನ ಮಾಡದಿರುವುದು), ಇಂತಹ ಮೌಲ್ಯಗಳು ಪರಿಹಾರವಾಗುತ್ತವೆ. ಉಪವಾಸ ಮಾಡುವುದೂ ಒಂದು ಮೌಲ್ಯ. ಕೆಲವು ಧರ್ಮಗಳಲ್ಲಿ ಇದು ಕಡ್ಡಾಯ. ಇದರ ಹಿಂದಿರುವ ಎರಡು ಪ್ರಮುಖ ಉದ್ದೇಶಗಳೆಂದರೆ,

೧. ವ್ಯಕ್ತಿಯ ಆರೋಗ್ಯವನ್ನು ಉತ್ತಮಪಡಿಸುವುದು.
೨. ದೇಶದ ಅಭಿವೃದ್ಧಿ.

ಮಕ್ಕಳಿಗೆ ಉತ್ತಮ ಮೌಲ್ಯಗಳನ್ನು ಹೇಳಿಕೊಡಬೇಕು. ಇದಕ್ಕೆ ಕುಟುಂಬವು ಸೂಕ್ತ ಸ್ಥಳವಾಗಿದೆ. ಈ ನಿಟ್ಟಿನಲ್ಲಿ ನಮ್ಮ 'ಸರ್ವೋದಯ ಪಾತ್ರೆ' ಆಂದೋಲನವು ಉತ್ತಮ ಉದಾಹರಣೆ ಯಾಗುವುದೆಂದು ನನ್ನ ನಂಬಿಕೆ.

**ಆನಂದ :** ವೃತ್ತಿಪರ ಸಮಾಜಕಾರ್ಯ, ಕಾರ್ಯಕರ್ತರ ಬಗ್ಗೆ ತಮ್ಮ ಅಭಿಪ್ರಾಯವೇನು ?

**ಕೌಲಗಿ :** ನನ್ನ ಅಭಿಪ್ರಾಯದಲ್ಲಿ ಸೇವಾಕ್ಷೇತ್ರಕ್ಕೆ ಬೇಕಿರುವುದು ಸ್ವಯಂ ಸೇವಕರು. ವೃತ್ತಿಪರ ಸಮಾಜಕಾರ್ಯ ಪಾಶ್ಚಿಮಾತ್ಯರ ಕಲ್ಪನೆ, ಅಲ್ಲಿ ಸರ್ಕಾರ ತಾನು ಮಾಡಬೇಕಾದ ಕೆಲಸವನ್ನು ಹಣ ಕೊಟ್ಟು ಇತರರಿಂದ ಮಾಡಿಸುವ ಪರಿಪಾಠವನ್ನು ರೂಢಿಸಿಕೊಂಡಿತು. ಸಮುದಾಯದ ಹುಲ್ಲು–ಬೇರುಗಳಲ್ಲಿ ಕೆಲಸ ಮಾಡಲು ಸಾಮರ್ಥ್ಯ ಹೊಂದಿದ್ದ ಅವರು ಉತ್ತಮವಾಗಿ ಕೆಲಸ ಮಾಡಿದರು. ಇತ್ತ, ಸರ್ಕಾರ ಹಂತ–ಹಂತವಾಗಿ ತನ್ನ ಜವಾಬ್ದಾರಿಯಿಂದ ನುಣುಚಿಕೊಂಡಿತು. ಬದ್ಧತೆಯು ಮರೆಯಾಯಿತು. ಅದನ್ನೇ ನಮ್ಮಲ್ಲೂ ಸಮರ್ಪಕ ಮಾರ್ಪಾಡುಗಳಿಲ್ಲದೆ ಅಳವಡಿಸಿಕೊಂಡೆವು. ಇಂದು ನಮ್ಮಲ್ಲಿನ ಭ್ರಷ್ಟ ಸರ್ಕಾರಗಳು ತಮ್ಮ ಹುಳುಕನ್ನು ಮುಚ್ಚಿಕೊಳ್ಳಲು ಪ್ರಾಜೆಕ್ಟ್‌ಗಳನ್ನು ತೋರಿಸಿ, ಸಮಾಜ ಕಾರ್ಯಕರ್ತರನ್ನು ದಾಳವನ್ನಾಗಿ ಬಳಸಿಕೊಳ್ಳುತ್ತಿವೆ. ಅವರು ಮಾಡಬೇಕಾದ ಕೆಲಸವನ್ನು ನಮ್ಮ ಕಡೆಯಿಂದ ಮಾಡಿಸುತ್ತಿದ್ದಾರೆ. ಸೇವಾಕ್ಷೇತ್ರಕ್ಕೆ ವ್ಯಾಪಾರೀಕರಣ ಎಂದೂ ಒಳ್ಳೆಯದಲ್ಲ. ಅದು ಅಧಿಕಾರಶಾಹಿಗಳನ್ನು ತಯಾರಿಸುತ್ತದೆಯೇ ಹೊರತು ಸೇವಕರನ್ನಲ್ಲ.


ಸಂದರ್ಶನ ಲೇಖನ ಸಿದ್ಧಪಡಿಸಿದವರು
**ಶ್ರೀ ಎನ್. ಎಲ್. ಆನಂದ**
ಉಪನ್ಯಾಸಕರು, ಸಿ.ಎಂ.ಆರ್. ಕಾಲೇಜು, ಕಲ್ಯಾಣನಗರ, ಬೆಂಗಳೂರು



# ಈ ಕನಸುಗಳಿಗೆ ಬೇರೆ ಕೆಲಸವಿಲ್ಲವೇ?

ಕಾರ್ಖಾನೆಯ ವಿವಿಧ ಹುದ್ದೆಗಳಲ್ಲಿ ಭರ್ತಿ ಮೂವತ್ತೆಂಟು ವರ್ಷಗಳ ಸೇವೆ ಸಲ್ಲಿಸಿದ ನಂತರ ನಿವೃತ್ತಿಯಂತೂ ಆಗಲೇಬೇಕಿತ್ತು, ಆಯಿತು. ನಿವೃತ್ತಿಯ ನಂತರ ಕಾಲ ಕಳೆಯುವುದು ಹೇಗೆಂಬುದು ಯೋಚಿಸುವ ವಿಷಯವಾಗಿರಲಿಲ್ಲ. ಆದರೆ ನನ್ನೊಡನೆ ಹಾಗೂ ಒಂದೆರಡು ವರ್ಷ ಮುಂಚೆ ನಿವೃತ್ತರಾದವರಿಗೆ ಮುಂದೇನು ಮಾಡುವುದು ಎಂಬುದು ಕಾಡಿದ್ದಂತೂ ನಿಜ.

ನೀವು ನಿವೃತ್ತಿಗೆ ಮುಂಚೆಯೇ ಯಾವುದಾದರೊಂದು ಹವ್ಯಾಸವನ್ನು ಬೆಳೆಸಿಕೊಂಡಿದ್ದರೆ ನಿವೃತ್ತ ಜೀವನವನ್ನು ಕಳೆಯಲು ಯಾವ ತೊಂದರೆಯೂ ಆಗದು. ಇಲ್ಲವೇ ಶಕ್ತಿಸಾಮರ್ಥ್ಯಗಳಿದ್ದರೆ ದುಡಿಯಲು ತಯಾರಾಗಿರಬೇಕು. ಆದರೆ ಸಾರ್ವಜನಿಕ ಉದ್ದಿಮೆಗಳಲ್ಲಿ ಕೆಲಸ ಮಾಡಿದವರಿಗೆ ಅಲ್ಲಿನ ಸೌಕರ್ಯ, ಕೆಲಸದ ವಾತಾವರಣ ಮುಂತಾದವುಗಳನ್ನು ಅನುಭವಿಸಿದವರು ಖಾಸಗಿ ಕಂಪನಿ / ಕಚೇರಿಗಳಲ್ಲಿ ಖಂಡಿತ ದುಡಿಯಲಾರರು. ಕೊಡುವ ಐದಾರು ಸಾವಿರ ರೂ.ಗಳಿಗೆ ಹಗಲು ರಾತ್ರಿ ದುಡಿಯಲು ಸಿದ್ಧರಿರಬೇಕಾಗುತ್ತದೆ. ಈ ಕಾರಣಕ್ಕೆ ಸಾರ್ವಜನಿಕ ಉದ್ದಿಮೆಯಲ್ಲಿ ದುಡಿದವರ ಮನಸ್ಸು ಎಂದಿಗೂ ಒಗ್ಗದು.

ಆದರೆ ನನಗೆ ನಿವೃತ್ತಿ ಎಂಬುದು ಎಂದಿಗೂ ತೊಂದರೆ ಎನಿಸದಿರಲು ನಾನು ಮೊದಲಿನಿಂದಲೂ ಬೆಳೆಸಿಕೊಂಡಿದ್ದ ಹವ್ಯಾಸವೂ ಕಾರಣವಾಗಿತ್ತು. ಕನ್ನಡ ಸಾಹಿತ್ಯದಲ್ಲಿ ಒಲವಿದ್ದು, ಓದುತ್ತಾ ಬಂದಿದ್ದು, ಬರವಣಿಗೆಯನ್ನು ರೂಢಿಸಿಕೊಂಡಿದ್ದರಿಂದ ಕಾಲ ಕಳೆಯುವುದೇನೂ ಕಷ್ಟವಾಗಿರಲಿಲ್ಲ. ನಿವೃತ್ತಿಗೆ ಮುಂಚೆಯೇ ಬರವಣಿಗೆಯ ಹಲವಾರು ಯೋಜನೆಗಳು, ಇದುವರೆಗೂ ಓದಲಾಗದಿದ್ದ ಹಲವಾರು ಪುಸ್ತಕಗಳನ್ನು ಓದಲೇಬೇಕೆಂದು ನಿರ್ಧರಿಸಿದ್ದರಿಂದ ನಿವೃತ್ತಿ ಒಂದು ರೀತಿಯ ಸಾಹಿತ್ಯಾಭ್ಯಾಸಕ್ಕೆ ದಾರಿಮಾಡಿಕೊಟ್ಟಂತಾಗಿತ್ತು.

ಬೆಳಿಗ್ಗೆ ಒಂಬತ್ತು–ಒಂಬತ್ತೂವರೆಗೆ ತಿಂಡಿ ತಿಂದು ಮಹಡಿಯ ಮೇಲಿನ ರೂಮಿಗೆ ಹೋಗಿ ಕುಳಿತುಬಿಟ್ಟರೆ ಮಧ್ಯಾಹ್ನ ಎರಡರವರೆಗೆ, ಊಟದ ನಂತರ ಮೂರು–ಮೂರೂವರೆಗೆ ಪುನಃ ಹೋದರೆ ಸಂಜೆ ಏಳರವರೆಗೆ ಅಲ್ಲಿರುತ್ತಿದ್ದೆ. ಹೀಗೆ ಇದೊಂದು ರೀತಿಯ ಕಾರ್ಖಾನೆಯ ಕೆಲಸದಂತೆ ನನ್ನ ಟೈಂ–ಟೇಬಲನ್ನು ಸಿದ್ಧಪಡಿಸಿಕೊಂಡಿದ್ದರಿಂದ ಯಾವಾಗಲೂ ಯಾವುದಾದರೊಂದು ಕೆಲಸದಲ್ಲಿ ಬಿಜ಼ಿಯಾಗಿರುತ್ತಿದ್ದೆ. ನನ್ನನ್ನು ಹುಡುಕಿಕೊಂಡು ಬಂದ ಕೆಲ ಸ್ನೇಹಿತರ ಬಳಿ ನನ್ನಾಕೆಯು "ಬಿಡಿ, ಅವರು ಫ್ಯಾಕ್ಟರಿಗೆ ಹೋಗುತ್ತಿದ್ದಾಗ ಮನೆಯವರೊಂದಿಗೆ ಸ್ವಲ್ಪ ಕಾಲ ಕಳೆಯುತ್ತಿದ್ದರು. ಈಗ ಆಫೀಸ್ ಟೈಮಿಗಿಂತ ಹೆಚ್ಚು ಹೊತ್ತು ಮಹಡಿಯ ಮೇಲೇ ಇರ್ತಾರೆ" ಎನ್ನುತ್ತಿದ್ದಳು.

ನನ್ನೊಟ್ಟಿಗೆ ಹಾಗೂ ನನಗಿಂತ ಒಂದೆರಡು ವರ್ಷ ಮುಂಚೆ ನಿವೃತ್ತರಾದ ಹಲವಾರು ಮಂದಿ ಆಗಾಗ್ಗೆ ಸರ್ಕಲ್ ಹೊಟೇಲಿನ ಬಳಿಯೋ, ಮೆಡಿಕಲ್ ಸ್ಟೋರ್ಸ್‌ನ ಬಳಿಯೋ ಸಂಜೆ ಹೊತ್ತು ಸಿಗುತ್ತಿದ್ದರು. 'ಏನ್ ರಾವ್, ಈ ನಡುವೆ ಕಾಣೋದೇ ಇಲ್ಲ, ಫ್ಯಾಕ್ಟರಿಗೆ ಹೋಗೋವಾಗ ಬಸ್ಸಿನಲ್ಲಾದರೂ ಸಿಕ್ತಾ ಇದ್ರಿ, ಈಗ ಅದೂ ಇಲ್ಲ, ಏನ್ ಅಷ್ಟು ಬಿಜ಼ೀನಾ!' ಎಂದು ಮಾತಿಗೆ ಶುರುವಿಟ್ಟರೆ ಮುಗಿಯಿತು. ಫಲಶ್ರುತಿ ಎಂದರೆ ಬರೇ ಅರಿಯರ್ಸು, ಡಿ.ಎ. ಇನ್‌ಕ್ರೀಸು, ಬೋನಸ್ ಡಿಫರೆನ್ಸು, ಸ್ಯಾಲರಿ ನ್ಯೂಫಿಕ್ಸೇಷನ್ ಅರಿಯರ್ಸು ಇತ್ಯಾದಿಗಳ ಸುತ್ತಲೇ ಅವರ ಮಾತುಕತೆಗಳೆಲ್ಲವೂ ಸುತ್ತುತ್ತಿದ್ದುವು. ನನಗಂತೂ ಇಂಥ ವಿಚಾರಗಳಲ್ಲಿ ಅಂತಹ ಆಸ್ಥೆಯೇನಿರಲಿಲ್ಲ. ದುಡಿದಿದ್ದಕ್ಕೆ ಕಾರ್ಖಾನೆ ಸಾಕಷ್ಟು ಕೊಟ್ಟಿದೆ. ಹಾಗೇನಾದರೂ ಬಂದರೆ ತೆಗೆದುಕೊಂಡರಾಯ್ತು. ಇಲ್ಲದಿದ್ದರೆ ಚಿಂತೆಯಿಲ್ಲ ಎಂಬ ನಿರಾಳ ಮನಸ್ಸಿನ ತೃಪ್ತ ಮನಸ್ಸು ನನ್ನದು.

ಫ್ಯಾಕ್ಟರಿಯಲ್ಲಿ ಸಿಬ್ಬಂದಿ ಸಂಖ್ಯೆ ಇಳಿಮುಖವಾದರೆ ಸಾಕೆಂಬ ಧೋರಣೆಯ ಅಧಿಕಾರಿವರ್ಗ ಸ್ವಯಂ ನಿವೃತ್ತಿಹೊಂದಿ ಹೊರಹೋಗುವವರಿಗೆ ಕೆಲ ಬೆನಿಫಿಟ್‌ಗಳನ್ನು ಮಾತ್ರ ಕೊಟ್ಟು, ಮುಂದೆ ವೇಜ್ ರಿವಿಷ಼ನ್ ಆದರೆ ಅದರ ಅರಿಯರ್ಸ್‌ಗೂ ಅರ್ಹತೆ ಇದೆ ಎಂದು ಸಾಗಹಾಕಿತ್ತು. ಅಂಥವರು ಸಿಕ್ಕಾಗಲೆಲ್ಲ ಅವರದ್ದು ಒಂದೇ ಅಹವಾಲು, "ನೋಡಿ, ನಮ್ಗೆಲ್ಲ ಅರಿಯರ್ಸ್ ಕೊಡ್ತೇವೆಂದು ಸುಳ್ಳು ಹೇಳಿ ಹೊರಗೆ ಕಳುಹಿಸಿ ಈಗ ಸತಾಯಿಸುತ್ತಿದ್ದಾರೆ, ಮೋಸದ

**ವೈ. ಎನ್. ಗುಂಡೂರಾವ್**

> ಕನಸು ಕಾಣದವರೇ ವಿರಳ. ನೀವು ನಿದ್ರೆ ಮಾಡುವುದು ಎಷ್ಟು ಸಹಜವೋ ಕನಸು ಕಾಣುವುದೂ ಅಷ್ಟೇ ಸಹಜ ಕೂಡ. ಕನಸುಗಳೆಂದರೆ ಜಾಗೃತ ಮನಸ್ಸಿನಲ್ಲಿ ಸಾಧಿಸಲಾಗದ ವಿಷಯಗಳು ಸುಪ್ತಚೇತನದಲ್ಲಿ ಮಡುಗಟ್ಟಿ ನಿಂತಿದ್ದು ನಿದ್ರಾವಸ್ಥೆಯ ಸ್ಥಿತಿಯಲ್ಲಿ ಕನಸಿನ ರೂಪದಲ್ಲಿ ಹೊರಹೊಮ್ಮುವುದೇ ಆಗಿದೆ. ಹೊರ ಮನಸ್ಸಿನ ಅತೃಪ್ತ ಬಯಕೆಗಳು ಪರೋಕ್ಷವಾಗಿ ಸುಪ್ತಮನಸ್ಸಿನಿಂದಾಚೆಗೆ ಕನಸಿನ ರೂಪದಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ನಿದ್ರೆಯ ಸ್ಥಿತಿಯಲ್ಲಿದ್ದಾಗ ಅನೈಚ್ಛಿಕವಾಗಿ ಸಾಲುಸಾಲಾಗಿ ಬರುವ ಚಿತ್ರಗಳ, ಭಾವನೆಗಳ, ಉದ್ವೇಗಗಳ ಸಂವೇದನೆಗಳನ್ನೊಳಗೊಂಡಿದ್ದರೂ ಅದಕ್ಕೊಂದು ಸ್ಪಷ್ಟ ರೂಪವಿಲ್ಲದೆ ಅವ್ಯವಸ್ಥಿತವಾಗಿ, ಅಸಂಬದ್ಧವಾಗಿ ಕಾಣಿಸಿಕೊಳ್ಳುತ್ತವೆ. ನಾನು ಕಾಣುತ್ತಿದ್ದ ಕನಸುಗಳೂ ಹಾಗೇ ಇದ್ದುವು.

ಫ್ಯಾಕ್ಟರಿ ರೀ. ಇಂಥವರಿಗೆಲ್ಲ ಹೊಡೀಬೇಕ್ರಿ" ಎನ್ನುವ ಮಟ್ಟಕ್ಕೂ ಅವರ ಮಾತುಗಳು ಉದುರುತ್ತಿದ್ದವು. ಇಂತಹ ಮಾತುಗಳನ್ನು ಕೇಳಲು ನನಗೆ ಸುತರಾಂ ಇಷ್ಟವಾಗುತ್ತಿರಲಿಲ್ಲ. ಏಕೆಂದರೆ ನಮಗೆ ನಮ್ಮ ಸೇವಾವಧಿ ಪೂರ್ತಾ ಅನ್ನ ಬಟ್ಟೆ, ಅಷ್ಟೇ ಏಕೆ ಸ್ವಂತಕ್ಕೊಂದು ಸೂರು ನಿರ್ಮಿಸಿಕೊಳ್ಳುವ, ಮಕ್ಕಳ ವಿದ್ಯಾಭ್ಯಾಸ ಪೂರೈಸುವ, ಹೆಣ್ಣುಮಕ್ಕಳ ಮದುವೆ ಮಾಡಿ ಕಳುಹಿಸುವಂತಹ ಕೆಲಸ ಕಾರ್ಯಗಳನ್ನೆಲ್ಲ ಈ ಫ್ಯಾಕ್ಟರಿಯ ಸಂಬಳದಿಂದಲೇ ಮಾಡಿಕೊಂಡಿಲ್ಲವೇ? ಅಂಥಾದ್ದರಲ್ಲಿ ನಾವುಗಳು ಋಣಿಯಾಗಿರಬೇಕಾದ ಸಂಸ್ಥೆಯನ್ನು ಬೈಯ್ಯುವುದು ಸರಿಯಲ್ಲ ಎಂದು ವಾದಿಸಿದಾಗ, "ರಾವ್ ನಮ್ಮ ಕಷ್ಟ ನಿಮಗೇನು ಗೊತ್ತು? ವೇಜ್ ರಿವಿಷನ್ ಅರಿಯರ್ಸ್ ಡಿಫರೆನ್ಸೇ ನಮ್ಗೆ ಐವತ್ತು ಸಾವಿರಕ್ಕಿಂತ ಜಾಸ್ತಿ ಬರಬೇಕು, ಯಾರು ಕೊಡ್ತಾರೆ ಹೇಳಿ?" ಎಂಬ ಅವರ ದುಗುಡ, ಕೋಪ ತುಂಬಿದ ಮಾತಿನ ಹಿಂದೆ ಹಣಕ್ಕಾಗಿ ಅವರ ಪರದಾಟ ಏನೆಂಬುದು ಅರ್ಥವಾಗುತ್ತಿತ್ತು. ಆದರೆ ಯಾರೇನು ಮಾಡಲು ಸಾಧ್ಯ? ಇಂಥವರು ಸಿಕ್ಕಾಗ ಗಂಟೆಗಟ್ಟಲೆ ವಾದಿಸಿದರೂ ಅವರು ಕಡೆಗೆ ಬಂದು ಮುಟ್ಟುತ್ತಿದ್ದುದು 'ಫ್ಯಾಕ್ಟರಿ ನಮ್ಗೆಲ್ಲಾ ಮೋಸ ಮಾಡ್ಬಿಟ್ತು' ಎಂಬಲ್ಲಿಗೆ. ಅಂಥವರ ಸಮಾಧಾನಕ್ಕಾಗಿ ಹೊಟೇಲಿಗೆ ಕರೆದೊಯ್ದು ಕಾಫಿ ಕೊಡಿಸಿ ತೃಪ್ತಿಪಡಿಸಿ ನನ್ನ ಕೆಲಸದ ಕಡೆಗೆ ತೆರಳುತ್ತಿದ್ದೆ. ಇತ್ತೀಚೆಗೆ ಸಂಜೆ ಐದು-ಆರರ ಸಮಯದಲ್ಲಿ ವಾಕಿಂಗ್ ಹೊರಟರೆ ಇಂಥವರ ಕೈಲಿ ಖಂಡಿತ ಸಿಕ್ಕಿಬೀಳಬೇಕಾದೀತೆಂದು ವಾಕಿಂಗ್ ಸಮಯವನ್ನು ಏಳರ ನಂತರಕ್ಕೆ ಬದಲಿಸಿಕೊಂಡಿದ್ದೆ.

ಯಾವಾಗಲೂ ಏನಾದರೊಂದು ಬರವಣಿಗೆಯ ಕೆಲಸವನ್ನು ಹಚ್ಚಿಕೊಂಡು ಒಂದು ವರ್ಷದ ನಿವೃತ್ತಿ ಜೀವನ ಕಳೆಯುವಲ್ಲಿ ನನ್ನ ಎರಡು-ಮೂರು ಪುಸ್ತಕಗಳು ಪ್ರಕಟವಾಗಿದ್ದುದು ಸಂತಸ ತಂದ ವಿಷಯವೇ ಆಗಿತ್ತು. ಇನ್ನು ಕೆಲವು ಪುಸ್ತಕಗಳನ್ನು ಹೊರತರುವ ಯೋಜನೆಯ ಕನಸು ಕಾಣತೊಡಗಿದೆ. ಕನಸು ಕಾಣಲಿಕ್ಕೇನು ಹಣ ಕೊಡಬೇಕೆ! ಇದು ವ್ಯಾವಹಾರಿಕವಾಗಿ ನಾನು ಸಾಧಿಸ ಹೊರಡಬೇಕೆನ್ನುವ ದೃಷ್ಟಿಯಿಂದ ಹಗಲಲ್ಲಿ ಬರೆಯುತ್ತ ಕುಳಿತಾಗ ಕಾಣುತ್ತಿದ್ದ ಕನಸುಗಳಾದರೆ ರಾತ್ರಿ ವೇಳೆ ಮತ್ತೊಂದು ರೀತಿಯ ಕನಸುಗಳು ಬಂದು ಕಾಡತೊಡಗಿದ್ದು ಅತಿ ವಿಚಿತ್ರವೆನಿಸತೊಡಗಿತು.

ಹಾಗೆ ನೋಡಿದರೆ ಕನಸು ಕಾಣದವರೇ ವಿರಳ. ನೀವು ನಿದ್ರೆ ಮಾಡುವುದು ಎಷ್ಟು ಸಹಜವೋ ಕನಸು ಕಾಣುವುದೂ ಅಷ್ಟೇ ಸಹಜ ಕೂಡ. ಕನಸುಗಳೆಂದರೆ ಜಾಗೃತ ಮನಸ್ಸಿನಲ್ಲಿ ಸಾಧಿಸಲಾಗದ ವಿಷಯಗಳು ಸುಪ್ತಚೇತನದಲ್ಲಿ ಮಡುಗಟ್ಟಿ ನಿಂತಿದ್ದು ನಿದ್ರಾವಸ್ಥೆಯ ಸ್ಥಿತಿಯಲ್ಲಿ ಕನಸಿನ ರೂಪದಲ್ಲಿ ಹೊರಹೊಮ್ಮುವುದೇ ಆಗಿದೆ. ಹೊರಮನಸ್ಸಿನ ಅತೃಪ್ತ ಬಯಕೆಗಳು ಪರೋಕ್ಷವಾಗಿ ಸುಪ್ತಮನಸ್ಸಿನಿಂದ ಆಚೆಗೆ ಕನಸಿನ ರೂಪದಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ನಿದ್ರೆಯ ಸ್ಥಿತಿಯಲ್ಲಿದ್ದಾಗ ಅನೈಚ್ಛಿಕವಾಗಿ ಸಾಲುಸಾಲಾಗಿ ಬರುವ ಚಿತ್ರಗಳ, ಭಾವನೆಗಳ, ಉದ್ವೇಗಗಳ ಸಂವೇದನೆಗಳನ್ನೊಳಗೊಂಡಿದ್ದರೂ ಅದಕ್ಕೊಂದು ಸ್ಪಷ್ಟ ರೂಪವಿಲ್ಲದೆ ಅವ್ಯವಸ್ಥಿತವಾಗಿ, ಅಸಂಬದ್ಧವಾಗಿ ಕಾಣಿಸಿಕೊಳ್ಳುತ್ತವೆ. ನಾನು ಕಾಣುತ್ತಿದ್ದ ಕನಸುಗಳೂ ಹಾಗೇ ಇದ್ದುವು.

ಫ್ಯಾಕ್ಟರಿಗೆ ಹೋಗುತ್ತಿದ್ದಾಗ ಎರಡನೆಯ ಪಾಳಿಯಲ್ಲೂ, ಅಂದರೆ ಮಧ್ಯಾಹ್ನ ಎರಡರಿಂದ ಹತ್ತರವರೆಗೆ ಕೆಲಸ ಮಾಡಬೇಕಾಗುತ್ತಿತ್ತು. ಕೆಲಸ ಮುಗಿದು ಹತ್ತಕ್ಕೆ ಸೈರನ್ ಊದಿದ ತಕ್ಷಣ ಬಾತ್‌ರೂಂಗೆ ಹೋಗಿಬಂದು ಫ್ಯಾಕ್ಟರಿಯ ಒಳಗಡೆ ವಿಭಾಗಗಳ ಮಧ್ಯೆ ಮಧ್ಯೆ ರಸ್ತೆಯಂತೆ ಮಾಡಿದ್ದ ಸ್ಥಳದಲ್ಲಿ ನೋಡುತ್ತೇನೆ, ಒಬ್ಬ ಸಿಬ್ಬಂದಿಯ ಸುಳಿವೂ ಇಲ್ಲ. ಅರೆ, ಈಗ ತಾನೆ ಸೈರನ್ ಕೂಗಿತಲ್ಲ! ಅಷ್ಟುಬೇಗ ಎಲ್ಲರೂ ಹೊರ ಹೊರಟುಹೋದರೆ? ಎಂದುಕೊಂಡು ಗೇಟಿನ ಹೊರಗಡೆ ಯಾರ್ಡಿನಲ್ಲಿ ನಿಂತಿರುತ್ತಿದ್ದ ಬಸ್ಸು ಹಿಡಿಯಲು ಓಡಲು ಪ್ರಾರಂಭಿಸಿದಾಗ ಓಡುವುದೆಲ್ಲಿ, ಹೆಜ್ಜೆ ಮುಂದಿಡಲೂ ಕೂಡ ಆಗುತ್ತಿಲ್ಲ. ನಾನೆಷ್ಟೇ ವೇಗವಾಗಿ ಓಡಿ ಹೋಗೋಣವೆಂದು ಪ್ರಯತ್ನಿಸಿದರೂ ಹೆಜ್ಜೆಗಳು ಅಲ್ಲೇ ಹೂತು ಹೋದಂತಾಗ ತೊಡಗಿದೆ. ರಾತ್ರಿ ಬಸ್ಸು ತಪ್ಪಿಹೋದರೆ ಬಿಟಿಎಸ್ ಬಸ್ ಕೂಡ ಸಿಕ್ಕದು. ಇನ್ನು ಮನೆ ತಲುಪುವುದಾದರೂ ಹೇಗೆ? ರಾತ್ರಿಯಾದರೂ ಬರಲಿಲ್ಲವೆಂದು ಮನೆಯವರು ಗಾಬರಿಯಾದಾರೆಂದು ಬಸ್ಸು ಹಿಡಿದೇ ತೀರಬೇಕೆಂದು ಇನ್ನೂ ವೇಗವಾಗಿ ಓಡಲು ಪ್ರಾರಂಭಿಸುತ್ತೇನೆ. ಗೇಟು ತಲುಪಿದಾಗ ನಿಂತಿದ್ದ ವಾಚ್‌ಮನ್ ಸೆಲ್ಯೂಟ್ ಹೊಡೆದ. ಹೊರಗಡೆ ಬಂದು ನೋಡಿದರೆ ಒಂದು ಬಸ್ಸು ಕೂಡ ಇಲ್ಲ. ನೀರವ ರಾತ್ರಿಯಲ್ಲಿ, ಮಿಣುಕುತ್ತಿದ್ದ ಲೈಟ್ ಕಂಬದ ಬೆಳಕಿನಲ್ಲಿ ಯಾರ್ಡ್ ಬಿಕೋ ಎನ್ನುತ್ತಿದೆ. ಅರೆ, ಇಷ್ಟು ಬೇಗ ಬಸ್ಸುಗಳು ಹೊರಟುಹೋದವೇ? ಛೇ, ಎಂಥ ಕೆಲಸವಾಗಿ ಬಿಟ್ಟಿತು!



## ಮಹಾನ್ ಗಾಯಕಿ ಫಿರೋಜ಼ ಬೇಗಂ ನಿಧನ

ಸುಮಾರು ದಿನಗಳಿಂದ ಅನಾರೋಗ್ಯದಿಂದ ಬಳಲುತ್ತಿದ್ದ, ಬಾಂಗ್ಲಾದೇಶದಲ್ಲಿ ದಂತಕಥೆಯಾಗಿದ್ದ ಖ್ಯಾತ ಬಂಗಾಲಿ ಗಾಯಕಿ ಫಿರೋಜ಼ ಬೇಗಂ ೦೯.೦೯.೨೦೧೪ರಂದು ತಮ್ಮ ಸಹಸ್ರಾರು ಸಂಗೀತಾಭಿಮಾನಿಗಳಿಗೆ ವಿದಾಯ ಹೇಳಿ ತಮ್ಮ ಜೀವನ ಪಯಣ ಮುಗಿಸಿದ್ದಾರೆ.

೨೮.೦೭.೧೯೩೦ರಲ್ಲಿ ಜನಿಸಿದ ಫಿರೋಜ಼ ಬಾಲ್ಯದಲ್ಲೇ ಸಂಗೀತದತ್ತ ಆಕರ್ಷಿತರಾದರು. ತನ್ನ ೬ನೇ ತರಗತಿಯಲ್ಲಿ ಆಲ್ ಇಂಡಿಯಾ ರೇಡಿಯೋಗಾಗಿ ಮೊತ್ತಮೊದಲು ಹಾಡಿದಾಗಲೇ ಈ ಬಾಲಕಿ ಪ್ರಖ್ಯಾತ ಕವಿ ಕಾಜ಼ಿ ನಜ್ರುಲ್ ಇಸ್ಲಾಮ್ ಅವರ ಸಂಪರ್ಕಕ್ಕೆ ಬಂದು ಹಂತ ಹಂತವಾಗಿ ಖ್ಯಾತಿಯ ಶಿಖರವನ್ನೇರಿದರು. ೧೯೫೪ರವರೆಗೂ ಕಲ್ಕತ್ತದಲ್ಲಿ ನೆಲೆಸಿದ್ದ ಈಕೆ ೧೯೬೭ರಲ್ಲಿ ಈಗಿನ ಬಾಂಗ್ಲಾದೇಶಕ್ಕೆ ತೆರಳಿದರು. ಪತಿ ಕಮಲ್ ದಾಸ್‌ಗುಪ್ತ ಹಾಡುಗಾರರಾಗಿ, ಸಂಗೀತ ಸಂಯೋಜಕರಾಗಿ ಹೆಸರು ಮಾಡಿದ್ದವರು. ಮಕ್ಕಳು ಹಮೀನ್ ಅಹ್ಮದ್ ಮತ್ತು ಶಾಫಿನ್ ಕೂಡ ಹಾಡುಗಾರರೆ.

ಕವಿ ನಜ್ರುಲ್ ಅವರ ವೈಶಿಷ್ಟ್ಯವೆಂದರೆ ಅವರ ಕವನಗಳು ವಿಭಿನ್ನ ಶೈಲಿಯವು. ಅಂದಿನ ಕೆಲವು ಗಾಯಕರು ಅವರ ಕವನಗಳನ್ನು ವಿಭಿನ್ನ ಶೈಲಿಯಲ್ಲಿ ಹಾಡತೊಡಗಿದರು. ಆ ಶೈಲಿಗೆ ತನ್ನದೇ ವಿಶಿಷ್ಟ ಛಾಪು ಮೂಡಿಸಿದ ಕಲಾವಿದೆ ಫಿರೋಜ಼ ಮತ್ತು ಇತರ ಗಾಯಕರು ಅದನ್ನು 'ನಜ್ರುಲ್ ಶೈಲಿ'ಯೆಂದೇ ಜನಪ್ರಿಯಗೊಳಿಸಿದರು. ಅದಲ್ಲದೆ, ರವೀಂದ್ರ ಸಂಗೀತ್ ಮತ್ತಿತರ ಸಂಗೀತ ಪ್ರಕಾರಗಳಿಗೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ: ಗುರು ಕಮಲ್ ದಾಸ್‌ಗುಪ್ತ ಅವರನ್ನೇ ಮದುವೆಯಾದ ಫಿರೋಜ಼ ಈಗಿನ ನಮ್ಮ ಪಶ್ಚಿಮ ಬಂಗಾಳ ಮತ್ತು ಬಾಂಗ್ಲಾದೇಶ ಎರಡೂ ದೇಶಗಳ ಭಾಷೆ, ಸಂಸ್ಕೃತಿಗಳ ನೈಜ ಪ್ರತಿನಿಧಿಯೇ ಅಲ್ಲದೆ ಒಂದರ್ಥದಲ್ಲಿ ಸೇತುವೆಯಾಗಿದ್ದರು ಎಂದರೆ ಉತ್ಪ್ರೇಕ್ಷೆಯಾಗಲಾರದು. ಭಾರತ ಮತ್ತು ಬಾಂಗ್ಲಾದೇಶ ಈ ಎರಡೂ ದೇಶಗಳಲ್ಲಿ ಸಾಂಸ್ಕೃತಿಕವಾಗಿ ಅಂಥದ್ದೇನೂ ವ್ಯತ್ಯಾಸವಿಲ್ಲ ಎಂಬುದಕ್ಕೆ ಸಾಕ್ಷಿಪ್ರಜ್ಞೆಯಾಗಿ ಬದುಕಿ ಬಾಳಿದ, ಬಾಳುತ್ತಿರುವ ಕಲಾವಿದರಲ್ಲಿ ಸಹಸ್ರಾರು ಜನಸಾಮಾನ್ಯರಲ್ಲಿ ಫಿರೋಜ಼ ಸಹ ಒಬ್ಬರು ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ನಜ್ರುಲ್ ಸಂಗೀತ್ ಸಿಂಗರ್ ಪ್ರಶಸ್ತಿ, ನೇತಾಜಿ ಸುಭಾಷ್‌ಚಂದ್ರ ಬೋಸ್ ಪ್ರಶಸ್ತಿ, ಸತ್ಯಜಿತ್ ರಾಯ್ ಪ್ರಶಸ್ತಿ ಮತ್ತು ಗೋಲ್ಡನ್ ಡಿಸ್ಕ್ ಮುಂತಾದ ಪ್ರಶಸ್ತಿಗಳಿಗೆ ಭಾಜನರಾಗಿದ್ದ ಫಿರೋಜ಼ ಬೇಗಂ ಇಂದು ನಮ್ಮನ್ನಗಲಿದ್ದಾರೆ. ಇಂತಹ ಅಪರೂಪದ ಗಾಯಕಿಯ ಅಗಲಿಕೆಗೆ 'ಹೊಸತು' ಸಂತಾಪ ಸೂಚಿಸುತ್ತದೆ.

ಇನ್ನು ಈ ರಾತ್ರಿಯಲ್ಲಿ ಮನೆ ತಲುಪುವುದಾದರೂ ಹೇಗೆ ಎಂದು ನೆನೆದಾಗ ಮೈಯೆಲ್ಲ ಬೆವತು ಒದ್ದೆಯಾಗಿಬಿಟ್ಟಿತು. ದಿಢೀರನೆ ಎಚ್ಚರವಾಗಿ ಮುಖ ಒರೆಸಿಕೊಂಡು ಮನಸ್ಸನ್ನು ಸುಸ್ಥಿತಿಗೆ ತಂದು ಕೊಂಡಾಗಲೇ ತಿಳಿದದ್ದು ಅದು ಕನಸೆಂದು!

ಕಾರ್ಖಾನೆಗೆ ಹೋಗಿ ನಮ್ಮ ವಿಭಾಗವನ್ನು ತಲುಪಿದ ತಕ್ಷಣ ಮಾಡುತ್ತಿದ್ದ ಮೊದಲ ಕೆಲಸವೆಂದರೆ ಅಟೆಂಡೆನ್ಸ್ ರಿಜಿಸ್ಟರಿನಲ್ಲಿ ರುಜು ಹಾಕುವುದು. ಅಧಿಕಾರೇತರರು ಎಲೆಕ್ಟ್ರಾನಿಕ್ಸ್ ಮಷೀನ್‌ನಲ್ಲಿ ಪಂಚ್ ಮಾಡಿ ತಮ್ಮ ಹಾಜರಾತಿ ಹಾಕಿದರೆ ಅಧಿಕಾರಿಗಳು ರಿಜಿಸ್ಟರಿನಲ್ಲಿ ರುಜು ಹಾಕುವುದು ಪದ್ಧತಿ. ಅಂದು ರುಜು ಮಾಡಲು ನೋಡಿದರೆ ರಿಜಿಸ್ಟರೇ ಇಲ್ಲ. ಬಹುಶಃ ಬಾಸ್ ಪರಿಶೀಲಿಸಲು ತಮ್ಮ ಛೇಂಬರಿಗೆ ತರಿಸಿಕೊಂಡಿರಬಹುದೆಂದು, ಛೇಂಬರ್‌ನಲ್ಲಿ ಬಗ್ಗಿ ನೋಡಿದರೆ ಬಾಸ್ ಕೂಡ ಇಲ್ಲ. ಮೂಲೆಯಲ್ಲಿ ಕುಳಿತಿದ್ದ ಕ್ಲರ್ಕ್ ಬಾಬುವನ್ನು ಕೇಳಿದರೆ ಆತ ಮಾತೇ ಆಡಲಿಲ್ಲ. ಅಷ್ಟರಲ್ಲಿ ಛೇಂಬರ್‌ನಿಂದ ಬೆಲ್ ಬಾರಿಸಿದ್ದು ಕೇಳಿ ಬಾಗಿಲು ತಳ್ಳಿ ನೋಡಿದರೆ ಬಾಸ್ ಕುಳಿತಿದ್ದಾರೆ. "ಏನ್ರೀ ಇದು? ತಿಂಗಳು ಪೂರ್ತ ಮೂರೇ ದಿವಸ ಕೆಲಸಕ್ಕೆ ಬಂದಿರುವುದಾ, ಹೀಗಾದರೆ ಹೇಗೆ? ರಜಾ ಕೂಡ ಹಾಕಿಲ್ಲ" ಎಂದು ದಬಾಯಿಸು ತ್ತಿದ್ದಾರೆ. "ಪ್ರತಿದಿನ ರುಜು ಮಾಡಿದ್ದೇನೆ ಸರ್" ಎಂದು ಹೇಳಿದಾಗ, "ನೋಡಿ ಹೀಗೆ ಆ್ಯಬ್ಸೆಂಟ್ ಆದರೆ ಸಂಬಳ ಖೋತಾ" ಎಂದು ರಿಜಿಸ್ಟರನ್ನು ನನ್ನತ್ತ ಎಸೆದರು. ನೋಡಿದರೆ ನನ್ನ ಹೆಸರಿನ ಮುಂದೆ ಜಾಗ ಖಾಲಿ ಖಾಲಿ. ಈ ತಿಂಗಳ ಸಂಬಳವೇ ಬಾರದಿದ್ದರೆ ಹೇಗೆ, ಸಂಸಾರ ಸಾಗಿಸುವುದಾದರೂ ಹೇಗೆ? ಎನಿಸಿದಾಗ ಮೈಯೆಲ್ಲಾ ಬೆವರತೊಡಗಿ ಬಾಸ್‌ಗೆ ವಿವರಣೆ ಕೊಡಲು ಏನೇನೋ ಮಾತನಾಡ ತೊಡಗುತ್ತೇನೆ. ಅಸ್ಪಷ್ಟ ಮಾತುಗಳು. ಅಷ್ಟರಲ್ಲಿ ನನ್ನ ಹೆಂಡತಿ ಬಂದು 'ಯಾಕ್ರೀ ಏನೇನೋ ಮಾತಾಡ್ಕೋತಾ ಇದ್ದೀರಾ, ಎಚ್ಚರ ಮಾಡ್ಕೊಳ್ಳಿ' ಎಂದು ಎಬ್ಬಿಸಿದಾಗಲೇ ಅರ್ಥವಾದದ್ದು ಬಹು ಭೀಕರ ಕನಸು ಕಂಡೆನೆಂಬುದು!

ಮುನ್ನೂರು ಎಕರೆಯ ಪ್ರದೇಶದಲ್ಲಿ ಸ್ಥಾಪಿತ ವಾಗಿದ್ದ ಬಹು ದೊಡ್ಡ ಕಾರ್ಖಾನೆಗೆ ತಕ್ಕಂತಹ ಬಹು ದೊಡ್ಡ ಕ್ಯಾಂಟೀನ್. ಅದು ಒಂದಲ್ಲ ಮೂರು ಕಡೆಯಿದ್ದು ಹದಿನೈದು ಇಪ್ಪತ್ತು ಸಾವಿರ ಸಿಬ್ಬಂದಿಯಿದ್ದು ಒಂದೊಂದು ಪಾಳಿಗೂ ಐದಾರು ಸಾವಿರ ಮಂದಿಗೆ ಊಟದ ವ್ಯವಸ್ಥೆ. ಸೈರನ್ ಕೂಗಿತೆಂದು ಕೈತೊಳೆದು ಕ್ಯಾಂಟೀನ್‌ಗೆ ಹೋದರೆ ಯಾವ ಮಹಡಿಗೆ ಹೋದರೂ ಖಾಲಿ ಖಾಲಿ. ಸರಿ ಇನ್ನೂ ಎರಡು ಕ್ಯಾಂಟೀನ್‌ಗಳಿವೆಯಲ್ಲ ಎಂದು ಓಡಿದೆ. ಕ್ಯಾಂಟೀನ್ ಸಿಬ್ಬಂದಿ ದೊಡ್ಡ ದೊಡ್ಡ ಅಲ್ಯುಮಿನಿಯಂ ಪರಾತ ಗಳನ್ನು ತೊಳೆಯುತ್ತಿದ್ದಾರೆ. ಊಟ ಮುಗಿಸಿದವರು ಹೊರಹೋಗುತ್ತಿದ್ದಾರೆ. ಅರೆ, ಊಟದ ವ್ಯವಸ್ಥೆ ಮುಗಿದೇಹೋಯಿತೇ? ಹಾಳಾದ್ದು ನನ್ನ ಗಡಿಯಾರವೇ ಸ್ಲೋನಾ! ಎಂದು ಗಡಿಯಾರವನ್ನು ತಟ್ಟಿದರೆ ಅಲಾರಾಂ ಹೊಡೆದು ಕೊಂಡಿತು. ತಕ್ಷಣ ಎಚ್ಚರವಾಗಿ ನೋಡಿದರೆ ಗಂಟೆ ರಾತ್ರಿ ಎರಡೂವರೆ!

ನನ್ನ ವೃತ್ತಿ ಜೀವನದ ವಿಷಯಗಳಿಗೆ ಸಂಬಂಧಿಸಿ ದಂತಹ ಹಲವಾರು ಕನಸುಗಳು ಈಗಲೂ ಬಂದು ಕಾಡತೊಡಗಿವೆ. ವೃತ್ತಿಯಲ್ಲಿದ್ದಾಗ ನಿಸ್ಪೃಹ, ಶಿಸ್ತಿನ ಅಧಿಕಾರಿ ಎನಿಸಿದ್ದು, ನನ್ನ ಕಾರ್ಖಾನೆಯ ಬಗ್ಗೆ ಕೃತಜ್ಞತಾಭಾವ ಹೊಂದಿದ್ದು, ನಿವೃತ್ತಿಯ ನಂತರ ಕಾರ್ಖಾನೆಯ ಯೋಚನೆಯೇ ಮಾಡದಿರುವ ನನ್ನಂತಹವನಿಗೇ ಈ ರೀತಿ ಕಾಡತೊಡಗಿರುವಾಗ ಇನ್ನು ಹಗಲು-ರಾತ್ರಿ ಅರಿಯರ್ಸ್ ಹಣಕ್ಕಾಗಿ ಚಾತಕ ಪಕ್ಷಿಯಂತೆ ಕಾದಿರುವ ಮಂದಿಗೆ ಇನ್ನೆಂತಹ ಕನಸು ಬೀಳಬಹುದು ಎಂದು ಯೋಚಿಸಿ ನನ್ನ ವಿಭಾಗದಲ್ಲೇ ಸಹೋದ್ಯೋಗಿಗಳಾಗಿದ್ದ ನರಸಿಂಗಪ್ಪ ಮತ್ತು ನಾಗರಾಜ ಸಿಕ್ಕಾಗ ನನ್ನ ಕನಸಿನ ಅನುಭವವನ್ನು ಹೇಳಿಕೊಂಡೆ.

ನರಸಿಂಗಪ್ಪ ತಮ್ಮ ಅನುಭವವನ್ನು ಬಿಚ್ಚಿಟ್ಟರು:

"ಈಗಿನಂತೆ ಬ್ಯಾಂಕ್ ಸೌಲಭ್ಯಗಳ ಕೊರತೆಯಿದ್ದಾಗ, ಸಂಬಳದ ಹಣವನ್ನು ಒಂದನೆಯ ತಾರೀಕು ನಿರ್ದಿಷ್ಟ ಸ್ಥಳಗಳಲ್ಲಿ ಬಟವಾಡೆ ಮಾಡುತ್ತಿದ್ದರು. ನಾನೂ ಕ್ಯೂನಲ್ಲಿ ನಿಂತು ನನ್ನ ಗುರುತಿನ ಚೀಟಿ ತೋರಿಸಿದಾಗ ಸಂಬಳ ಹಂಚುವವ ಹಣದ ಕವರ್ ಹಾಗೂ ಸಂಬಳ ವಿವರದ ಚೀಟಿಕೊಟ್ಟ. ಎಣಿಸಿದ ಹಣವನ್ನು ಪುನಃ ಕವರ್‌ಗೆ ಹಾಕಿ ಮನೆ ತಲುಪಿ ಹೆಂಡತಿಯ ಕೈಗೆ ಕೊಟ್ಟೆ. ಕವರ್ ತೆರೆದವಳು, "ಏನ್ರೀ ಇದು ಖಾಲಿ ಕವರ್ ತಂದಿದ್ದೀರಾ, ಯಾರಿಗಾದರೂ ದಾನ ಮಾಡಿ ಬಂದ್ರ, ನಿಮ್ಮ ಬುದ್ಧಿ ಎಲ್ಹೋಗುತ್ತೆ!" ಎಂದು ದಬಾಯಿಸಿದಾಗ ಕವರ್ ತೆಗೆದುಕೊಂಡು ನೋಡಿದರೆ ಖಾಲಿ ಖಾಲಿ. ಮೈ ಬೆವರಿಹೋಗಿ ಜಗ್ಗನೆ ಎಚ್ಚರವಾದಾಗಲೇ ತಿಳಿದದ್ದು ಅದೊಂದು ಕನಸು ಎಂದು" ನರಸಿಂಗಪ್ಪನವರು ತಾವು ಆಗಾಗ್ಗೆ ಕಾಣುತ್ತಿದ್ದ ಇಂತಹ ಹಲವಾರು ಅಸಂಬದ್ಧ ಕನಸುಗಳನ್ನು ವಿವರಿಸಿದರು.

ಅಂದು ನಾಗರಾಜ ತನ್ನ ವಿಭಾಗದ ತಿಂಗಳ ಲೆಕ್ಕಪತ್ರಗಳನ್ನೆಲ್ಲ ಸರಿಪಡಿಸಿ ಮಾರನೆಯ ದಿನ ಬಾಸ್‌ಗೆ ತೋರಿಸಿ ಶಹಬಾಸ್‌ಗಿರಿ ಪಡೆಯಬೇಕೆಂದು ಮೇಜಿನ ಮೇಲಿಟ್ಟು ಹೋಗಿದ್ದಾನೆ. ಮಾರನೆಯ ದಿನ ಬಂದು ನೋಡಿದರೆ ಮೇಜಿನ ಮೇಲೆ ಯಾವ ಫೈಲೂ ಕಾಣಿಸುತ್ತಿಲ್ಲ. ಅಕ್ಕಪಕ್ಕದವರನ್ನು ಕೇಳಲು ಹೋದರೆ ಅವರವರದೇ ಕೆಲಸದಲ್ಲಿ ತೊಡಗಿಕೊಂಡಿದ್ದಾರೆ. ಕೆಲವರು ಅತ್ತಿಂದಿತ್ತ ಓಡಾಡುತ್ತ ದೊಡ್ಡ ಗಂಟಲಿನಲ್ಲಿ ಮಾತಾಡುತ್ತಿದ್ದವರು ನಾಗರಾಜನ ಮಾತನ್ನು ಯಾರೂ ಕೇಳಿಸಿಕೊಳ್ಳುತ್ತಲೇ ಇಲ್ಲ. ಹೋಗಲಿ, ಬಾಸ್ ಏನಾದರೂ ತರಿಸಿಕೊಂಡಿರಬಹುದಾ ಎಂದು ಹೋಗಿ ನೋಡಿದರೆ ಬಾಸ್ ಉರಿಗಣ್ಣು ಮಾಡಿಕೊಂಡು, ನಾಗರಾಜ ಬರುವುದನ್ನೇ ಕಾಯುತ್ತಿದ್ದವರಂತೆ ರೇಗಾಡ ತೊಡಗಿದ್ದಾರೆ. ನಾಗರಾಜ ಸ್ವಲ್ಪ ಮುಂಗೋಪಿ. ಇವನೂ ದಬಾಯಿಸತೊಡಗಿದ. ಆದರೆ ಮಾತುಗಳು ಗಂಟಲಿನಿಂದಾಚೆಗೇ ಬಾರದೆ ಗೊರಗೊರ ಎನ್ನುತ್ತಿದ್ದ ನಾಗರಾಜನನ್ನು ಅವನ ಹೆಂಡತಿ ಎಬ್ಬಿಸಿದಾಗಲೇ ತಿಳಿದದ್ದು - ಕಂಡದ್ದು ಬಹು ದೊಡ್ಡ ಕನಸೆಂದು!

ಹೀಗೆ ವೃತ್ತಿಯನ್ನು ಹಚ್ಚಿಕೊಂಡವರಿರಲಿ, ನಿರ್ಲಿಪ್ತರಾದವರಿರಲಿ, ಅವರವರ ವೃತ್ತಿ ಸಂಬಂಧದ ಕನಸುಗಳೂ ಉದ್ಯೋಗದಲ್ಲಿನ ಸಮಯಕ್ಕಿಂತ ನಿವೃತ್ತಿಯ ಸಮಯದಲ್ಲಿ ಹೆಚ್ಚು ಕಾಡುತ್ತವಲ್ಲ, ಏಕೆಂಬುದು ತಿಳಿಯದಾಗಿತ್ತು.

ಅಲ್ಲ ನರಸಿಂಗಪ್ಪ, ನನ್ನಂಥವರು ಕಾರ್ಖಾನೆಯ ಉದ್ಯೋಗಿಗಳು. ನಮ್ಮ ಕನಸು ಬಿಡಿ, ಆದರೆ ರೈಲ್ವೆ ಎಂಜಿನ್ ಡ್ರೈವರ್, ವಿಮಾನ ಚಾಲಕರು, ಶಸ್ತ್ರಚಿಕಿತ್ಸಾ ವೈದ್ಯರು, ವಕೀಲರು, ಸಿನಿಮಾ ನಟರು ಮುಂತಾದ ವೃತ್ತಿ ಪರಿಣತರು ಎಂತೆಂಥ ಕನಸು ಕಾಣಬಹುದು ಅಲ್ಲವಾ? ಎಂದಾಗ ಎಲ್ಲರೂ ಅವರವರ ಚಿತ್ತಕ್ಕೆ ತೋಚಿದಂತೆ ಊಹಿಸಿಕೊಂಡು ನಗತೊಡಗಿದರು.

**ವೈ. ಎನ್. ಗುಂಡೂರಾವ್**
ನಂ. ೧೨೩೧, ೧೩ನೇ ಕ್ರಾಸ್, ೨ನೇ ಹಂತ, ಗಿರಿನಗರ
ಬೆಂಗಳೂರು - ೫೬೦ ೦೮೫



# ಚಂದ್ರ ಒಡ್ಡುವ ಸವಾಲು

ಗ್ರಹಣ ಎಂಬುದು ಎಲ್ಲರ ಕುತೂಹಲ ಕೆರಳಿಸುವ ಖಗೋಳೀಯ ಘಟನೆ. ಸೂರ್ಯಗ್ರಹಣವನ್ನು ನೋಡಬಾರದು; ಚಂದ್ರಗ್ರಹಣ ನೋಡಲು ಏನೂ ಅಡ್ಡಿಯಿಲ್ಲ. ಆದರೆ ಹೆಚ್ಚಿನ ಸಂದರ್ಭಗಳಲ್ಲಿ ಚಂದ್ರಗ್ರಹಣ ಮಧ್ಯರಾತ್ರಿಯ ನಂತರ ನಡೆಯುವುದರಿಂದ ಅದರ ವೈಶಿಷ್ಟ್ಯಗಳನ್ನು ಗಮನಿಸಿರುವವರು ಕಡಿಮೆ. ಅಕ್ಟೋಬರ್ ೮ರಂದು ಚಂದ್ರಗ್ರಹಣ ಉಂಟಾಗುವುದು. ಅದು ನಿಮಗೊಂದು ಸವಾಲನ್ನೇ ಎಸೆಯಲಿದೆ. ಭೂಮಿಯ ದಟ್ಟ ನೆರಳಿನ ಭಾಗವನ್ನು ದಾಟಿ ಚಂದ್ರ ಹೊರಬರುವುದು ಸಂಜೆ ೬:೦೪ಕ್ಕೆ. ಅದಾದ ನಾಲ್ಕೇ ನಿಮಿಷಕ್ಕೆ ಬೆಂಗಳೂರಲ್ಲಿ ಚಂದ್ರೋದಯ. ಹಾಗಾಗಿ ಕಾಣುವ ಸಾಧ್ಯತೆಯೇ ಇಲ್ಲ. ಧಾರವಾಡ, ಬೆಳಗಾಂಗಳಂತಹ ಉತ್ತರ ಭಾಗದ ನಗರಗಳಲ್ಲಿ ಐದಾರು ನಿಮಿಷ ಮೊದಲೇ ಚಂದ್ರೋದಯ ಆಗುವುದರಿಂದ ಲೆಕ್ಕದ ಪ್ರಕಾರ ಉದಯದ ಚಂದ್ರ ಭೂಮಿಯ ನೆರಳಿನಲ್ಲಿಯೇ ಇರುತ್ತದೆ. ಹಾಗಾದರೆ ಇದನ್ನು ಬರಿಗಣ್ಣಿನಿಂದ ನೋಡಿ ನೆರಳನ್ನು ಯಾವಾಗ ದಾಟಿತು ಎಂದು ಅಂದಾಜು ಮಾಡಬಹುದೇ ? ಇನ್ನೂ ಒಂದು ಪ್ರಶ್ನೆ ಇದೆ. ಭೂಮಿಯ ನೆರಳಿನ ಪಾರ್ಶ್ವ ಛಾಯೆಯ ಭಾಗದಲ್ಲಿ ಅಂದರೆ ಅಷ್ಟೇನೂ ದಟ್ಟವಾಗಿಲ್ಲದ ನೆರಳಿನಲ್ಲಿ ಚಂದ್ರ ಏಳು ಗಂಟೆಯವರೆಗೂ ಇರುತ್ತದೆ. ಆಗ ಅದರ ಬೆಳಕು ಕಡಿಮೆ ಇರುತ್ತದೆ ಎಂಬುದನ್ನು ಬರಿಗಣ್ಣಿನಿಂದ ಗುರುತಿಸಬಲ್ಲಿರಾ ?... ಒಟ್ಟಿನಲ್ಲಿ ಚಂದ್ರಗ್ರಹಣ ಕಾಣುವುದಿಲ್ಲ ಎಂದಾಯಿತು.

ಈ ತಿಂಗಳಲ್ಲಿ ಸೂರ್ಯಗ್ರಹಣವೂ ಇದೆ; ಅದೂ ನಮಗೆ ಕಾಣುವುದಿಲ್ಲ. ಅದೇ ಹೊತ್ತಿಗೆ ಶುಕ್ರಗ್ರಹವೂ ಸೂರ್ಯನ ಪಕ್ಕದಲ್ಲೇ ಇರುವುದರಿಂದ ಚಂದ್ರ ಅದನ್ನೂ ಮರೆಮಾಡುತ್ತದೆ. ಇದು ಅಮೆರಿಕದವರಿಗೆ ಕಾಣುತ್ತದೆ; ಆದ್ದರಿಂದ ಇದು ಬಹಳ ದೊಡ್ಡ ಸುದ್ದಿಯಾಗಬಹುದು. ಇದನ್ನು ಉಪಗ್ರಹಗಳು ದಾಖಲಿಸಬಲ್ಲವು. ಸೋಹೋದ (ಸೂರ್ಯನ ವೀಕ್ಷಣೆಗಾಗಿ ಅಂತರಿಕ್ಷದಲ್ಲಿ ಸ್ಥಾಪಿತವಾಗಿರುವ ವೀಕ್ಷಣಾಲಯ) ಅಂತರ್ಜಾಲ ತಾಣದಲ್ಲಿ ನಾವು ನೋಡಬಹುದು.

ಇವಲ್ಲದೆ ಆಚ್ಛಾದನೆಗಳೆಂಬ ಸಣ್ಣ ಗ್ರಹಣಗಳೂ ಇವೆ. ಎಂಟರಂದು ಹುಣ್ಣಿಮೆಯ ಚಂದ್ರ ಯುರೇನಸ್ ಗ್ರಹವನ್ನು ಮರೆಮಾಡುತ್ತದೆ. ಹಾಗೆಯೇ ೨೩ರ ಬೆಳಗಿನ ಜಾವ ಚಂದ್ರ ಬುಧ ಗ್ರಹವನ್ನು ಮರೆಮಾಡುತ್ತದೆ. ೨೫ರ ಸಂಜೆ ಚಂದ್ರ ಶನಿಗ್ರಹವನ್ನು ಆಚ್ಛಾದಿಸುತ್ತದೆ. ಆದರೆ ನಮಗೆ ಈ ನೋಟಗಳು ಲಭ್ಯವಿಲ್ಲ.

ಸಂಜೆ ಕಾಣುವ ಮಂಗಳ ಗ್ರಹವನ್ನು ಪಕ್ಕದ ಕೆಂಪು ನಕ್ಷತ್ರ ಜ್ಯೇಷ್ಠಾದ ಸಹಾಯದಿಂದ ಗುರುತಿಸಿ, ದಿನೇ ದಿನೇ ಅವು ದೂರ ಸರಿಯುವುದನ್ನು ತಿಳಿಯಬಹುದು. ಶನಿಗ್ರಹ ದಿನೇ ದಿನೇ ದಿಗಂತದ ಅಂಚಿಗೆ ಸರಿಯುವುದು. ಶುಕ್ರಗ್ರಹ ಈ ತಿಂಗಳಲ್ಲಿ ಕಾಣುವ ಸಾಧ್ಯತೆ ಇಲ್ಲ. ಅದು ೨೫ರಂದು ಸೂರ್ಯನ ಆಚೆಬದಿಯಿಂದ ಹಾದು ಹೋಗುತ್ತದೆ. ಇದಕ್ಕೆ ಉಚ್ಚ ಯುತಿ ಎಂದು ಹೆಸರು. ಬುಧ ಗ್ರಹ ೧೬ರಂದು ಭೂಮಿಗೂ ಸೂರ್ಯಕ್ಕೂ ಮಧ್ಯೆ ಹಾದು ಹೋಗುವುದು. ಇದಕ್ಕೆ ನೀಚ ಯುತಿ ಎಂದು ಹೆಸರು.




ಡಾ|| ಬಿ. ಎಸ್. ಶೈಲಜಾ



*ಅಕ್ಟೋಬರ್ ೨೫ರ ಸಂಜೆ ಚಂದ್ರ – ಶನಿ ಜೋಡಿ*

ಅಕ್ಟೋಬರ್ ೨೦ರಂದು ಸೈಡಿಂಗ್ ಸ್ಪ್ರಿಂಗ್ ಎಂಬ ಧೂಮಕೇತುವೊಂದು ಮಂಗಳಕ್ಕೆ ೧೩೨,೦೦೦ ಕಿ. ಮೀ. ಸಮೀಪವಾಗಿ (!) ಹಾದುಹೋಗುವುದು. ಆ ಸಂಜೆ (ಮತ್ತು ಹಿಂದಿನ ಸಂಜೆ) ಮಂಗಳಗ್ರಹದತ್ತ ದೂರದರ್ಶಕ / ದುರ್ಬೀನು ತಿರುಗಿಸಿದರೆ ಪಕ್ಕದಲ್ಲಿ ಒಂದು ಚುಕ್ಕೆಯಂತೆ ಧೂಮಕೇತು ಕಾಣುವುದು. ಪುರಭೂ ಬಿಂದುವಿಗೆ ಹತ್ತಿರದಲ್ಲೇ ಇರುವುದರಿಂದ ಅದರ ಗರಿಷ್ಠ ಪ್ರಕಾಶವನ್ನಾಗಲೇ ಮುಟ್ಟಿರುತ್ತದೆ. ಆದರೂ ಅದು ಅಷ್ಟೇನೂ ಪ್ರಕಾಶಮಾನವಾಗಿಲ್ಲ. ಮಂಗಳದ ಸಾಮೀಪ್ಯದ ಕಾರಣ ಅದು ಸುದ್ದಿ ಮಾಡುತ್ತದೆ. ಇಲ್ಲದಿದ್ದರೆ ಪ್ರತಿ ವರ್ಷ ಬಂದುಹೋಗುವ (ಬರಿಗಣ್ಣಿಗೆ ಕಾಣದ) ಹತ್ತಿಪ್ಪತ್ತು ಧೂಮಕೇತುಗಳಲ್ಲಿ ಇದೂ ಒಂದಾಗುತ್ತಿತ್ತು. ೨೦೧೩ರ ಜನವರಿ ತಿಂಗಳಲ್ಲಿ ಇದನ್ನು ರಾಬರ್ಟ್ ಮೆಕ್‌ನಾಟ್ ಕಂಡುಹಿಡಿದರು. ಅವರು ಬಳಸಿದ ವೀಕ್ಷಣಾಲಯದ ಹೆಸರು ಕೊಡಲಾಗಿದೆ. ಇದು ದಕ್ಷಿಣ ಆಕಾಶದಲ್ಲಿ ಚಲಿಸುತ್ತಿದೆ. ಅಕ್ಟೋಬರ್ ಮೊದಲ ವಾರದಲ್ಲಿ ವೃಶ್ಚಿಕ ರಾಶಿಯ ದಕ್ಷಿಣ ತುದಿಯಲ್ಲಿ ಇರುತ್ತದೆ. ಕ್ರಮೇಣ ಚೇಳಿನ ಆಕಾರದ ಗುಂಟ ಸಾಗಿ ಮಂಗಳವನ್ನು ಸಮೀಪಿಸುತ್ತದೆ. ಇದು ಮಂಗಳದ ಮೇಲೆ ಅಪ್ಪಳಿಸುವ ಸಾಧ್ಯತೆ ಕಡಿಮೆ ಎಂದು ಲೆಕ್ಕ ಹಾಕಲಾಗಿದೆ. ಮಂಗಳದ ಮೇಲಿರುವ ಮೂರು ರೋವರ್‌ಗಳು ಇದರ ಚಿತ್ರ ತೆಗೆಯಲಿವೆ. ಹಾಗೆಯೇ ಮಂಗಳವನ್ನು ಸುತ್ತುತ್ತಿರುವ ಎರಡು ನೌಕೆಗಳು ಮತ್ತು ಭಾರತದ ಮಾರ್ಸ್ ಆರ್ಬೈಟರ್ ಕೂಡ ಚಿತ್ರ ತೆಗೆಯುವುವು. ಆದರೆ ಅತಿ ಸಮೀಪಕ್ಕೆ ಬಂದಾಗ ಧೂಮಕೇತುವಿನ ಬಾಲದ ಧೂಳು ನೌಕೆಗಳಿಗೆ ಅಪ್ಪಳಿಸಿ ಘಾಸಿಗೊಳಿಸಬಹುದಾದ ಕಾರಣ ತಾತ್ಕಾಲಿಕವಾಗಿ ನೌಕೆಗಳನ್ನು ಇನ್ನೊಂದು ಬದಿಗೆ ತಳ್ಳಿಬಿಡುವ ಯೋಜನೆಗಳೂ ಇವೆ.

ಈ ತಿಂಗಳಲ್ಲಿ ಎರಡು ಉಲ್ಕಾವೃಷ್ಟಿಗಳಿವೆ. ಮುಂಜಾವಿನಲ್ಲಿ ಆಕಾಶ ಶುಭ್ರವಾಗಿದ್ದಾಗಲೆಲ್ಲಾ ಉಲ್ಕೆಗಳನ್ನು ಕಾಣಬಹುದು. ೨೦–೨೧ರ ಮುಂಜಾವಿನಲ್ಲಿ ಮಹಾವ್ಯಾಧ (ಒರೈಯನ್) ಪುಂಜದಿಂದ ಹೊರಟಂತೆ ಕಾಣುವ ಓರಿಯನಿಡ್ಸ್ ಉಲ್ಕಾವೃಷ್ಟಿಯಲ್ಲಿ ಗಂಟೆಗೆ ಸುಮಾರು ೨೦–೩೦ ಉಲ್ಕೆಗಳು ಬೀಳುವುವು. ಅಮಾವಾಸ್ಯೆಗೆ ಸಮೀಪದ ದಿನಗಳಾದದ್ದರಿಂದ ಕ್ಷೀಣ ಉಲ್ಕೆಗಳು ಕಾಣುವುವು. ಇದಲ್ಲದೆ ೮–೯ರಂದು ಡ್ರಾಕೋನಿಡ್ಸ್ ವೃಷ್ಟಿಯೂ ಇದೆ. ಹುಣ್ಣಿಮೆಗೆ ಸಮೀಪವಾಗಿರುವುದರಿಂದ ಚಂದ್ರನ ಬೆಳಕು ಕ್ಷೀಣ ಉಲ್ಕೆಗಳನ್ನು ನೋಡಲು ಅಡ್ಡಿ ಮಾಡಬಹುದು.

**ಖಗೋಳ ದಿನಚರಿ**

ಅಕ್ಟೋಬರ್ ೧ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡು ರಾತ್ರಿಗೆ)
೬ ಚಂದ್ರ ಪುರಭೂ ಬಿಂದುವಿನಲ್ಲಿ
೮ ಹುಣ್ಣಿಮೆ ಸಂಜೆ ೧೬:೨೧ಕ್ಕೆ (ಗ್ರಹಣ ೧೪:೪೫ರಿಂದ ೧೮:೦೫ರವರೆಗೆ; ಬೆಂಗಳೂರಿನಿಂದ ಕಾಣುವುದಿಲ್ಲ.)
೮–೯ ಮುಂಜಾವು ಡ್ರಾಕೋನಿಡ್ಸ್ ಉಲ್ಕಾವೃಷ್ಟಿ
೧೫ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡು ರಾತ್ರಿಗೆ)
೧೬ ಬುಧಗ್ರಹದ ನೀಚ ಯುತಿ
೧೮ ಚಂದ್ರ ಅಪಭೂ ಬಿಂದುವಿನಲ್ಲಿ
೨೩ ಶುಕ್ರ – ಚಂದ್ರ ಜೋಡಿ (ಕಾಣುವುದಿಲ್ಲ)
೨೪ ಅಮಾವಾಸ್ಯೆ ೦೩:೩೭ಕ್ಕೆ (ಪಾರ್ಶ್ವಗ್ರಹಣ ೦೧:೦೭ರಿಂದ ೦೫:೨೨ರವರೆಗೆ; ಬೆಂಗಳೂರಿನಿಂದ ಕಾಣುವುದಿಲ್ಲ)
೨೫ ಬುಧಗ್ರಹದ ಹಿನ್ನಡೆ ಮುಕ್ತಾಯ; ಶುಕ್ರಗ್ರಹದ ಉಚ್ಚ ಯುತಿ; ಚಂದ್ರ – ಶನಿ ಜೋಡಿ (ಆಚ್ಛಾದನೆ ಕಾಣುವುದಿಲ್ಲ)
೨೮ ಮಂಗಳ – ಚಂದ್ರ ನಡುವೆ ೭ ಡಿಗ್ರಿ ಅಂತರ
೩೧ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡು ರಾತ್ರಿಗೆ)
ನವೆಂಬರ್ ೧ ಬುಧಗ್ರಹದ ಗರಿಷ್ಠ ಕೋನೋನ್ನತಿ

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

## ಸಾದರ ಸ್ವೀಕಾರ

**ವಿಶ್ವದ ಪ್ರಸಿದ್ಧ ಮಹಿಳಾ ಗಣಿತಜ್ಞರು** *ಡಾ॥ ಪದ್ಮಾವತಮ್ಮ*
**ಪುಟ : ೧೦೦ ಬೆಲೆ ರೂ. ೭೦**

**ಕೋಮು ಸಾಮರಸ್ಯ ಶತಮಾನಗಳ ಕಾವ್ಯಸಾಕ್ಷಿ**
*ಡಾ॥ ಕಾ. ವೆಂ. ಶ್ರೀನಿವಾಸ ಮೂರ್ತಿ, ಡಾ॥ ಆರ್. ರೇಣುಕಾ, ಡಾ॥ ಎಸ್. ಭಾಗ್ಯಲಕ್ಷ್ಮಿ*
**ಪುಟ : ೨೨೦ ಬೆಲೆ ರೂ. ೧೫೦**

**ಮನುಷ್ಯಜಾತಿ ತಾನೊಂದೆ ವಲಂ** (ಕುಲವನ್ನು ಕುರಿತ ಕವಿ ಚಿಂತನ ಪರಂಪರೆ)
*ಡಾ॥ ಕಾ. ವೆಂ. ಶ್ರೀನಿವಾಸ ಮೂರ್ತಿ, ಡಾ॥ ಆರ್. ರೇಣುಕಾ, ಡಾ॥ ಎಸ್. ಭಾಗ್ಯಲಕ್ಷ್ಮಿ*
**ಪುಟ : ೧೪೪ ಬೆಲೆ ರೂ. ೧೦೦**
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ರಂಗಮ್ಮನ ಹೊಸ್ತಿಲು ದಾಟಿ... ರಂಗಂ ಪೇಟೆ ಕನ್ನಡ ಸಂಘದ ಕಾಲುದಾರಿ ಪಯಣದಲ್ಲಿ...**
*ಮಹಾಂತಗೌಡ ಪಾಟೀಲ*
**ಪುಟ : xviii + ೧೩೪ = ೧೫೨ ಬೆಲೆ ರೂ. ೧೫೦**

**ಆಚಾರವಿಲ್ಲದ ನಾಲಿಗೆ** (ಲಲಿತ ಪ್ರಬಂಧಗಳು)
*ವ್ಹಿ. ಕೆ. ಪಾಟೀಲ*
**ಪುಟ : xxiv + ೮೪ = ೧೦೮ ಬೆಲೆ ರೂ. ೭೫**

**ಕೆಳಗಲಮನಿ ಮಾಬವ್ವ ಮತ್ತು ಇತರೆ ಕವಿತೆಗಳು**
*ಎ. ಎಸ್. ಮಕಾನದಾರ*
**ಪುಟ : xxii + ೯೦ = ೧೧೨ ಬೆಲೆ ರೂ. ೭೫**
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ನಿರಂತರ ಪ್ರಕಾಶನ,** ಗಾಂಧಿನಗರ, ೫ನೇ ಅಡ್ಡರಸ್ತೆ, ಲೊಯಲಾ ಕಾನ್ವೆಂಟ್ ಹಿಂಭಾಗ, ಬೆಟಗೇರಿ, ಗದಗ – ೫೮೨ ೧೦೨

**ಹಿಂದುಳಿದ ವರ್ಗಗಳಿಗೆ ಡಾ॥ ಬಿ. ಆರ್. ಅಂಬೇಡ್ಕರರ ಕೊಡುಗೆ** *ಎಚ್. ಎಸ್. ಬೇನಾಳ*
**ಪುಟ : xx + ೫೨ = ೭೨ ಬೆಲೆ ರೂ. ೬೦**

**ಪುಸ್ತಕಗಳು ಜಗತ್ತನ್ನಾಳುತ್ತವೆ** *ಎಚ್. ಎಸ್. ಬೇನಾಳ*
**ಪುಟ : xiv + ೭೦ ಬೆಲೆ ರೂ. ೫೦**

**ಡಾ॥ ಬಿ. ಆರ್. ಅಂಬೇಡ್ಕರ್ ಹೋರಾಟ ಯಾರ್‍ಯಾರಿಗಾಗಿ** *ಎಚ್. ಎಸ್. ಬೇನಾಳ*
**ಪುಟ : xx + ೧೦೪ ಬೆಲೆ ರೂ. ೧೦೦**

**ಬಾಬಾ ಸಾಹೇಬ ಡಾ॥ ಬಿ. ಆರ್. ಅಂಬೇಡ್ಕರ್ ಹಾಗೂ ದಲಿತ ಚಳುವಳಿ ಮತ್ತು ಭೂ ಹೋರಾಟ**
*ಎಚ್. ಎಸ್. ಬೇನಾಳ*
**ಪುಟ : xx + ೬೬ ಬೆಲೆ ರೂ. ೭೦**
ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ಸಹನಾ ಪ್ರಕಾಶನ,** ಪ್ಲಾಟ್ ನಂ. ೪೦೮, ಸಿ.ಐ.ಬಿ. ಕಾಲೋನಿ, ಕೇಂದ್ರ ಬಸ್ ನಿಲ್ದಾಣದ ಹಿಂದುಗಡೆ, ಎಂ.ಎಸ್.ಕೆ. ಮಿಲ್ ರಸ್ತೆ, ಗುಲಬರ್ಗಾ–೫೮೫೧೦೩

**ಬಾಡೂಟದ ಜೊತೆಗೆ ಗಾಂಧಿಜಯಂತಿ ಮತ್ತು ಇತರ ಲೇಖನಗಳು** (ಅಂಕಣ ಬರಹಗಳು) *ಬಿ. ಎಂ. ಬಶೀರ್*
**ಪುಟ : ೧೬೦ ಬೆಲೆ ರೂ. ೧೨೦**

**ಅಂಡಮಾನ್ ಕಂಡ ಹಾಗೆ...** (ಪ್ರವಾಸದನುಭವ)
*ಡಾ॥ ಎಚ್. ಎಸ್. ಅನುಪಮಾ*
**ಪುಟ : ೧೦೪ ಬೆಲೆ ರೂ. ೮೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ಕನ್ನಡಕ್ಕೆ ರುಬಾಯಿಗಳು** *ಡಾ॥ ಕೆ. ಬಿ. ಬ್ಯಾಳಿ*
**ಪುಟ : ೭೨ ಬೆಲೆ ರೂ. ೪೫**
**ತಾಯಿ ಪ್ರಕಾಶನ,** ಕುಕನೂರ – ೫೮೩ ೨೩೨

**ಜಂಬೂ ಜೋಂಕಿಣಿ** (ವಡ್ಡಗೆರೆ ನಾಗರಾಜಯ್ಯನವರ ‘ಆಸಾದಿ’ ಖಂಡಕಾವ್ಯದ ಪರಾಮರ್ಶೆ)
*ಉದಯಕುಮಾರ್ ಹಬ್ಬು*
**ಪುಟ : ೧೦೯ + xiv ಬೆಲೆ ರೂ. ೮೦**
**ಶ್ರೀ ಅನ್ನಪೂರ್ಣ ಪಬ್ಲಿಷರ್ಸ್ ಅಂಡ್ ಡಿಸ್ಟ್ರಿಬ್ಯೂಟರ್ಸ್,** ನಂ. ೧೩೩, ಮೊದಲನೇ ಮಹಡಿ, ಭಾರತೀಪುರ, ಸೋಂಪುರ ಹೋಬಳಿ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ – ೫೬೨ ೧೧೧

**ಹನಿಗಳ ನರ್ತನ** *ವೆಂಕಟೇಶ ಕೆ. ಜನಾದ್ರಿ*
**ಪುಟ : ೯೬ ಬೆಲೆ ರೂ. ೬೦**
**ಶ್ರೀ ಸಿದ್ಧಲಿಂಗೇಶ್ವರ ಬುಕ್ ಡಿಪೋ ಮತ್ತು ಪ್ರಕಾಶನ,** ಮುಖ್ಯಬೀದಿ, ಗುಲಬರ್ಗಾ – ೫೮೫ ೧೦೧

**ಪರಿಸರ ಮಾನವ, ಇತರ ಕವಿತೆಗಳು** *ಡಾ॥ ಕೆ. ಬಿ. ಬ್ಯಾಳಿ*
**ಪುಟ : xxviii + ೪೬ ಬೆಲೆ ರೂ. ೭೦**
**ದಕ್ಷಿಣ ಭಾರತ ಹಿಂದೀ ಪ್ರಚಾರ ಸಭಾ ಕರ್ನಾಟಕ ಶಾಖೆ,** ಧಾರವಾಡ – ೫೮೦ ೦೦೧

**ಮೌನಕ್ರಾಂತಿ** – ಸಮಕಾಲೀನ ಪ್ರತಿಕ್ರಿಯೆಗಳು
*ಹಂ. ಗು. ರಾಜೇಶ್*
**ಪುಟ : iv + ೬೮ = ೭೨ ಬೆಲೆ ರೂ. ೬೦**
**ಚೈತ್ರ ಪ್ರಕಾಶನ,** ನಂ. ೩, ತಿಮ್ಮಯ್ಯ ಛೇಂಬರ್ಸ್ (ತ್ರಿಭುವನ್ ಚಿತ್ರಮಂದಿರದ ಹಿಂಭಾಗ), ೧ನೇ ಅಡ್ಡರಸ್ತೆ, ಗಾಂಧಿನಗರ, ಬೆಂಗಳೂರು – ೫೬೦೦೦೯

**ಬಹಿಷ್ಕೃತರ ಬೆಳಕಿನಲ್ಲಿ** – ಪರಂಪರೆ, ವರ್ತಮಾನ ಮತ್ತು ಸಾಂಸ್ಕೃತಿಕ ರಾಜಕಾರಣ.
*ಡಾ॥ ರಾಜಶೇಖರ ಮಠಪತಿ (ರಾಗಂ)*
*ಸಂ. ಡಾ॥ ವ್ಹಿ. ಬಿ. ಮುತ್ತಿನಮಠ*
**ಪುಟ : xvi + ೧೪೪ = ೧೬೦ ಬೆಲೆ ರೂ. ೧೧೦**
**ಕಣ್ವ ಪ್ರಕಾಶನ,** ‘ಕಾಲ ಕನಸು’, ನಂ. ೮೯೪, ೧ನೇ ಮೇನ್, ನಿಸರ್ಗ ಬಡಾವಣೆ, ಚಂದ್ರ ಲೇಔಟ್, ಬೆಂಗಳೂರು – ೫೬೦ ೦೭೨

**ಕ್ಷಯರೋಗ** – ಕಾರಣ ಪರಿಹಾರ
*ಜಿ. ಎಸ್. ಆರ್ಯಮಿತ್ರ*
**ಪುಟ : ೧೬೮ ಬೆಲೆ ರೂ. ೭೫**
**ದಿವ್ಯಚಂದ್ರ ಪ್ರಕಾಶನ,** ನಂ. ೪೫, ಪಾಪಯ್ಯ ಗಾರ್ಡನ್, ೧ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಕರ್ನಾಟಕ ಹೌಸಿಂಗ್ ಬೋರ್ಡ್ ಕಾಲೋನಿ, ೨ನೇ ಹಂತ, ಬಸವೇಶ್ವರ ನಗರ, ಬೆಂಗಳೂರು – ೫೬೦ ೦೭೯



# ಚೀಣಾ ನೆನಪು

ವೈ. ಸೀ. ಸುಬ್ರಹ್ಮಣ್ಯ

ಚೀಣಾಕ್ಕೆ ಹೋದ ಪ್ರವಾಸಿಯೊಬ್ಬ ತಾನು ಹೋಗಿದ್ದನೆನ್ನುವುದು ಇತರರಿಗೂ ತಿಳಿಯಲಿ ಎಂದು "ಪ್ರಬಂಧ"ವೊಂದನ್ನು ಬರೆಯಬೇಕೆ ? ಈಚೆಗಂತೂ ಪ್ರವಾಸ ಹೋಗುವುದು ಪ್ರತಿ ವರ್ಷದ ಒಂದು ಕಾರ್ಯಕ್ರಮವೇ ಆಗಿರುವಾಗ ಪ್ರವಾಸಿಗರ ಬರಹಕ್ಕೇನೂ ಕೊರತೆಯಿಲ್ಲ. ಚೀಣಾಕ್ಕೆ ಹೋಗುವ ಭಾರತೀಯ ಪ್ರವಾಸಿಗಳು ವರ್ಷ-ವರ್ಷಕ್ಕೂ ಹೆಚ್ಚುತ್ತಿದ್ದಾರೆ ಇದು ಸಹಜವೇ. ಚೀಣಾ ಅನೇಕ ದೃಷ್ಟಿಗಳಿಂದ ಒಂದು ಆಕರ್ಷಕ ಬಿಂದು ಮತ್ತು ಪ್ರತಿ ವ್ಯಕ್ತಿಗೂ ಒಂದು ವೈಯಕ್ತಿಕ ಮಾರ್ಗ ಇರುವುದು ಅತಿಶಯವೇನಲ್ಲವಲ್ಲ.

ಚೀಣಾ ಮತ್ತು ಭಾರತಕ್ಕೆ ಇರುವ ಸಂಬಂಧ ಬಹಳ ವಿಶೇಷ ರೂಪದ್ದು. ಭೌತಿಕವಾಗಿರುವ ಸಂಬಂಧದ ಬಗ್ಗೆ ಯಾರೂ ಏನನ್ನೂ ಮಾಡುವ ಹಾಗಿಲ್ಲ, ಅದು ಪ್ರಕೃತಿದತ್ತವಾದದ್ದು. ಸಾಂಸ್ಕೃತಿಕ ಸಂಬಂಧದ ದೀರ್ಘಾವಧಿ ಮತ್ತು ತೀವ್ರತೆ-ಗಾಢತೆ ಸರ್ವವೇದ್ಯವಾದದ್ದು. ಇದರ ಜೊತೆಗೆ, ಎರಡೂ ಪಾಶ್ಚಾತ್ಯ ಸುಲಿಗೆ-ಸಾಮ್ರಾಜ್ಯಶಾಹಿಯಿಂದ ನರಳಿದ ಬಹು ಪುರಾತನ ದೇಶಗಳು. ಹೋರಾಡಿ, ಸ್ವಾತಂತ್ರ್ಯ ಪಡೆದದ್ದು ಕೇವಲ ೫-೬ ದಶಕಗಳ ಹಿಂದೆ. ಅಲ್ಲಿಂದೀಚೆಗೆ ತಮ್ಮ ತಮ್ಮ ದೇಶಗಳ ಅಭಿವೃದ್ಧಿಗೆ, ಜನರ ಏಳಿಗೆಗೆ ದುಡಿಯುವ ಮಾರ್ಗಗಳನ್ನು ಅನುಸರಿಸಿ, ಈ ವೇಳೆಗೆ ಒಂದು ಘಟ್ಟವನ್ನು ತಲುಪಿವೆಯೆಂದು ಹೇಳಬಹುದು. ಅನುಸರಿಸಿದ, ಅನುಸರಿಸುತ್ತಿರುವ, ಮಾರ್ಗಗಳು ಬೇರೆ ಬೇರೆಯಾದದ್ದು. ಇದು ಎಲ್ಲರಿಗೂ ತಿಳಿದಿರುವುದೇ.

ಚೀಣಾ ಮತ್ತು ಭಾರತ ಸ್ವತಂತ್ರ ರಾಷ್ಟ್ರಗಳಾಗಿ, ತಮ್ಮ ಮೇಲ್ಮೆಗಾಗಿ ಮುಂದುವರಿಯುತ್ತ ಬಂದ ಕಾಲದಲ್ಲೇ ಪ್ರಸ್ತುತ ಬರಹಗಾರ ತಾನೂ ಜೀವನಪಥ ಸಾಗಿಸಿದ್ದು ಮತ್ತು ಎರಡೂ ದೇಶಗಳ ವಿದ್ಯಮಾನಗಳಲ್ಲಿ ತೀವ್ರಾಸಕ್ತಿ ಬೆಳೆಸಿಕೊಂಡದ್ದು. ಆ ಸಮಯದಲ್ಲಿ ಉಭಯ ದೇಶಗಳ ನಾಯಕರು, ಜನಗಳು, ಚಟುವಟಿಕೆಗಳು, ಭೌತಿಕ-ಸಾಂಸ್ಕೃತಿಕ ಬೆಳವಣಿಗೆಗಳು ಮನೆಮಾತಾಗಿತ್ತು. ಇವೆಲ್ಲದರಿಂದಾಗಿ ಬರಹಗಾರರಿಗೆ ಚೀಣಾದ ಬಗ್ಗೆ ಕುತೂಹಲ, ಮೆಚ್ಚಿಗೆ ಆಸಕ್ತಿಗಳಲ್ಲದೆ ಒಂದು ರೀತಿಯ ಭಾವನಾತ್ಮಕ ಸಂಬಂಧವೂ ಬೆಳೆದು ಬಂತು. ಚೀಣಾವನ್ನು ನೋಡಬೇಕು ಎನ್ನುವ ನಿಶ್ಚಯ ಅನೇಕ ದಿನಗಳಿಂದಿದ್ದರೂ ಅನೇಕ ಕಾರಣಗಳಿಂದಾಗಿ ಆಗಿರಲಿಲ್ಲ; ಮುಖ್ಯವಾಗಿ ಒಬ್ಬನೇ ಹೋಗಲು ಹಿಂಜರಿದಿದ್ದರಿಂದ. ಕೊನೆಗೂ ಹೋದ ಅಕ್ಟೋಬರ್‌ನಲ್ಲಿ ನಮ್ಮ ಮನೆಯವರೂ ಜೊತೆ ಆಗಿದ್ದರಿಂದ ನಾವು ಐದು ಮಂದಿ ಅಕ್ಟೋಬರ್ ೨೦೧೩ರಲ್ಲಿ ಚೀಣಾಗೆ ಹೋಗಿ ಬಂದಾಯಿತು. ಅಲ್ಲಿ ಭಾಷೆ ಮತ್ತು ಊಟ-ತಿಂಡಿಗಳ ಬಗ್ಗೆ ಒಂದಿಷ್ಟು ತೊಂದರೆಗಳಾಗಬಹುದಾದರೂ, ಸೀಮಿತ ಗುಂಪಿನಲ್ಲಿ ಇದ್ದಿದ್ದರಿಂದ ಮತ್ತು ಬಹಳ ಹಿತವಾದ ಮಾರ್ಗದರ್ಶಿ ಸಿಕ್ಕಿದುದರಿಂದ, ಆ ತೊಡಕುಗಳು ಅಡ್ಡಬರದೆ ಸರಾಗವಾಗಿ ಪ್ರವಾಸ ನಡೆಯಿತೆನ್ನಬಹುದು.

ನಾವು ಈ ಏಳೇ ದಿನಗಳಲ್ಲಿ ನೋಡಲಾದದ್ದು ಬೀಜಿಂಗ್, ಯಿಚಾಂಗ್ (ಮೂರು ಕಿರಿದಾದ ಕಣಿವೆ ಅಣೆಕಟ್ಟು) ಮತ್ತು ಶಾಂಘೈ ಮಾತ್ರ. ಯಿಚಾಂಗ್ ಬಗ್ಗೆ ಶುರುವಿನಲ್ಲೆ ಒಂದು ಮಾತು : ಇದು ಮಧ್ಯವರ್ತಿ ಚೀಣಾದಲ್ಲಿ, ಪಶ್ಚಿಮದೆಡೆಗೆ, ಯಾಂಗ್ಟ್ಸಿ ಮಹಾನದಿಯ ದಂಡೆಯಲ್ಲಿರುವ ಒಂದು ಸಣ್ಣದೆನ್ನಬಹುದಾದ ಊರು; ಸುಮಾರು ೨೦ ಲಕ್ಷ ಜನಸಂಖ್ಯೆ. ಮೂರು ಕಿರಿದಾದ ಕಣಿವೆಗಳು ಅಣೆಕಟ್ಟಿನಿಂದ ಸುಮಾರು ೨೦ ಕಿ.ಮೀ. ಕೆಳಗಿವೆ. ನಮ್ಮ ಗಂಗೆ ನಮಗೆ ಹೇಗೋ ಹಾಗೆ ಯಾಂಗ್ಟ್ಸಿ ಮಹಾನದಿಯು ಚೀಣಾಕ್ಕೆ - ಮೇಲಿನ ಮಹಾ ಅಣೆಕಟ್ಟೆಗೆ ಹೋಗಲು ಅನುಕೂಲವಾದ ಊರು. ಅದಕ್ಕಾಗಿ ಯಿಚಾಂಗ್.

**ತಿಯನ್ ಆನ್‌ಮೆನ್ ಚೌಕ**

ಬೀಜಿಂಗ್ ಎಂದಾಕ್ಷಣ ಯಾರಿಗಾದರೂ ಮನಸ್ಸಿಗೆ ಬರುವುದು ಮೊದಲು ಎರಡು ಪ್ರೇಕ್ಷಣೀಯವಾದ ಮತ್ತು ಪ್ರಸಿದ್ಧವಾದ ಸ್ಥಳಗಳು - ಒಂದೊಂದೂ ಅದರದರ ಚಾರಿತ್ರಿಕ ಮತ್ತು ಪ್ರೇಕ್ಷಣೀಯ ಹೆಚ್ಚುಗಾರಿಕೆಗಾಗಿ - ಚೀಣಾದ ಮಹಾನ್ ಗೋಡೆ ಮತ್ತು 'ತಿಯನ್ ಆನ್‌ಮೆನ್ ಚೌಕ'. ೧೦೯ ಎಕರೆ ವಿಸ್ತಾರದ ತಿಯನ್ ಆನ್‌ಮೆನ್ ಚೌಕ ಬೀಜಿಂಗ್ ಮಧ್ಯಭಾಗದಲ್ಲಿರುವ ಸೊಗಸಾದ ತೆರೆದ ಆಕರ್ಷಣೀಯವಾದ ಪ್ರದೇಶ. (ಉತ್ತರ-ದಕ್ಷಿಣ ೮೮೦ ಮೀಟರ್, ಪೂರ್ವ-ಪಶ್ಚಿಮ ೫೦೦ ಮೀಟರ್ ಅಳತೆ) ಚಾರಿತ್ರಿಕವಾಗಿ, ಇದರ ವಿನ್ಯಾಸ ಮತ್ತು ನಿರ್ಮಾಣವಾದದ್ದು ೧೬೫೧ರಲ್ಲಿ, ಆಗಿನ ಚಕ್ರವರ್ತಿಗಳ ಕಾಲದಲ್ಲಿ. ಈಗಿನ ಚೌಕ ಇತ್ತೀಚೆಗೆ ಸಂಪೂರ್ಣವಾಗಿ ಪುನರ್ನಿರ್ಮಿತವಾಗಿದ್ದು, ೧೬೫೧ರ ಚೌಕದ ನಾಲ್ಕರಷ್ಟು ವಿಸ್ತಾರವಾಗಿದೆ. ಇದರ ಮಧ್ಯದಲ್ಲೇ ಇರುವುದು ಮಾವೋ ಭವ್ಯ ಸಮಾಧಿ. ಆ ಮಹಾಪುರುಷನ ಹಿರಿಮೆಯನ್ನು ಎಣಿಸಿದರೆ ಈ ಸಮಾಧಿ ಗಂಭೀರವಾದ ಅತ್ಯಂತ ಸರಳಭವನ : ಯಾವ ಅಸಹ್ಯ ಆಡಂಬರವೂ ಇಲ್ಲ. ಇದು ಆಧುನಿಕ ಚೀಣಾದ ಅಂತರಾಳದ ಮನೋಗಮನದ ಕುರುಹಿರಬಹುದೇನೋ ! ಈ ಸಮಾಧಿ ಭವನಕ್ಕೂ ತಿಯನ್ ಆನ್‌ಮೆನ್ ದ್ವಾರಕ್ಕೂ ಮಧ್ಯೆ ಇರುವ ಇನ್ನೊಂದು ಕಟ್ಟಡ "ಜನತೆಯ ವೀರರ ಸ್ಮಾರಕ." ಬೇರೆ ಯಾವ ಕಟ್ಟಡಗಳೂ ನಿರ್ಮಾಣಗಳೂ ಇಲ್ಲದೆ, ಧ್ವಜಸ್ತಂಭವನ್ನು ಬಿಟ್ಟರೆ, ಚೌಕವು ಸಂಪೂರ್ಣ ತೆರೆದ ಜಾಗ. ಆರು ಲಕ್ಷ ಜನ ಒಟ್ಟುಗೂಡಬಹುದು. ಸುತ್ತಲೂ ನಾಲ್ಕು ಕಡೆ ಸೊಗಸಾದ ರಸ್ತೆಗಳು, ಪಕ್ಕದಲ್ಲಿ ಕಣ್ಣುತುಂಬ ನೋಡಬೇಕೆನಿಸುವ ಬಣ್ಣ-ಬಣ್ಣದ ಸುಂದರ ವಿನ್ಯಾಸದ ಹೂಗಿಡಗಳು, ಹುಲ್ಲುಹಾಸಿದ ಉದ್ಯಾನ, ಇದರ ಪಕ್ಕದ ರಸ್ತೆಯಾಚೆಗೆ ಒಂದು ಕಡೆ ಪೂರ್ವದಲ್ಲಿ ರಾಷ್ಟ್ರೀಯ ವಸ್ತು - ಸಂಗ್ರಹಾಲಯ, ಇನ್ನೊಂದೆಡೆ ಪಶ್ಚಿಮದಲ್ಲಿ ಜನತೆಯ ಭವ್ಯ ಭವನ (ಪಾರ್ಲಿಮೆಂಟ್ ಭವನ). ಈ

ಚೌಕವಷ್ಟಕ್ಕೂ ಅತ್ಯಂತ ಶ್ರೇಷ್ಠ ಗುಣಮಟ್ಟದ ನೆಲಗಟ್ಟು. ಕೊಳೆ, ಕಸದ ಸುಳಿವೇ ಇಲ್ಲ. ಇಲ್ಲಿ ಓಡಾಡುವುದೇ ಒಂದು ಸುಖಾನುಭವ. ಮನೋಲ್ಲಾಸ ಉಂಟುಮಾಡುವ ಸುಂದರ ವಾತಾವರಣ; ಅದಕ್ಕೇ ಇರಬೇಕು, ಇಲ್ಲಿ ಸೇರುವ ಜನಸಂದಣಿ. ಈ ಜಾಗದ ವಾತಾವರಣಕ್ಕೆ ಅದು ಒಂದು ಅವಿಭಾಜ್ಯ ಭಾಗ. ಈ ಜನಸಮೂಹದಲ್ಲಿ ಅತ್ಯಧಿಕವಾಗಿ ಚೀಣೀ ದೇಶೀಯರು; ದೇಶದ ಇತರ ಭಾಗಗಳಿಂದ ರಾಜಧಾನಿಯ ನೋಟಗಳನ್ನು ಸವಿಯಲು ಬಂದವರು, ಸದಾ ಲವಲವಿಕೆಯಿಂದಿರುವ ಜನ, ಸಂತುಷ್ಟರೆಂಬ ಭಾವನೆ ಬರುತ್ತದೆ. ಯಾರೂ ಕೊಳಕು, ಚಿಂದಿ ಬಟ್ಟೆ ಉಟ್ಟವರಲ್ಲ, ಬಟ್ಟೆ-ಬರೆ, ಶೃಂಗಾರಗಳಲ್ಲಿ ಚಾಲ್ತಿಯಲ್ಲಿರುವ ಆಧುನಿಕತೆ ಇಲ್ಲ ಎಂದು ಹೇಳಲಾಗದಿದ್ದರೂ, ಒಟ್ಟಿನಲ್ಲಿ ಘನತೆ ಎದ್ದು ಕಾಣುತ್ತದೆ. ಅಜ್ಜ-ಅಜ್ಜಿ, ಮಗ-ಮಗಳು-ಸೊಸೆ-ಅಳಿಯ, ಮೊಮ್ಮಗು ಇವರುಗಳ ಗುಂಪುಗಳು. ಮಕ್ಕಳ ಮೇಲೆ ಅವರು ಸುರಿಸುವ ಹೆಮ್ಮೆ, ಮಮತೆ ನಿಜಕ್ಕೂ ನೋಡಬೇಕಾದದ್ದು. ಆ ಮಕ್ಕಳನ್ನು ಮಾತನಾಡಿಸೋಣ ಅನ್ನಿಸುತ್ತೆ ನಮಗೇನೆ. ಸಂದರ್ಭ ಸರಿ ಎನಿಸಿದರೆ ನಮ್ಮ ಜೊತೆ ಬೆರೆಯಲು ಅವರೂ ಸಿದ್ಧ. ಮಗುವಿನೊಡನೆ ಫೋಟೋ ತೆಗೆಸಿಕೊಳ್ಳಲು ಮುಂದಾಗಬಯಸುವವರು ಅದೆಷ್ಟೋ ಜನ! ನಮಗೂ ಅಂತಹ ಅವಕಾಶಗಳು ದೊರೆತಿದ್ದವು. ಕಿರಿಯ ವಯಸ್ಸಿನವರ ಗುಂಪುಗಳೂ ಅವರವರ ವಯಸ್ಸಿಗೆ ತಕ್ಕ ವೇಷ-ಭೂಷಣ, ಸಂಭ್ರಮದ ಪ್ರವೃತ್ತಿ. ಅಷ್ಟು ಜನರಿದ್ದರೂ ಎಲ್ಲೂ ನೂಕುನುಗ್ಗಲಾಗಲಿ, ಗಲಾಟೆಯಾಗಲಿ ಇಲ್ಲವೇ ಇಲ್ಲ. ಮಾವೋ ಸಮಾಧಿಯಲ್ಲಿ ಗೌರವ ತೋರುವ ಜನ ಶಿಸ್ತಿನ ಸಾಲಿನಲ್ಲಿ ಘಂಟೆಗಟ್ಟಳೆ ನಿಂತಿರುತ್ತಾರೆ. ಎಲ್ಲವನ್ನೂ ನಗುಮೊಗದಿಂದ ಸಹನೆಯಿಂದ ನಡೆಸಿಕೊಳ್ಳುತ್ತಾರೆ. ಅವರಲ್ಲಿ ನಮ್ಮಂತಹವರಿಗೆ ಗೌರವ ಮೂಡುವುದು ಆಶ್ಚರ್ಯವೇನಿಲ್ಲ.

ತಿಯನ್ ಆನ್‌ಮೆನ್ ದ್ವಾರದ – (ಇದು ಚೌಕದ ಉತ್ತರಕ್ಕೆ, ಇನ್ನೊಂದು ಖ್ಯಾತ ಪ್ರಾಚೀನ ನಿರ್ಮಾಣದ ಒಂದು ಮಹಾದ್ವಾರ) – ಮೇಲೆ ಮಾವೋ ಭಾವಚಿತ್ರ ಇದೆ. ಅದರ ಎರಡು ಭಾಗಗಳಲ್ಲಿ ಈ ಎರಡು ಘೋಷಣೆಗಳಿವೆ :

"ಚೀಣಾದ ಜನತಾ ಗಣರಾಜ್ಯ ದೀರ್ಘಾಯುವಾಗಿರಲಿ"

"ಜಗತ್ತಿನ ಜನತೆಯ ಘನ ಐಕ್ಯತೆ ದೀರ್ಘಾಯುವಾಗಿರಲಿ"

ಒಟ್ಟಿನಲ್ಲಿ ತಿಯನ್ ಆನ್‌ಮೆನ್ ಚೌಕ ಆಧುನಿಕ ಚೀಣಾ ರಾಜ್ಯಕ್ಕೆ ಒಂದು ಸಾಂಕೇತಿಕ ಕೇಂದ್ರವಾಗಿದೆ.

**ಪುರಾತನ ಅರಮನೆ (ನಿಷೇಧಿಸಲ್ಪಟ್ಟ ನಗರ)**

ಹೆಚ್ಚು ಕಡಿಮೆ ಸುಮಾರು ೧೫೦೦ರಿಂದ ೧೯೧೧ರವರೆಗೂ ಆಳಿದ ಚಕ್ರವರ್ತಿಗಳ ಅರಮನೆ ಇದು. ತಿಯನ್ ಆನ್‌ಮೆನ್ ಚೌಕದ ಉತ್ತರಕ್ಕಿದೆ. ಆಗಿನ ಕಾಲದಲ್ಲಿ ಸಾಮಾನ್ಯ ಜನಕ್ಕೆ ಪ್ರವೇಶವಿಲ್ಲದ, ಚಕ್ರವರ್ತಿಗಳ ಆಡಂಬರದ ತೋರುವಿಕೆಗೆ ಇರಬೇಕಾದ ಮಹಾನಿರ್ಮಾಣ (ಇದು ಚೀಣಾದ ಚಕ್ರವರ್ತಿಗಳಿಗೆ ಸೀಮಿತವಾದದ್ದೇನಲ್ಲವಲ್ಲ; ಪ್ರಪಂಚದ ಎಲ್ಲ ಕಾಲದ, ಎಲ್ಲಾ ಚಕ್ರವರ್ತಿಗಳ ಹಣೆಬರಹವೂ ಇದೇ ತಾನೆ!)

ತಿಯನ್ ಆನ್‌ಮೆನ್ ಮಹಾದ್ವಾರ ("ಸ್ವರ್ಗೀಯ ಶಾಂತಿಯ ದ್ವಾರ")ದಿಂದ ಪ್ರವೇಶ ಒಳಗಿನ ನಗರಕ್ಕೆ; ಅದರೊಳಗೆ "ಸಾಮ್ರಾಜ್ಯದ ನಗರ"; ಅದಕ್ಕೂ ಒಳಗೆ ಇರುವುದು "ನಿಷೇಧಿಸಲ್ಪಟ್ಟ ನಗರ." ಊಹಿಸಬೇಕಾದದ್ದೇನಿಲ್ಲ: ಒಂದರಿಂದ ಇನ್ನೊಂದರೊಳಕ್ಕೆ ಹೋಗಬೇಕಾದರೆ ಭದ್ರಗೊಳಿಸಿದ ದ್ವಾರಗಳ ಮೂಲಕವೇ. ತಿಯನ್ ಆನ್‌ಮೆನ್ ಮಹಾದ್ವಾರ ಅವುಗಳಲ್ಲೊಂದು. ಇಲ್ಲಿಂದ ಈ ಚೌಕದ ಸ್ವಲ್ಪ ದಕ್ಷಿಣಕ್ಕೆ ಇದ್ದದ್ದು 'ಹೊರವಲಯದ ನಗರ'. ಇವೆಲ್ಲವೂ ಸೇರಿ ಇದ್ದದ್ದು ಹಿಂದಿನ ಕಾಲದ ಬೀಜಿಂಗ್.

"ನಿಷೇಧಿಸಲ್ಪಟ್ಟ ನಗರ"ವು ಉತ್ತರ-ದಕ್ಷಿಣ ೯೬೧ ಮೀಟರ್, ಪೂರ್ವ-ಪಶ್ಚಿಮ ೭೫೩ ಮೀಟರ್‌ನಷ್ಟು (ಸುಮಾರು ೧೮೦ ಎಕರೆ) ವಿಸ್ತಾರವಾಗಿದ್ದು, ಇದರಲ್ಲಿ ಅನೇಕ ಕಟ್ಟಡಗಳಿವೆ. ಮೊದಲು ಈ ನಗರವನ್ನು ಕಟ್ಟಲು ೧೪ ವರ್ಷಗಳು ಬೇಕಾಯಿತಂತೆ; ಅಷ್ಟೇ ಅಲ್ಲ, ಎಂದಿನಂತೆ ದಶಲಕ್ಷ ಕಾರ್ಮಿಕರು ಶ್ರಮಿಸ ಬೇಕಾಯಿತಂತೆ. ಆ ಪುಣ್ಯಾತ್ಮರು ಸುರಿಸಿದ ಬೆವರು ಆ ಜಾಗವನ್ನೆಲ್ಲ ಫಲವತ್ತು ಮಾಡಿರಬೇಕು! ಕಟ್ಟಡಗಳ ನಿರ್ಮಾಣಕ್ಕೆ ಸುತ್ತಮುತ್ತಣದ ಅರಣ್ಯಗಳ ಮರದ ಇಡೀ ದಿಮ್ಮಿಗಳೇ ಉಪಯೋಗವಾಗಿವೆಯಂತೆ; ಹತ್ತಿರದ ಅಮೃತಶಿಲೆ ಗಣಿಗಳ ಅಗಾಧ ಭಾಗಗಳನ್ನೇ ನಿಯುಕ್ತಿಸಿದ್ದಾರೆ. ಸುತ್ತಮುತ್ತಲಿನಿಂದ ೩೦ ಮೀಟರ್ ಎತ್ತರ ದಲ್ಲಿರುವ "ಅತ್ಯುಚ್ಚ ಸಾಮರಸ್ಯದ ಹಜಾರ" ಇನ್ನೂ ಉಳಿದಿರುವ ಅಚ್ಚಮರದ ಅತ್ಯಂತ ದೊಡ್ಡದಾದ ಕಟ್ಟಡ. ಈ ಅರಮನೆ ಸಮೂಹ ಸುಮಾರು ೪೯೦ ವರ್ಷ (೧೪೨೦ರಿಂದ ೧೯೧೧ರವರೆಗೆ) ಮಿಂಗ್ ಮತ್ತು ಕಿಂಗ್ ಸಂತತಿಯ ೨೪ ಚಕ್ರವರ್ತಿಗಳ ಆಗರವಾಗಿತ್ತು. ೧೯೧೨ರಲ್ಲಿ ಚೀಣಾ ಗಣರಾಜ್ಯವಾಗಿ ಚಕ್ರಾಧಿಪತಿಗಳ ಕಾಲ ಕೊನೆಗೊಂಡಿದ್ದು ಗೊತ್ತಿರುವ ವಿಷಯ ತಾನೆ. ಅರಮನೆಯು ಕಲೆ, ಸಂಸ್ಕೃತಿಗಳ ಬಿಂದುವಾಗಿತ್ತು. ಇಲ್ಲಿನ ಶಿಲ್ಪಕಲೆ ಪೂರ್ವ ಏಷ್ಯಾಕ್ಕೆಲ್ಲ ಮಾದರಿಯಾಯಿತೆಂದು ಹೇಳುವುದು ವಾಡಿಕೆ. ಈ ಸಮೂಹವನ್ನು ಯಾವ ಕುಂದೂ ಇಲ್ಲದೆ ಅತಿ ಜಾಗರೂಕತೆಯಿಂದ ಯೋಜಿಸಲಾಯಿತೆಂದು ಹೇಳುವುದಲ್ಲದೆ, ಈ ಯೋಜನಾ ಕಾರ್ಯ ತತ್ವಶಾಸ್ತ್ರದ ಮತ್ತು ಧರ್ಮಶಾಸ್ತ್ರದ ಪ್ರತಿಬಿಂಬವೆಂದೂ ಹೇಳ ಬಯಸುತ್ತಾರೆ. ಆದರೆ, ನಿಜಕ್ಕೂ ಈ ಅಗಾಧ ನಿರ್ಮಾಣಗಳು ಸಾರ್ವಭೌಮತ್ವದ ಅಧಿಕಾರದ ಪ್ರಭಾವಶಾಲಿತ್ವದ ಪ್ರತೀಕವಾಗಿರಬೇಕೆಂಬುದಲ್ಲದೆ ಬೇರೇನು ?

೧೯೪೯ರಲ್ಲಿ ಪ್ರಜಾತ್ಮಕ ಸಮಾಜವಾದಿ ಗಣರಾಜ್ಯ ಸ್ಥಾಪನೆಯ ನಂತರ ಈ ಅರಮನೆ ಸಂಕೀರ್ಣ ಒಂದು ವಸ್ತುಪ್ರದರ್ಶನಾಲಯವಾಗಿದೆ. ಈ ಅಗಾಧ, ಬಹುಕಾಲೀನ ಪ್ರದೇಶವನ್ನೂ, ಅಲ್ಲಿನ ವಿವಿಧ ನಿರ್ಮಾಣಗಳನ್ನೂ, ಈ ಸಮಾಜವಾದಿ ಪ್ರಭುತ್ವ ಅತಿ ಶ್ರದ್ಧೆಯಿಂದ ಮತ್ತು ಮುತುವರ್ಜಿಯಿಂದ ಪಾಲಿಸುತ್ತಿದೆ. ಈಗ ಇದೊಂದು ಪ್ರೇಕ್ಷಣೀಯ ಸ್ಥಳ ಮಾತ್ರವಲ್ಲ, ಸಾಮಾನ್ಯ ಜನರ ವಿಹಾರ ಕೇಂದ್ರಗಳಲ್ಲೊಂದಾಗಿದೆ. ನಿಷೇಧಿಸಲ್ಪಟ್ಟಿದ್ದ ಜಾಗ ಈಗ ಜನಸಾಮಾನ್ಯರಿಗೆ ಸೇರಿದೆ. ಅಗಾಧ ಸಂಖ್ಯೆಯಲ್ಲಿ ಜನ ಸೇರುತ್ತಾರೆ ಪ್ರತಿದಿನ. ಆದರೆ ಅವರೆಲ್ಲರೂ ಈ ಭವ್ಯ ಸ್ಮಾರಕಕ್ಕೆ ಏನೂ ಕುಂದು ಬರದಂತೆ ಎಚ್ಚರ ವಹಿಸುವುದನ್ನು ವೀಕ್ಷಿಸುವುದು ಅದೆಷ್ಟು ಚೆನ್ನ! ಅಷ್ಟೇಕೆ, ಚೀಣಾದಲ್ಲಿ ಎಲ್ಲಿ ಹೋದರೂ ಆಗುವ ಅನುಭವ ಇದೇ.

**ದೇವಲೋಕದ ಗುಡಿ**

ಇಹಲೋಕದ ಚೀಣಾ ಚಕ್ರವರ್ತಿಗಳು ಎಲ್ಲ ಚಕ್ರವರ್ತಿಗಳಂತೆ ತಾವು ಸಹ ದೇವಲೋಕದಲ್ಲಿರುವ ಭಗವಂತನ ಮಕ್ಕಳೆಂದು ಭಾವಿಸಿ, ತಾವು ಭಗವಂತನ ಪರವಾಗಿ ಭೂಲೋಕವನ್ನು ಪಾಲನೆಮಾಡಬೇಕೆಂದು ನಂಬುತ್ತ, ಅದರೊಂದಿಗೇ ಭಗವಂತನಿಗೂ ಸಮರ್ಪಣೆ ಮಾಡಬೇಕೆಂಬ ಭಾವನೆ ಇಟ್ಟುಕೊಂಡಿದ್ದರು ಎನ್ನುತ್ತಾರೆ (ಸಮರ್ಪಣೆಯಲ್ಲಿನ ಒಂದು ದೊಡ್ಡಭಾಗ ಪಶುಬಲಿ). ಹಾಗಿದ್ದಲ್ಲಿ, ದೇವಲೋಕದ ಗುಡಿ ಭೂಲೋಕದಲ್ಲಿ ನಿರ್ಮಾಣವಾಗಲೇಬೇಕು! ನಿಷೇಧಿಸಲ್ಪಟ್ಟ ನಗರವನ್ನು ನಿರ್ಮಿಸಿದ ಚಕ್ರವರ್ತಿಗಳು ಹೆಚ್ಚು-ಕಮ್ಮಿ ಅದೇ ಸಮಯದಲ್ಲೇ ಕೇವಲ ೪-೫ ಕಿ.ಮೀ. ದೂರದಲ್ಲಿ ಈ ಗುಡಿಯನ್ನೂ ನಿರ್ಮಿಸಿದರು. ಭಗವಂತನಿಗಿಂತ ಚಕ್ರಾಧಿಪತಿ ಕೆಳಗಿನವನಾದ್ದರಿಂದ ತಾನಿರುವ ಪಟ್ಟಣಕ್ಕಿಂತ ಭಗವಂತನ ಗೃಹ ದೊಡ್ಡದಾಗಿರಲೇ ಬೇಕು. ಆದ್ದರಿಂದಲೇ "ನಿಷೇಧಿಸಲ್ಪಟ್ಟ ನಗರ" ೧೮೦ ಎಕರೆ ವಿಸ್ತಾರವಾಗಿದ್ದರೆ, ಈ "ದೇವಲೋಕದ ಗುಡಿ" ೬೭೪ ಎಕರೆ ವಿಸ್ತೀರ್ಣದ್ದು.

ಈ ಇಡೀ ನಿರ್ಮಾಣ ಗಿಡಮರಗಳಿಂದ ಕಂಗೊಳಿಸುವ ಉದ್ಯಾನ, ಕಲೆ ಆಕರ್ಷಣೆ ಗಳನ್ನೊಳಗೊಂಡಿದೆ. "ದೇವಲೋಕದ ಗುಡಿ", "ಸಾಮ್ರಾಟನ ದೇವಲೋಕದ ಗುಮ್ಮಟ" ಮತ್ತು "ಗುಂಡನೆಯ ಬಲಿದಾನದ ದಿಬ್ಬ" ಇವು ಇಲ್ಲಿಯ ಮುಖ್ಯ ನಿರ್ಮಾಣಗಳು. "ದೇವಲೋಕದ ಗುಡಿ" ಬಹಳ ಸೊಗಸಾದ, ಎಲ್ಲಕ್ಕಿಂತ ಎತ್ತರವಾದ, ವಿಶಾಲ ಅಂಗಳದಲ್ಲಿರುವ ಭವ್ಯ ನಿರ್ಮಾಣ. ಇಲ್ಲಿ ಚಕ್ರವರ್ತಿ, ತಾನು ಭಗವಂತನಿಗೂ ಮನುಜನಿಗೂ ಮಧ್ಯವರ್ತಿಯಾದ್ದರಿಂದ, ಜನರಿಗೆ ಯಥೇಚ್ಛ ಫಸಲು ಲಭ್ಯವಾಗಲೆಂದು ಪ್ರಾರ್ಥನೆ ಮಾಡುತ್ತಿದ್ದನಂತೆ; ಆ ಸಮಯದಲ್ಲಿ ಸಾಮಾನ್ಯರಾರೂ ಇರುವಂತಿಲ್ಲ. ಈ ಪ್ರಾರ್ಥನೆಗೆ ಮುಂಚೆ ಅದಕ್ಕಾಗೇ ಕಟ್ಟಿದ 'ಉಪವಾಸದ ಅರಮನೆ'ಯಲ್ಲಿ ಉಪವಾಸ ಮಾಡುತ್ತಿದ್ದನಂತೆ. ಇದೆಲ್ಲದರಲ್ಲೂ ದೊಡ್ಡ ಆಚರಣೆ ಪಶುಬಲಿ. ದುಂಡನೆಯ ಬಲಿದಾನದ ದಿಬ್ಬದಲ್ಲಿ ಮಂಗಲಾಯನದಲ್ಲಿ ನಡೆಯುತ್ತಿತ್ತಂತೆ. ಬೇಕಾದಷ್ಟು ಪ್ರಾಣಿಗಳನ್ನಿಡಲು ಬೇರೆ ಕಟ್ಟಡಗಳು, ದೇವಾಲಯದ ಆವರಣದಲ್ಲೇ. ಬಲಿದಾನದ ದೇವಾಲಯಗಳಿರುವುದರ ಜೊತೆಗೆ ಇದೊಂದು ಬಹಳ ಅಚ್ಚುಕಟ್ಟಾದ ಉದ್ಯಾನವನ. ಸುಮಾರು ೬೦೦೦ ತರಹದ ವಿವಿಧ ಗಿಡಗಳಿವೆ. ದೇವಾಲಯ ಗಳಿಗಾಗಿಯೇ ಅಲ್ಲದೆ ಈ ಭಾರಿ ಮೈದಾನದಲ್ಲಿ ದಿನವಹಿ ಬರುವ ಜನ ಬೇಕಾದಷ್ಟು ವ್ಯಾಯಾಮ, ಸೈಕಲ್ ಓಡಿಸಾಟ, ಬ್ಯಾಂಡ್‌ಗಳು, ಸರಳ ಮನೋಲ್ಲಾಸಕ್ಕಾಗಿ ಬರುತ್ತಾರೆ. ವಯಸ್ಸಾದವರು ಕಸೂತಿಯಲ್ಲಿ ತೊಡಗಿದ್ದರೆ, ಇನ್ನಿತರರು ಚೆಸ್ ಆಡುತ್ತಿರುತ್ತಾರೆ. ಗುಂಪುಗಟ್ಟಲೆ ದೊಡ್ಡವರು, ಮಧ್ಯವಯಸ್ಕರು, ಅಜ್ಜಿ-ಅಜ್ಜ-ಮಗಳು-ಮಗ-ಅಳಿಯ-ಸೊಸೆಯರ ಗುಂಪು ತಮ್ಮ ಮಕ್ಕಳೊಂದಿಗೆ. ನಿಮ್ಮೊಡನೆ ಬೆರೆಯಲೂ ಸಿದ್ಧ. ಅಜ್ಜಿ, ಮೊಮ್ಮಗುವನ್ನು ಎತ್ತಿಕೊಂಡು ನಗುನಗುತ್ತಿದ್ದ ಆ ಖುಷಿಯ ಭಾವಚಿತ್ರ ನಮಗೆ ದಕ್ಕಿತು.

**ಬೀಜಿಂಗ್ ರಾಷ್ಟ್ರೀಯ ಸ್ಟೇಡಿಯಂ : ಹಕ್ಕಿಗೂಡು (ಬರ್ಡ್ಸ್ ನೆಸ್ಟ್)**

ಮುಂದುವರಿದ, ಮುಂದುವರಿಯುತ್ತಿರುವ ದೇಶಗಳು ಆಧುನಿಕತೆಯ ಚಿಹ್ನೆಯ ಪ್ರದರ್ಶನಕ್ಕಾಗಿ ಕೋರುವ ಘಟನೆಗಳಲ್ಲಿ ಒಂದು ನಾಲ್ಕು ವರ್ಷಕ್ಕೊಮ್ಮೆ ಬರುವ ಒಲಿಂಪಿಕ್ ಕ್ರೀಡೆಗಳಿಗೆ ಆತಿಥ್ಯ ನೀಡುವ ಅವಕಾಶ ದಕ್ಕಿಸಿಕೊಳ್ಳುವುದಾಗಿದೆ. ಬಹಳವಾಗಿ ಈ ಅವಕಾಶ ಇದುವರೆಗೂ ಮುಂದುವರಿದ ಪಾಶ್ಚಾತ್ಯ ದೇಶಗಳ ಪಾಲಾಗಿದ್ದರೂ, ಜಪಾನ್, ಕೊರಿಯಾದಲ್ಲೂ ನಡೆದದ್ದು ಸರಿಯಷ್ಟೆ. ಆದರೂ ಬಹಳ ಪ್ರಖ್ಯಾತಿ ಪಡೆದ ೨೦೦೮ರ ಒಲಿಂಪಿಕ್ಸ್‌ಅನ್ನು ಸಂಘಟಿಸಲು ಅವಕಾಶ ಗಳಿಸಿದ್ದು ಚೀನಾ. ೨೦೦೧ರಲ್ಲಿ ಖಾತರಿಯಾದ ಅವಕಾಶವನ್ನು ಸದುಪಯೋಗ ಮಾಡಿಕೊಂಡು ಬೇಕಾದ ಅಧೋರಚನೆ, ಸವಲತ್ತುಗಳನ್ನು ಸಮಯದಲ್ಲಿ ಮುಗಿಸಿ ಅದುವರೆಗೂ ಎಲ್ಲೂ ನಡೆಯದಿದ್ದಂತಹ ಅದ್ಭುತ ಒಲಿಂಪಿಕ್ಸ್‌ಅನ್ನು ಚೀನಾ ೨೦೦೮ರ ಆಗಸ್ಟ್‌ನಲ್ಲಿ ನಡೆಸಿ ಅದರ ಕ್ರಿಯಾಶೀಲ ದಕ್ಷತೆಯ ಇನ್ನೊಂದು ಮಹಾ ಘಟನೆಯನ್ನು ಜಗತ್ತಿನ ಮುಂದಿಟ್ಟಿತು. ಇಂತಹ ಕಾರ್ಯ ಯಶಸ್ವಿಯಾಗಲು ಬೇಕಾದದ್ದು ಮುಖ್ಯವಾಗಿ ಅತ್ಯಾಧುನಿಕವಾದ ಸ್ಟೇಡಿಯಂ ಮತ್ತು ಸವಲತ್ತುಗಳು. ೨೦೦೩ರಲ್ಲಿ ಒಲಿಂಪಿಕ್ಸ್ ಗ್ರೀಸ್‌ನಲ್ಲಿ ಕೆಲಸ ಆರಂಭಿಸಿ, ೨೦೦೮ರ ಮಾರ್ಚ್‌ನಲ್ಲೇ ಮುಗಿಸಿ, ಜೂನ್ ೨೮, ೨೦೦೮ರಲ್ಲಿ ಸ್ಟೇಡಿಯಂನ ಉದ್ಘಾಟನೆ ನಡೆಯಿತು. ಇದರ ಖರ್ಚು ೪೨೮ ಮಿಲಿಯನ್ ಡಾಲರ್‌ಗಳು. ಒಂದು ಹಂತದಲ್ಲಿ ೧೭,೦೦೦ ಕಾರ್ಮಿಕರು ಕೆಲಸ ಮಾಡುತ್ತಿದ್ದರು. ೧೧೦,೦೦೦ ಟನ್ ಉಕ್ಕಿನ ಉಪಯೋಗವಾಗಿದೆ. ಎಲ್ಲ ಆ ದೇಶದಲ್ಲೇ ತಯಾರಾದದ್ದು. ಕಬ್ಬಿಣದ ಅದುರು ಮಾತ್ರ ನಮ್ಮ ದೇಶದ್ದು, ಕಡಿಮೆ ಬೆಲೆಗೆ ಮಾರಿದ್ದು. ಅದರ ಲಾಭ ಪೂರ್ತಿ ಬಳ್ಳಾರಿ ರೆಡ್ಡಿ ಸೋದರರಿಗೆ! ೭೮೧೧ ಚದರ ಮೀಟರ್ ಹುಲ್ಲಿನ ಮೈದಾನವನ್ನು ಅಳವಡಿಸಲಾಗಿದೆ. ಇಲ್ಲಿ ೮೦,೦೦೦ ಜನರಿಗೆ ಪಕ್ಕಾ ಸೀಟುಗಳಿವೆ.

ಈ ಸ್ಟೇಡಿಯಂಗೆ 'ಹಕ್ಕಿಗೂಡು' ಅನ್ನುವ ಹೆಸರು ಬಂದಿದ್ದು ಹೇಗೆ? ಸ್ಟೇಡಿಯಂಗೆ ತೆಗೆದು, ಮತ್ತೆ ಹಾಕಬಲ್ಲ ಮೇಲ್ಛಾವಣಿ ಇರಬೇಕೆಂದಿತ್ತು. ಇದರ ಆಧಾರ ರಚನೆಯನ್ನು ಮುಚ್ಚುವ ಸಲುವಾಗಿ ಅದರ ಹೊರಗೆ ಉಕ್ಕಿನ ತೊಲೆಗಳನ್ನು ಅಳವಡಿಸಲಾಯಿತು. ಆದರೆ ಇದರ ಮಾದರಿ ನಿರ್ಣಯವಾದದ್ದು ಚೀನಾದ ಪಿಂಗಾಣಿ ಕಲೆಯ ಪರಿಶೀಲನೆಯಿಂದ! ಹಾಗಾಗಿ ಸ್ಟೇಡಿಯಂನ ಹೊರ ಮುಖ ಒಂದು ದೈತ್ಯಾಕಾರದ ಬೋಗುಣಿಯ ಆಕಾರ ಪಡೆಯಿತು. ಬರ್ಡ್ಸ್ ನೆಸ್ಟ್‌ನಂತಹ ಹೊರ ಭಾಗವು ಸ್ಟೇಡಿಯಂನ ಅತ್ಯಧಿಕವಾಗಿ ಗುರುತಿಸುವ ಮುಖವಾಯಿತು. ನಾವು ಅಲ್ಲಿಗೆ ಹೋದಾಗ ಸಂಜೆಯಾಗಿತ್ತು. ಸ್ಟೇಡಿಯಂ ಒಳಗೆ ದಟ್ಟ ಹಳದಿ ದೀಪ ಹರಡಿತ್ತು. ಈ ಹಿನ್ನೆಲೆಯಲ್ಲಿ ಬರ್ಡ್ಸ್ ನೆಸ್ಟ್‌ನ ಆ ದೃಶ್ಯ ದೂರದಿಂದಲೇ ಕಂಡಾಗ ಆದ ಆಹ್ಲಾದ ಅನುಭವಕ್ಕೆ ಸೇರಿದ್ದು.

**ಚೀನಾದ ಭಾರಿ ಗೋಡೆ**

ಪರಂಪರಾನುಗತವಾಗಿ ಬಹಳ ದಿನಗಳಿಂದಲೂ ಉಳಿದುಬಂದಿರುವ, ಗೋಡೆ ಇದು. ಒಂದಲ್ಲ ಒಂದು ರೀತಿಯಲ್ಲಿ, ಪುರಾತನ ನಿರ್ಮಾಣಗಳಲ್ಲಿ "ಚೀನಾದ ಭಾರಿ ಗೋಡೆ" ಬಹಳ ಪ್ರಮುಖವಾದದ್ದು. ಅದರ ಚರಿತ್ರೆಯನ್ನು ಓದಿ ಕೇಳದವರು ಅಪರೂಪ. ಚಂದ್ರನ ಮೇಲಿಂದ ಈ ಗೋಡೆಯು ಕಾಣುತ್ತದಂತೆ!

ಈ ನಿರ್ಮಾಣದ ಕಥೆ ಕ್ರಿ.ಪೂ. ೭ನೇ ಶತಮಾನದಲ್ಲೇ ಶುರುವಾಗುತ್ತೆ. ಕ್ರಿ. ಪೂ. ೨೨೦ರಿಂದ ಕಟ್ಟಿದ ಗೋಡೆ ಒಂದು ರೀತಿಯ ಅಸ್ತಿತ್ವ ಪಡೆದಿದ್ದರೂ ಅದರ ಅವಶೇಷ ಬಹು ಕಮ್ಮಿ ಸ್ಥಿರವಾಯಿತು. ಅದಾದ ಮೇಲೆ ಆಗಾಗ್ಗೆ, ಉಂಟು – ಇಲ್ಲ ಎನ್ನುವಂತೆ ಈ ಗೋಡೆಯನ್ನು ವೃದ್ಧಿಮಾಡುವುದು, ಪಾಳಾಗುವುದು, ಅದನ್ನು ಮತ್ತೆ ದೊಡ್ಡದು ಮಾಡುವುದು ನಡೆದೇ ಇದೆ. ಈಗಿರುವ ಈ ಗೋಡೆಯ ಸ್ವರೂಪ ಹೆಚ್ಚು ಕಮ್ಮಿ ಮಿಂಗ್ ಕುಲದವರ ಕಾಲದ್ದೆನ್ನಬಹುದು. ಉತ್ತರದಿಂದ ತಮ್ಮ ಚಕ್ರಾಧಿಪತ್ಯಕ್ಕೆ ಆಪತ್ತು ತಪ್ಪಿಸಲು ಮುಖ್ಯವಾಗಿ ನಿರ್ಮಿಸಿದ ಈ ಗೋಡೆ ಇತರೆ ಉಪಯೋಗಗಳನ್ನೂ ಹೊಂದಿತ್ತು: ವ್ಯಾಪಾರದ ನಿಯಂತ್ರಣ, ವಲಸೆ ಹೋಗುವವರ–ಬರುವವರ ಮೇಲೆ ನಿಗಾ, ಹೀಗೆ ರಕ್ಷಣಾ ಗೋಡೆಗಳ ಉದ್ದೇಶವನ್ನು ಹೆಚ್ಚು ಸಮರ್ಥಗೊಳಿಸಲು, ದೃಷ್ಟಿ ಗಮನವಿಡಲು ಅನುಕೂಲವಾದ ಎತ್ತರದ ಗೋಪುರಗಳ ನಿರ್ಮಾಣ, ಸೈನಿಕರ ವಾಸಗೃಹ, ಗೋಪುರದಿಂದ ಗೋಪುರಕ್ಕೆ ಸಂಕೇತ ಕಳಿಸುವ ವ್ಯವಸ್ಥೆ (ಬಹುಶಃ ಹೊಗೆ ಮೂಲಕ) – ಇಂತಹವುಗಳನ್ನು ಅಳವಡಿಸಿದ್ದುಂಟು. ಕೆಲವೆಡೆ ಗೋಡೆ ೨೬ ಅಡಿ ಎತ್ತರ, ೧೬ ಅಡಿ ಅಗಲ, ಇನ್ನು ಕೆಲವೆಡೆ ಕಡಿದಾಗಿ



ಏರುವಾಗ (ಸುಮಾರು ೭ ಮೈಲಿ) ಸುಮಾರು ೨೬ ಅಡಿ ಎತ್ತರ, ಪಾಯದಲ್ಲಿ ೨೦ ಅಡಿ ಮತ್ತು ಮೇಲ್ಭಾಗದಲ್ಲಿ ೧೬ ಅಡಿ ಇದ್ದದ್ದೂ ಉಂಟು. ಈ ಮಹಾಗೋಡೆ ಪಶ್ಚಿಮದಲ್ಲಿ ಗಾಂಸು ಪ್ರಾಂತದಿಂದ ಪೂರ್ವದಲ್ಲಿ ಬೋಹೈ ಕೊಲ್ಲಿಯವರೆಗೆ ಸುಮಾರು ೫,೫೦೦ ಮೈಲಿಯಷ್ಟು ದೂರವನ್ನು ತಲುಪುವ ಮುಂಚೆ ಹಳ್ಳಗಳು, ತಿಟ್ಟಾದ ಒರಟು ಪರ್ವತ ಶ್ರೇಣಿಗಳು, ಆಳವಾದ ಕಣಿವೆಗಳು, ಬೆಟ್ಟಗಳು, ಕಿರುಹಾದಿಗಳು ಇವುಗಳೆಲ್ಲವನ್ನೂ ಹಾಯುತ್ತಾ ಬರುತ್ತವೆ. ಪ್ರವಾಸಿಗರು ಹೋಗುವುದು ಸಾಮಾನ್ಯವಾಗಿ ಬಾಡೊಲಿಂಗ್ ಗ್ರೇಟ್ ವಾಲ್‌ಗೆ. ಇದು ಬೀಜಿಂಗ್‌ನ ಉತ್ತರಕ್ಕೆ ೪೫ ಮೈಲಿ ದೂರದಲ್ಲಿದೆ. ನಾವು ಹೋಗಿದ್ದದ್ದು "ಮತಿಯಾನ್ಯೂ ಗ್ರೇಟ್ ವಾಲ್" ಭಾಗಕ್ಕೆ. ಇಲ್ಲಿ ಜನಸಂದಣಿ ಕಡಿಮೆ, ಜಾಗ ಉತ್ತಮ ಸ್ಥಿತಿಯಲ್ಲಿದೆ. ೨೨ ವಾಚ್–ಟವರ್‌ಗಳಿವೆ, ಬೇಕಾದಷ್ಟು ಗಿಡಮರಗಳಿಂದ ತುಂಬಿದ ಬೆಟ್ಟಶ್ರೇಣಿ, ಕಣಿವೆಗಳಿವೆ. ಬೀಜಿಂಗ್‌ನಿಂದ ಸುಮಾರು ೪೦ ಮೈಲಿ ವಾಯವ್ಯಕ್ಕೆ ಇದೆ. ಹತ್ತುವವರ ಅನುಕೂಲಕ್ಕಾಗಿ ಕೇಬಲ್ ಕಾರ್ ಸೇವೆ ಇದೆ. ನನ್ನಂತಹವನಿಗೆ ಬಹಳ ಅನುಕೂಲ. ಈ ಭೇಟಿ ಮರೆಯಲಾಗದ್ದು.

ಎಲ್ಲ ಕಡೆಯಂತೆ ಇಲ್ಲೂ ಜನರ ಗುಂಪುಗಳು – ವಿದೇಶಿಯರು, ಚೀನಾದ ಇತರ ಭಾಗಗಳವರು. ನಮ್ಮ ಗುಂಪಿನವರೆಲ್ಲ ಇನ್ನೂ ಮೇಲಕ್ಕೆ ಹೋದಾಗ ಮತ್ತು ಹೋಗದೆ ಉಳಿದಿದ್ದ ನಾನು ಒಂದು ಕಟ್ಟೆಯ ಮೇಲೆ ಕೂತಿದ್ದಾಗ ಶಾಂಘೈನಿಂದ ಬಂದಿದ್ದ ದಂಪತಿಗಳು, ಅವರ ಮಗು, ಮಗುವಿನ ಅಜ್ಜ–ಅಜ್ಜಿ ಅವರುಗಳ ಒಡನಾಟ, ಮಗುವಿನ ಫೋಟೋ ತೆಗೆಯಲು ಅವರಿತ್ತ ಅವಕಾಶ, ಎಲ್ಲ ಈಗ ಆ ಜನರ ಸೌಜನ್ಯತೆಯ ನೆನಪುಗಳು.

**ಯಿಚಾಂಗ್: ಮೂರು ಕಿರಿದಾದ ಕಣಿವೆಗಳ ಅಣೆಕಟ್ಟು**

ಮುಂಚೆಯೇ ಹೇಳಿದಂತೆ ಯಿಚಾಂಗ್ ಅಣೆಕಟ್ಟೆಗೆ ಹೋಗಲು ತಂಗುಸ್ಥಾನ. ಯಾಂಗ್ಟ್ಸಿ ನದಿ ದಡದಲ್ಲಿ ಅಣೆಕಟ್ಟಿನಿಂದ ೨೦ ಕಿ.ಮೀ. ಕೆಳಕ್ಕಿದೆ. ಸಣ್ಣ ನಗರವಾದರೂ ಯಾವ ರೀತಿಯಲ್ಲೂ ಕಳಪೆ ಜಾಗವೇನಲ್ಲ. ಇಂದಿನ ಆಧುನಿಕ ಪಟ್ಟಣದ ಎಲ್ಲಾ ಅನುಕೂಲಗಳೂ ಇವೆ. ಈ ಅಣೆಕಟ್ಟು ಯಾಂಗ್ಟ್ಸಿ ನದಿಯ ಅಡ್ಡ ಕ್ಸಿಲಿಂಗ್ ಗಾರ್ಜ್‌ನಲ್ಲಿ ಕಟ್ಟಿರುವುದು. ಕ್ಸಿಲಿಂಗ್‌ನ ಮೇಲಕ್ಕೆ ಇರುವ ಇನ್ನೆರಡು ಗಾರ್ಜ್‌ಗಳು: ವೂ ಗಾರ್ಜ್ (Wu) ಮತ್ತು ಕುವಾಟಾಂಗ್ (Quatang) ಗಾರ್ಜ್.

ಯಾಂಗ್ಟ್ಸಿ ನದಿಯ ಜಲಾನಯನ ಭೂಮಿ ವಿಸ್ತಾರವಾಗಿದೆ. ಅನೇಕ ಉಪನದಿಗಳಿವೆ. ಈ ಪ್ರದೇಶ ದೀರ್ಘ ಪ್ರವಾಹ ಕಾಲ ಮತ್ತು ಭಾರಿ ಪ್ರವಾಹಗಳಿಗೆ ಒಳಗಾಗಿದೆ. ಆದರೆ ಈ ಪ್ರವಾಹವನ್ನು ನಿಯಂತ್ರಿಸಿ ಹತೋಟಿಯಲ್ಲಿ ನೀರು ಬಿಡುವ ಏರ್ಪಾಡು ಮಾಡಲು ಸರಿಯಾದ ಜಾಗಗಳಿಲ್ಲ. ಹಾಗಾಗಿ ಅಣೆಕಟ್ಟು ಕೊನೆಯ ಗಾರ್ಜ್‌ನಲ್ಲಿ ಬರಬೇಕಾಯಿತು.

ಯಾಂಗ್ಟ್ಸಿ ನದಿ ಚೀನಾದ ಅತಿ ಸಮೃದ್ಧ ನೀರನ್ನೊಯ್ಯುವ ನದಿ. ೬,೫೦೦ ಕಿ.ಮೀ. ಉದ್ದವಿದ್ದು, ೧.೮ ಚದರ ಕಿ.ಮೀ. ಜಾಗದ ಜಲೋತ್ಪತ್ತಿಯನ್ನು ಕೊಂಡೊಯ್ಯುತ್ತದೆ. ಅದರ ನೀರಿನ ಸಂಪನ್ಮೂಲ ಸುಮಾರು ೯.೬ ಬಿಲಿಯನ್ ಘನಮೀಟರುಗಳು. ಹಡಗು ಸಂಚಾರದ ಮುಖ್ಯ ಮಾರ್ಗ. ಯಾಂಗ್ಟ್ಸಿ ನದಿ ಪ್ರದೇಶ ದೇಶದ ೪೦% ಆರ್ಥಿಕ ಸಾಮರ್ಥ್ಯವುಳ್ಳದ್ದು. ಆದರೆ ಇದರ ಪ್ರವಾಹ ಮತ್ತು ಅದರಿಂದಾದ ಹಾನಿಯನ್ನು ಜನರು ಅನಾದಿಕಾಲದಿಂದಲೂ ಸಹಿಸಬೇಕಾಗಿತ್ತು. ಇದು ಸುಮಾರು



ಹತ್ತು ವರ್ಷಕ್ಕೊಮ್ಮೆ ಇದ್ದೇ ಇದೆಯಂತೆ. ೨೦ನೇ ಶತಮಾನದ ಅತಿ ಭಾರಿ ಪ್ರವಾಹ ೧೯೫೪ರಲ್ಲಿ ಆಯಿತು. ಆಗ ೩ ಮಿಲಿಯನ್ ಹೆಕ್ಟೇರ್ ವ್ಯವಸಾಯ ಭೂಮಿ ಪ್ರವಾಹದಲ್ಲಿ ಮುಳುಗಿಹೋಯಿತು. ೧೯ ಮಿಲಿಯನ್ ಜನರು ಪ್ರವಾಹಪೀಡಿತರಾದರು. ಅಷ್ಟೇ ಅಲ್ಲ, ೩೦೦೦ ಜನ ಮಡಿದರು. ಕೆಳಭಾಗದಲ್ಲಿರುವ ವೂಹಾನ್ ನಗರ ೩ ತಿಂಗಳು ಪ್ರವಾಹದಲ್ಲಿ ಮುಳುಗಿತು. ಯಾಂಗ್ಟ್ಸಿ ಮಾತ್ರ ನದಿಯಾದರೂ ಪದೇ ಪದೇ ನೈಸರ್ಗಿಕ ಆಪತ್ತನ್ನು ವಿಪತ್ತನ್ನೂ ಹೇರುತ್ತಲೇ ಇತ್ತು. ಇಂತಹ ಸ್ಥಿತಿಯಲ್ಲಿ ಈ ಮಹಾನದಿಯ ನಿಯಂತ್ರಣದ ಯೋಜನೆ ಎಷ್ಟೋ ಕಾಲದಿಂದ ಚರ್ಚಿಸಲ್ಪಟ್ಟಿದೆ. ಅದಕ್ಕೂ ಮುಂಚೆ ಯೋಚಿಸಿದ್ದರೂ, ೧೯೧೨ರಿಂದ ಸನ್ ಯಾತ್ ಸೇನ್ ಕಾಲದಿಂದ ಇತ್ತೀಚಿನವರೆಗೂ ಗಾಢ ಸಮಾಲೋಚನೆಗಳು ನಡೆದಿದ್ದು, ಅದರಲ್ಲಿ ಅನೇಕ ಪ್ರಮುಖರು ಭಾಗವಹಿಸಿದ್ದಾರೆ. ಆದರೆ ಅಂತ್ಯ ತೀರ್ಮಾನ ನಾಯಕರದ್ದೇ ಆದ ಇಚ್ಛೆಯಂತೆ ಆಗಿದ್ದಲ್ಲ. ಅಮೆರಿಕಾ, ಸೋವಿಯತ್ ತಜ್ಞರ ಅಭಿಪ್ರಾಯಗಳಲ್ಲದೆ, ೧೯೫೫ರಿಂದ ಅನೇಕ ಸಮಿತಿಗಳು, ತಜ್ಞರು ಮತ್ತಿತರರು ಈ ಯೋಜನೆಯನ್ನು ತಿಳಿದ ಎಲ್ಲ ದಿಕ್ಕಿನಿಂದಲೂ ಗಾಢವಾಗಿ ಪರೀಕ್ಷಿಸಿ ಚರ್ಚಿಸಿದರು. ಒಮ್ಮೆ ಈ ಮೂರು ಗಾರ್ಜಸ್‌ಗಳ ಸಂಶೋಧನೆಗೆ ೧೦೦೦ ವೈಜ್ಞಾನಿಕರನ್ನು, ತಂತ್ರಜ್ಞಾನಿಗಳನ್ನು ನೇಮಿಸಿದ್ದರು. ೧೯೯೧ರಲ್ಲಿ ರಾಷ್ಟ್ರೀಯ ಜನತೆಯ ಕಾಂಗ್ರೆಸ್‌ನ ಒಪ್ಪಿಗೆಯನ್ನು ಕೋರಲಾಯಿತು. ೧೯೯೨ರಲ್ಲಿ ಕಾಂಗ್ರೆಸ್ ಮೂರು ಗಾರ್ಜ್‌ಗಳ ಯೋಜನೆಯನ್ನು ೧೭೬೭ ಪರ ಮತ್ತು ೧೭೭ ವಿರುದ್ಧ, ೬೬೪ ತಟಸ್ಥ ಮತಗಳ ಆಧಾರದ ಮೇಲೆ ಅನುಮೋದಿಸಿತು. ೧೯೯೪ ಡಿಸೆಂಬರ್, ೧೪ರಂದು ಗಣರಾಜ್ಯದ ನಾಲ್ಕನೇ ಮುಖ್ಯಮಂತ್ರಿ ಲೀ ಪೆಂಗ್ ಮೂರು ಗಾರ್ಜಸ್ ಯೋಜನೆ ಈಗ ಶುರುವಾಗಿದೆ ಎಂದು ಕ್ಸಿಲಿನ್ ಗಾರ್ಜ್‌ನಲ್ಲಿರುವ ಸ್ಯಾಂಡೋಪಿಂಗ್‌ನಲ್ಲಿ ಘೋಷಿಸಿದರು. ಮೂರು ಹಂತಗಳಲ್ಲಿ ಈ ಯೋಜನೆ ೧೭ ವರ್ಷ ಹಿಡಿಯಿತು, ೫-೬-೬ ವರ್ಷಗಳಲ್ಲಿ.

**ಈ ಮಹಾ ಯೋಜನೆಯ ಉದ್ದೇಶಗಳು :** ಪ್ರವಾಹ ನಿಯಂತ್ರಣ, ವಿದ್ಯುಚ್ಛಕ್ತಿ ಉತ್ಪಾದನೆ, ಸ್ಥಳಾಂತರಗೊಂಡ ಜನರ ಪುನರ್ವಸತಿ. ಇದಲ್ಲದೆ ಶಾಶ್ವತವಾದ ಹಡಗು ಸಂಚಾರಕ್ಕೆ ಅನುಕೂಲವಾದ ೨ ಹಡಗು ಮಟ್ಟ ಬದಲಾವಣೆ ಕಟ್ಟೆಗಳು (lock) ಮತ್ತು ಹಡಗಿನ ಎತ್ತುಗ (lift). ಹಡಗು ಎತ್ತುಗ (lift) ಒಂದನ್ನು ಬಿಟ್ಟು ಬೇರೆಲ್ಲವೂ ಕಾರ್ಯಗತವಾಗಿವೆ. ಯೋಜನೆಯ ವೆಚ್ಚ ೧೮೦.೯ ಬಿಲಿಯನ್ ಯುಆನ್; ಅದರಲ್ಲಿ ೭೯.೮ ಬಿಲಿಯನ್ ಯೋಜನೆ ನಿರ್ಮಾಣಕ್ಕೆ ೩೫.೮ ಬಿಲಿಯನ್ ವಿದ್ಯುಚ್ಛಕ್ತಿ ನಿರ್ಮಾಣಕ್ಕೆ ಮತ್ತು ೬೯.೩ ಬಿಲಿಯನ್ ಪುನರ್ವಸತಿ ಕಾರ್ಯಗಳಿಗೆ. ಅಣೆಕಟ್ಟಿನ ನೀರಿನ ಕೆಳಗಿನ ಭಾರಿ ಗೋಡೆಯ ಉದ್ದ ೨೩೦೯ ಮೀಟರ್, ಎತ್ತರ ೧೮೫ ಮೀಟರ್. ಇದರ ಕೆಳಭಾಗದ ಅಗಲ ೧೨೪ ಮೀಟರ್, ಮೇಲ್ಭಾಗ ೧೫ ಮೀಟರ್. ಜಲಾಶಯ ೬೦೦ ಕಿ.ಮೀ. ಉದ್ದ, ೨೦೦೦ ಮೀಟರ್ ಅಗಲವಾಗಿದ್ದು, ಅದರ ಒಟ್ಟು ವಿಸ್ತಾರ ೧೦೦೦ ಚದರ ಕಿ.ಮೀ.ಗಳು. ಸಂಗ್ರಹಿಸಿಕೊಳ್ಳಬಲ್ಲ ನೀರಿನ ಪ್ರಮಾಣ ೩೯.೩ ಬಿಲಿಯನ್ ಘನ ಮೀಟರ್‌ಗಳು. ಪ್ರವಾಹ ನಿಯಂತ್ರಣ ಸಾಮರ್ಥ್ಯ ೨೨.೧೫ ಘನ ಮೀಟರ್, ಪ್ರವಾಹ ಬಿಡುಗಡೆ ಪ್ರಮಾಣ ಸೆಕೆಂಡಿಗೆ ೧,೦೨,೫೦೦ ಘನಮೀಟರ್‌ಗಳು. ಜಲಾಶಯದಿಂದ ಮುಳುಗಿಹೋದ ನೈಸರ್ಗಿಕ ಮತ್ತು ಸಾಂಸ್ಕೃತಿಕ ಜಾಗಗಳು ೩೯.

ವಿದ್ಯುಚ್ಛಕ್ತಿ ಉತ್ಪಾದನೆಗಾಗಿ ೩೨ ಯೂನಿಟ್‌ಗಳಿವೆ; ೧೪ ಎಡದಂಡೆಯಲ್ಲಿ, ೧೨ ಬಲದಂಡೆಯಲ್ಲಿ ಮತ್ತು ೬ ನೆಲದೊಳಗೆ. ಪ್ರತಿ ಯೂನಿಟ್‌ನ ಸಾಮರ್ಥ್ಯ ೭೦,೦೦೦ ಕಿಲೋ ವ್ಯಾಟ್‌ಗಳು. ಅಂದರೆ, ಸ್ಥಾಪಿಸಿದ ನಿರ್ಮಾಣ ಸಾಮರ್ಥ್ಯ ೨೨.೪ ಮಿಲಿಯನ್ ಕಿಲೋ ವ್ಯಾಟ್‌ಗಳು. ವಾರ್ಷಿಕ ಪವರ್ ಉತ್ಪಾದನೆ ೯೦೦ ಮೀ. ಕಿಲೋ ವ್ಯಾಟ್ ಅವರ್ಸ್ ಆಯಿತು. ಏಪ್ರಿಲ್ ೨೦೧೧ರ ವರೆಗೆ ಮೂರು ಗಾರ್ಜಸ್ ಯೋಜನೆಯ ಒಟ್ಟಾರೆ ನಿರ್ಮಾಣ ಸಾಮರ್ಥ್ಯ ೪೮೮ ಬಿಲಿಯನ್ ಕಿಲೋ ವ್ಯಾಟ್ ಅವರ್ಸ್ ಆಗಿದೆ. ಇದರಿಂದ ೧೮೮ ಮಿಲಿಯನ್ ಟನ್ ಕಲ್ಲಿದ್ದಲಿನ ಬಳಕೆಯನ್ನು ನಿಲ್ಲಿಸಿದಂತಾಗಿದೆ.

ಹಡಗು ಸಂಚಾರಕ್ಕೆ ನಿರ್ಮಿಸಿರುವ ಎರಡು ನಾಲೆಗಳ ಐದು ಹಂತದ ಮಟ್ಟ ಬದಲಾವಣೆ ಕಟ್ಟೆ (ಹಡಗು ಲಾಕ್)ಯಿಂದಾಗಿ ೧೭೫ ಮೀಟರ್ ಎತ್ತರದ ಜಲಾಶಯದಿಂದ ೬೩ ಮೀಟರ್‌ನ ನದಿಯ ಕೆಳಭಾಗಕ್ಕೆ ೧೦,೦೦೦ ಟನ್ ಭಾರದ ಹಡಗುಗಳು ೩ ಘಂಟೆಗಳಲ್ಲಿ ಚಲಿಸಲು ಅನುಕೂಲವಾಗಿದೆ. ಮೊದಲು ಕೇವಲ ೧೫೦೦ ಟನ್ ಹಡಗುಗಳು ಹೋಗಲಾಗುತ್ತಿತ್ತು. ಎಡದಂಡೆಯಲ್ಲಿ ಕಟ್ಟುತ್ತಿರುವ ಮೇಲಕ್ಕೆತ್ತುವ ಹಡಗು ಲಿಫ್ಟ್ ಸಿದ್ಧವಾದಾಗ ೩೦೦೦ ಟನ್ ತೂಕದ ಪ್ರಯಾಣಿಕರ ಹಡಗುಗಳು, ೧೫೦೦ ಟನ್ನಿನ ಸಾಮಾನು ದೋಣಿಗಳು ಕೇವಲ ೪೦ ನಿಮಿಷಗಳಲ್ಲಿ ಈ ಭಾಗವನ್ನು ದಾಟಬಲ್ಲವು. ಹಡಗು ಲಾಕ್‌ಅನ್ನು ನಿರ್ಮಿಸಿರುವುದು ನೂರಾರು ಮಿಲಿಯನ್ ವರ್ಷಗಳಿಂದಿರುವ ಅತ್ಯಂತ ಘನವಾದ ಗ್ರಾನೈಟಿನ ಪರ್ವತದಲ್ಲಿ ಎರಡು ಆಳವಾದ ಕಂದರಗಳನ್ನು ಅಗೆಯುವ ಮೂಲಕ. ಈ ಸಾಹಸದ ಕೆಲಸದ ದಿಟ್ಟತನವನ್ನು ಊಹಿಸಲು ಮಾತ್ರ ಸಾಧ್ಯ. ವಾರ್ಷಿಕ ಸಾಗಾಣಿಕೆ ೧೨ ಮಿಲಿಯನ್ ಟನ್‌ನಿಂದ ೧೦೦ ಮಿಲಿಯನ್‌ಗೆ ಏರಿದೆ. ಅಂದಾಜಿನ ಪ್ರಕಾರ ಸಾಗಾಣಿಕೆಯ ಖರ್ಚು ಶೇಕಡ ೩೫-೩೭ರಷ್ಟು ಕಡಿಮೆಯಾಗಿದೆ. ಯೋಜನೆಗೆ ಮುಂಚೆ ಸರಾಸರಿ ಹತ್ತು ವರ್ಷಕ್ಕೊಮ್ಮೆ ಕೆಳಭಾಗಗಳಲ್ಲಿ ಪ್ರವಾಹವಾಗುತ್ತಿತ್ತು. ಈಗ ಅದು ೧೦೦ ವರ್ಷಕ್ಕೊಮ್ಮೆ ಆಗಬಹುದೆಂದು ಅಂದಾಜು ಮಾಡಲಾಗಿದೆ.

ಫಲಿಸಿದ ಉಪಯೋಗಗಳು ನಿಜವಾದರೂ, ಈ ಪ್ರಮಾಣದ ಯೋಜನೆಯಿಂದ ಕ್ಲಿಷ್ಟವಾದ ಅಪಕಾರಗಳೂ ಆಗಿವೆ. ಪ್ರಕೃತಿಗೆ ಧಕ್ಕೆ, ಹಳೆಯ ಸಂಸ್ಕೃತಿಗಳಿಗೆ ಆದ ಆಘಾತ, ಲಕ್ಷಾಂತರ ಜನರ ಸ್ಥಳಪಲ್ಲಟ ಇವೆಲ್ಲವೂ ತಳ್ಳಿಹಾಕುವ ವಿಚಾರಗಳಲ್ಲ. ಅಧಿಕೃತ ಹೇಳಿಕೆಗಳು ಈ ಎಲ್ಲ ಬಾಧಕಗಳನ್ನೂ ವೈಜ್ಞಾನಿಕವಾಗಿ ಎದುರಿಸಿ, ಆಗಬಹುದಾದ ಪರಿಣಾಮಗಳನ್ನು ಮಿತಗೊಳಿಸ ಲಾಗುತ್ತಿದೆ ಎಂದು ತಿಳಿಸುತ್ತವೆ. ಆದರೆ ಇದೆಲ್ಲಾ ಬಹಳಷ್ಟು ಬಾಯಿಮಾತೇ. ನಮ್ಮ ದೇಶದಲ್ಲಿ ಅದರ ಪರಿಚಯ ನಮಗೆ ಸಾಕಷ್ಟಾಗಿದೆ.

**ಯಿಚಾಂಗ್ – ಶಾಂಘೈ : ರೈಲು ಪ್ರಯಾಣ**

ಯಿಚಾಂಗ್‌ನಿಂದ ಶಾಂಘೈಗೆ ರೈಲಿನಲ್ಲಿ ೧೧೨೧ ಕಿ.ಮೀ.ಗಳು. 'ಡಿ' ತರಗತಿಯ ಬುಲೆಟ್ ರೈಲಿನಲ್ಲಿ ಪ್ರಯಾಣ ಮಾಡಿದೆವು. ೧೩ ನಿಲುಗಡೆಗಳಿರುವ ಈ ರೈಲಿನಲ್ಲಿ ಪ್ರಯಾಣದ ಸಮಯ ೮ ಘಂಟೆ ೭ ನಿಮಿಷ, ಅಂದರೆ ಸರಾಸರಿ ಘಂಟೆಗೆ ೧೪೦ ಕಿ.ಮೀ. ವೇಗ. ನಿಲ್ದಾಣದಲ್ಲಿ ಎಲ್ಲೂ ನೂಕುನುಗ್ಗಲು ಇಲ್ಲ, ಚೊಕ್ಕಟವಾದ ವಿಶಾಲ ನಿಲ್ದಾಣದಲ್ಲಿ ಎಲ್ಲರೂ ರೈಲಿನ ಒಂದೊಂದು ಬಾಗಿಲಿನ ಎದುರು ಸುರಕ್ಷ ಗೆರೆಯ ಹಿಂದೆ ಸಾಲಾಗಿ ನಿಂತಿದ್ದು, ಜನ ಇಳಿದ ಮೇಲೆ ರೈಲು ಹತ್ತುತ್ತಾರೆ. ಪ್ರಯಾಣಿಕರಲ್ಲದೆ ಬೇರೆ ಯಾರಿಗೂ – ಜೊತೆಯಲ್ಲಿ ಬಂದವರು, ಇತ್ಯಾದಿ – ನಿಲ್ದಾಣದೊಳಗೆ ಪ್ರವೇಶವಿಲ್ಲ. ರೈಲು ತುಂಬಿರುತ್ತದೆ. ಪ್ರಯಾಣ ಬಹು ಹಿತಕರವಾಗಿರುತ್ತೆ, ಶಬ್ದ ಬಹಳ ಕಡಿಮೆ; ಕುಲುಕುವುದು ಹೆಚ್ಚು ಕಮ್ಮಿ ಇಲ್ಲವೇ ಇಲ್ಲ. ಚೀಣಾದಲ್ಲಿ ಇಂತಹ ವೇಗದ ರೈಲು ಗಳನ್ನು ಬೇಕೆಂದೇ ನಡೆಸುತ್ತಾರಂತೆ. ಆದಷ್ಟು ಜನ ಕೆಲಸದ ಊರಿಗೆ ವಲಸೆಹೋಗುವ ಬದಲು ಈ ವೇಗದ ರೈಲುಗಳಲ್ಲಿ ಪ್ರಯಾಣ ಮಾಡಿ, ಹಿಂತಿರುಗುವಂತೆ ಪ್ರೋತ್ಸಾಹಿಸಲು. ಅದಕ್ಕೆ ಇಂತಹ ರೈಲುಗಳಲ್ಲಿ ಅಷ್ಟು ನಿಲುಗಡೆಗಳಿರುವುದು. ಈ ರೈಲು ಮಾರ್ಗದ ಉದ್ದಕ್ಕೂ ಯಾಂಗ್ಟ್ಸಿ ನದಿಯ ಬದಿಯಲ್ಲೇ ಇರುವುದು. ಸುತ್ತಲೂ ಫಲವತ್ತಾದ ಜಮೀನುಗಳು. ಜೊತೆಗೇ ಎರಡೂ ಕಡೆ ಕೈಗಾರಿಕಾ ಉದ್ಯಮಗಳು. ಕಾಣುವ ಎಲ್ಲ ಕಟ್ಟಡಗಳ ಮೇಲುಪ್ಪರಿಗೆ ಭರ್ತಿ ಸೋಲಾರ್ ಹೀಟರ್‌ಗಳು – ಇದಿಲ್ಲದ ಒಂದು ಕಟ್ಟಡವನ್ನೂ ನೋಡಲಿಲ್ಲ.

ಶಾಂಘೈಯನ್ನೇನೋ ಸಮಯಕ್ಕೆ ಸರಿಯಾಗಿ ತಲುಪಿದೆವು. ನಿಧಾನವಾಗಿಳಿದು ಆ ಕಡೆ, ಈ ಕಡೆ ನೋಡುವ ಹೊತ್ತಿಗಾಗಲೇ ಮಿಕ್ಕ ಪ್ರಯಾಣಿಕರೆಲ್ಲ ಹೊರಟು ಹೋಗಿದ್ದರು. ಹೇಗೆಂದು ತಿಳಿಯದೆ, ಭಾಷೆಯೂ ಬರದಿದ್ದುದರಿಂದ, ಹೊರಬರಲು ಸ್ವಲ್ಪ ಮುಜುಗರವೇ ಆಯಿತು.

ಈ ಸಮಯದಲ್ಲಿ ಒಂದು ವಿಸ್ಮಯಕರವಾದ, ಬಹಳ ತಿಳುವಳಿಕೆ ಕೊಡುವಂತಹ, ನಾವು ಊಹಿಸಲೂ ಆಗದಂತಹ ಕಾರ್ಯವನ್ನು ಕಂಡೆವು. ಆಸನಗಳೆಲ್ಲ ರೈಲು ಹೋಗುವ ದಿಕ್ಕಿಗೆ ಅಳವಡಿಸಲ್ಪಟ್ಟಿರುತ್ತದೆ. ಶಾಂಘೈ ತಲುಪಿದ ಮೇಲೆ ಇದೇ ರೈಲು ಯಿಚಾಂಗ್ ಕಡೆಗೆ ವಾಪಸ್ಸು ಓಡುತ್ತಲ್ಲ, ಆಗ ಆಸನಗಳು ಪ್ರಯಾಣದ ದಿಕ್ಕಿಗೆ ಹಿಮ್ಮುಖವಾಗಿಬಿಡುತ್ತವೆ, ಅಲ್ಲವೆ ? ಇಲ್ಲಿ ಹಾಗಾಗುವುದಿಲ್ಲ. ಕೇವಲ ಇಬ್ಬರು ಮಹಿಳೆಯರು

ಈ ಆಸನಗಳನ್ನು ಸುಲಭವಾಗಿ ಕೆಲ ನಿಮಿಷಗಳಲ್ಲಿ ವಾಪಸ್ಸಾಗುವ ದಿಕ್ಕಿಗೆ ತಿರುಗಿಸಿಬಿಡುತ್ತಾರೆ. ವಾಪಸ್ಸಾಗುವ ರೈಲಿನಲ್ಲಿ ಕೂತ ಪ್ರಯಾಣಿಕ ಹೋಗುವ ದಿಕ್ಕಿಗೆ ಬೆನ್ನು ಮಾಡಿಕೊಂಡು ಕೂರಬೇಕಾಗಿಲ್ಲ. ಇದೊಂದು ಸಣ್ಣ ವಿಷಯ. ಆದರೆ ಪ್ರಯಾಣಿಕನ ತೃಪ್ತಿಗೆ ಎಷ್ಟು ಆತುರ! ಇದನ್ನು ಕಂಡಾಗ ಈ ರೈಲು ಪ್ರಯಾಣ ಸಾರ್ಥಕ ವೆನಿಸಿತು. ಇದು ಆ ದೇಶದ ಪ್ರಗತಿಗೆ ಸಾಕ್ಷಿಯಲ್ಲವೇ ?

**ಶಾಂಘೈ**

ಶಾಂಘೈ ಎಂದಿನಿಂದಲೂ ಪ್ರಸಿದ್ಧವಾದ ನಗರ, ಅದರಲ್ಲೂ ವ್ಯಾಪಾರ, ಉದ್ಯಮಿಗಳಿಗೆ. ಈಗಲೂ ಅದೇ ಸ್ಥಿತಿ, ಆದರೆ ಬಹಳ ದೊಡ್ಡದಾದದ್ದು, ನವೀನ ವಾದದ್ದು. ಬೀಜಿಂಗ್‌ಗೆ ಹೋಲಿಸಿದರೆ ಇಲ್ಲಿನ ಕಟ್ಟಡ ಗಳೆಲ್ಲ ಹೆಚ್ಚು ಹೆಚ್ಚು ಗಾಜು ಮತ್ತು ಕ್ರೋಮ್‌ನಿಂದ ಕಟ್ಟಿದವು. ಎಲ್ಲೆಲ್ಲೂ ಗಗನಚುಂಬಿಗಳು, ಕಟ್ಟಡಗಳ ವಾಸ್ತುಶಿಲ್ಪ ವೈಖರಿಯ ಸುರಿಮಳೆ. ಕಟ್ಟಡಗಳು ಎಷ್ಟೆಂದರೆ ಮಧ್ಯದಲ್ಲಿ ಒಂದು ಗುಡಿಸಲು ಕಟ್ಟಲೂ ಜಾಗ ಸಿಗಲಾರದು. ಇವೇ ಕಟ್ಟಡಗಳ ಹಿಂಬದಿಯಲ್ಲಿ ಅಷ್ಟೇನೂ ನಾಜೂಕಲ್ಲದ ಮನೆಗಳು, ಕಟ್ಟಡಗಳು ಇವೆ.

ಹುವಾಂಗ್‌ಹುವಾ ಹೊಳೆ ಈ ನಗರದಲ್ಲಿ ಹರಿಯುತ್ತೆ. ಅದರ ದಂಡೆ, ಅದರಲ್ಲೂ ಸಂಜೆಯಾದ ಮೇಲೆ, ಜನರು ನೋಡಲು ಹೋಗುವ ಜಾಗ. 'ಬಂಡ್' ಎಂದು ಕರೆಯುತ್ತಾರೆ. ಎರಡು ದಂಡೆಯಲ್ಲೂ ಭಾರಿ ಕಟ್ಟಡಗಳು, ನಾನಾ ಶೈಲಿಯವು. ದೇಶೀ ಮತ್ತು ವಿದೇಶಿ ಕಂಪನಿಗಳೆಲ್ಲ ಇಲ್ಲಿವೆ. ವಿವಿಧ ರೀತಿಯಲ್ಲಿ ಬಣ್ಣ–ಬಣ್ಣದ ದೀಪಗಳಿಂದ ಬೆಳಗುತ್ತಿರುತ್ತವೆ. ಈ ನೋಟ ಒಂದು ದೊಡ್ಡ ಆಕರ್ಷಣೆ. ಈ ಹೊಳೆಯಲ್ಲಿ ಸಣ್ಣ ಹಡಗುಗಳಲ್ಲಿ ವಿಲಾಸಕ್ಕೆ ಹೋಗುವ ಜನ ಬೇಕಾದಷ್ಟು, ಜನರಿಗೆ ವಿಲಾಸ, ಉದ್ಯಮಿಗಳಿಗೆ ವ್ಯಾಪಾರಿಗಳಿಗೆ ತಮ್ಮ ಹೆಸರುಗಳಿಗೆ ನೆರವು ನೀಡಲು ಮಹಾವಕಾಶ. 'ಬಂಡ್'ಗೆ ಹೋಗುವುದು, ಹಡಗು ಸಂಚಾರ ಪ್ರವಾಸಿಗರು ಮಾಡಲೇಬೇಕಾದ ಪಟ್ಟಿಯಲ್ಲಿ ಒಂದು.

**ಜೇಡ್ ಬುದ್ಧ ದೇವಾಲಯ**

ಬಹಳ ಅಚ್ಚುಕಟ್ಟಾಗಿರುವ ಬುದ್ಧ ದೇವಾಲಯ. ಒರಗಿಕೊಂಡಿರುವ ಬುದ್ಧನ ಹಸಿರು ಕಲ್ಲಿನ (ಜೇಡ್) ಭಾರಿ ಮೂರ್ತಿಯ ಹಳೇಕಾಲದ ದೇವಾಲಯ. ಬರ್ಮದಿಂದ ತಂದಿದ್ದೆಂಬುದಕ್ಕೆ ಪುರಾವೆ ಇದೆ. ಇದಲ್ಲದೆ ಬೇರೆ ಬೇರೆ ಮೂರ್ತಿಗಳೂ ಇವೆ. ಸಾಕಾದಷ್ಟು ಭಕ್ತರಿರುತ್ತಾರೆ. ವಯಸ್ಸಾದವರು, ಯುವ ಜನರು ಮಧ್ಯ ದಲ್ಲಿರುವ ಅಂಗಳದಲ್ಲಿ ಧೂಪ ಹತ್ತಿಸಿ, ತಲೆಬಾಗಿ ಬುದ್ಧನಿಗೆ ನಮಸ್ಕಾರ ಮಾಡುವುದನ್ನು ನೋಡಬಹುದು.

**ಪರ್ಲ್ ಟಿವಿ ಗೋಪುರ**

ಶಾಂಘೈನ ಒಂದು ಅತ್ಯಂತ ಜನಪ್ರಿಯವಾದ ಮನರಂಜನೆ ಸ್ಥಾನವಿದು. ಕಿಕ್ಕಿರಿದ ಜನ. ನಿಜವಾಗಿಯೂ ಭಾರಿ ಕಟ್ಟಡ. ದೊಡ್ಡ ತಳದ ಮೇಲೆ ಶಂಕುವಿನ ಆಕಾರದ ಕಟ್ಟಡ. ಎತ್ತುಗದಲ್ಲಿ ಕ್ಷಣಗಳಲ್ಲಿ ಮೇಲಿನ ಅಂತಸ್ತು ತಲುಪಿದರೆ – ಅದರ ವೇಗ ಬುಲೆಟ್ ರೈಲಿನದಕ್ಕೆ ಸಮಾನವಾದುದೆಂದು ಹೇಳುತ್ತಾರೆ – ಅಲ್ಲಿ ಗಾಜಿನಿಂದ ಆಚ್ಛಾದಿತವಾದ ಸುತ್ತಲೂ ನೋಡಲು ಅವಕಾಶವಿರುವ ಅಂತಸ್ತು ಇದೆ. ೩೬೦° ಕಾಣುವ ಹರಡಿದ ಅಡಚಣೆ ಇಲ್ಲದ ನಗರದ ದೃಶ್ಯ ಬಹಳ ಜನಪ್ರಿಯವಾದ ಆಕರ್ಷಣೆ. ಗಗನಚುಂಬಿಗಳಿಂದ ತುಂಬಿರುವ ಈ ಊರಿನಲ್ಲೂ ಅವುಗಳ ಮೇಲಿನಿಂದ ಅವುಗಳ ಆಚೆಗಿರುವ ಶಾಂಘೈಯನ್ನು ನೋಡಬಹುದು. ಅಲ್ಲದೆ ಪಕ್ಕದಲ್ಲೇ ಹುವಾಂಗ್‌ಹುವಾ ಹೊಳೆ ಇದೆ. ಮೇಲಿನಿಂದ ನೋಡಿದರೆ ಅದರಲ್ಲಿ ಹೋಗುವ ದೋಣಿಗಳು ಒಂದು ಆಕರ್ಷಣೆ. ಒಂದೆರಡು ಅಂತಸ್ತು ಕೆಳಗೆ ಬಂದರೆ, ಆ ಅಂತಸ್ತಿನಲ್ಲಿ ನೆಲದ ಅಂಚಿನ ಭಾಗಕ್ಕೂ ಗಾಜು ಹಾಕಿದೆ. ಆ ಗಾಜು ನೆಲದ ಮೇಲೆ ಹೋಗುವುದೇ ಒಂದು ಅದ್ಭುತ ಅನುಭವ, ಕೆಳಕ್ಕೆ ಬಿದ್ದುಬಿಟ್ಟೇನೋ ಎನ್ನುವ ಊಹೆ – ಹೆದರಿಕೆಯಿಂದ. ಅದರ ಮೇಲೆ ಕೂತು, ನಿಂತು, ಒರಗಿಕೊಂಡು ಫೋಟೋ ತೆಗೆಸಿ ಕೊಳ್ಳುವ ಆಸೆಯನ್ನು ನಿರಾಕರಿಸುವವರು ಅತಿವಿರಳ.

ಎಲ್ಲ ಕಡೆಯೂ ಇರುವ ಅಂಗಡಿ, ಸರಕು ಮಾರಾಟದ ವರಸೆ ಹೇಗಿರುತ್ತದೆಂದು ಹೇಳಲು ನನಗಾದ ಒಂದು ನೈಜ ಅನುಭವ ಅಪ್ರಸ್ತುತವಾಗ ಲಾರದು. ನಾವೆಲ್ಲ ಚಹಾ ಕುಡಿಯುತ್ತ ಒಂದು ದುಕಾನಿ ನಲ್ಲಿ ಕೂತು ವಿಶ್ರಮಿಸಿಕೊಳ್ಳುತ್ತಿದ್ದಾಗ ಶೌಚಾಲಯ ಉಪಯೋಗಿಸಬೇಕಾಯಿತು. ಅದಿರುವುದು ಅರ್ಧ ಮಹಡಿ (Mezzanine Floor)ಯಲ್ಲಿ; ಚರಸೋಪಾನ ಹತ್ತಿ ಹೋಗಬೇಕು; ಆ ಅಂತಸ್ತಿನಲ್ಲಿರುವ ಅಂಗಡಿಗಳ ಪಕ್ಕ ಹೋಗಬೇಕು; ವಾಪಸ್ ಬರುವಾಗ ಒಂದು ಅಂಗಡಿಯ ಒಬ್ಬ ಯುವಕ ನನಗೆ ಏನೇನನ್ನೋ ಮಾರಲು ನೋಡಿದ; ನಗುತ್ತ ನಾನು ಬೇಡವೆನ್ನುತ್ತಲೇ ಬಂದೆ; ಕಡೆಗೆ ಆತ ನನಗೆ ಒಂದು ಬೆತ್ತವನ್ನು ಚಾಚಿದ (ನನ್ನ ವಯಸ್ಸು ನೋಡಿ ಇರಬೇಕು); ನಾನು ನಗುತ್ತಲೇ ಅವನಿಗೆ ಗಟ್ಟಿಯಾಗಿ ಅಂದೆ : "ಹೇ, ನಾನು ಅದಿಲ್ಲದೆಯೇ ನಡೆಯಬಲ್ಲೆ" ಎಂದು. ಆ ಅಂಗಡಿಯವ ರೆಲ್ಲರೂ ಗೊಳ್ಳೆಂದು ನಕ್ಕರು. ಚರಸೋಪಾನದಲ್ಲಿ ಇಳಿದುಬರುತ್ತಿದ್ದಾಗ, ಆ ಅಂಗಡಿಯ ಒಬ್ಬಾಕೆ ಓಡಿ ಬಂದು ನನಗೆ ನಗುತ್ತಾ ಅಂದಳು : "ಹೇ, ನೀನು ನೂರು ವರ್ಷ ಬದುಕು." ಆ ಜನರು ವ್ಯಾಪಾರಶೀಲ ರಾದರೂ, ಹಾಸ್ಯಾನುಭವದ ರುಚಿ ನೋಡುವ ಮನೋಭಾವ ಅಳಿಸಿಹೋಗಿಲ್ಲ. ಮುಂದಿನ ಮಧ್ಯಾಹ್ನ ಪುಡೋಂಗ್ ಅಂತರರಾಷ್ಟ್ರೀಯ ವಿಮಾನ ನಿಲ್ದಾಣದಿಂದ ಚೀಣಾಕ್ಕೆ ವಿದಾಯ ಹೇಳಿದೆವು.

**ಅನಿಸಿಕೆ**

ಚೀಣಾ ನೋಡಲು ಹೋಗುವುದು – ಅದು ಎಷ್ಟೇ ಕಡಿಮೆ ದಿನಗಳದ್ದೇ ಆಗಿರಬಹುದು, ಕೇವಲ ಪ್ರವಾಸಿಯ ರೂಪದಲ್ಲಿರಬಹುದು – ಒಂದು ಮಹಾನುಭವ. ಎಲ್ಲೆಲ್ಲೂ ನೋಡಬೇಕಾದದ್ದು, ತಿಳಿದು ಕೊಳ್ಳುವುದು ಇರುತ್ತೆ. ೨೩ ಮಿಲಿಯನ್ ಜನರಿರುವ ಬೀಜಿಂಗ್‌ನಲ್ಲಿ, ೨೦ ಮಿಲಿಯನ್ ಇರುವ ಶಾಂಘೈನಲ್ಲಿ ಒಂದು ಕೊಳಚೆ ಪ್ರದೇಶವೂ ಇಲ್ಲವೆನ್ನುತ್ತಾರೆ. ನನಗೆ ತೋಚುವುದು ಹೀಗೆ : ಏಳಿಗೆ ಆಗಬೇಕಾದರೆ ಕಡ್ಡಾಯವಾದ ಮೂಲಭೂತ ಅಂಶಗಳನ್ನು ಅವರು ಕರಗತಮಾಡಿಕೊಂಡಿದ್ದಾರೆ. ಆ ಆಧಾರದ ಮೇಲೆ ಮುಂದುವರಿದಿದ್ದಾರೆ. ಅತಿರೇಕಗಳಾಗಿಲ್ಲವೆಂದಲ್ಲ; ಅವು ಬಹುಶಃ ಏಳಿಗೆಯ ಒಡನಾಡಿಯೋ ಏನೋ ? ಒಂದು ದೂರದೃಷ್ಟಿ ಇಟ್ಟುಕೊಂಡು ಅದಕ್ಕೆ ಬೇಕಾದದ್ದನ್ನೆಲ್ಲಾ ಮಾಡಲೇಬೇಕೆಂಬ ದೃಢತೆಯಿಂದ ಸಾಗಿದ್ದಾರೆ. ಅದಕ್ಕಾಗಿ ಯೋಜನೆ, ಅದರ ಪ್ರಕಾರ ಕಾರ್ಯವಿವರ, ಕಾರ್ಯದ ಗುಣಮಟ್ಟದಲ್ಲಿ ಯಾವ ರಾಜಿಯೂ ಇಲ್ಲ. ಅದರಂತೆ ಕಾರ್ಯ ನಡೆಯಲೇ ಬೇಕು, ಅದೂ ನಿರ್ದಿಷ್ಟ ಸಮಯದ ಮಿತಿಯಲ್ಲೇ. ಇದಕ್ಕೆ ಬೀಜಿಂಗ್‌ನ, ಶಾಂಘೈನ, ಅಷ್ಟೇ ಏಕೆ, ಯಿಚಾಂಗ್‌ನ ರಸ್ತೆಗಳು, ಫ್ಲೈ ಓವರ್‌ಗಳು, ಜನಸಂಚಾರಿ ವ್ಯವಸ್ಥೆಗಳು, ಕಸವಿಲ್ಲದಿರುವಂತಹ ಕಾರ್ಯಕ್ರಮ, ಪಾದಚಾರಿಗಳು ರಸ್ತೆ, ಚೌಕಗಳನ್ನು ದಾಟಲು ಕಟ್ಟಿರುವ ಸ್ಕೈವಾಕ್‌ಗಳಿಗೆ ಚರಸೋಪಾನ (escalator)ಗಳ ಅಳವಡಿಕೆ, ಪ್ರೇಕ್ಷಣೀಯ ಸ್ಥಳಗಳ ಸೌಂದರ್ಯ ಸ್ಥಿತಿಯ ಕಾಪಾಡುವಿಕೆ – ಇಂತಹ ಸರ್ವೇಸಾಮಾನ್ಯ ವಿಷಯಗಳೇ ಕಣ್ಣಿಗೆ ಕಾಣುವ ಉದಾಹರಣೆಗಳು. ಆಶ್ಚರ್ಯದ ಸಂಗತಿಯೆಂದರೆ, ಈ ಸೌಲಭ್ಯಗಳನ್ನು ಉಪಯೋಗಿಸುವ ಸಾಮಾನ್ಯ ಜನರು ಇವುಗಳ ಉಪಯೋಗದಲ್ಲಿ ಅನುಸರಿಸುವ ಕಾಳಜಿ. ಇವೆಲ್ಲ ನಾವೇ ಕಣ್ಣಾರೆ ಕಂಡಿದ್ದು. ಶಾಂಘೈನ ಒಂದು ದೊಡ್ಡ ಚೌಕ, ೫–೬ ಕಡೆಗಳಿಂದ ವಾಹನಗಳ ಸಂಚಾರ. ಅಲ್ಲಿ ಒಂದು ಚೂರೂ ಕಸದ ಕುರುಹಿಲ್ಲ. ಆದರೂ ಅಲ್ಲಿನ ಮುನಿಸಿಪಾಲಿಟಿ ಒಬ್ಬ ಕಾರ್ಯಕರ್ತೆಯನ್ನು ನೇಮಕ ಮಾಡಿದೆ. ಆಕೆ ಆ ಚೌಕದಲ್ಲಿ ಒಂದು ಚಿಂದಿ ಕಸ ಕಂಡರೆ ವಾಹನ ಸಂಚಾರವನ್ನು ನಿಭಾಯಿಸಿಕೊಂಡು ಹೋಗಿ ಆ ಕಸದ ಚೂರನ್ನು ಉದ್ದನೆಯ ಪೊರಕೆಯಿಂದ ತನ್ನಲ್ಲಿರುವ ಬುಟ್ಟಿಯೊಳಕ್ಕೆ ತಳ್ಳಿಕೊಳ್ಳುತ್ತಾಳೆ! ಇದು ಕಥೆಯಲ್ಲ, ನಾನೇ ಸುಮಾರು ಬೆಳಿಗ್ಗೆ ೭.೩೦ರ ಹೊತ್ತಿನಲ್ಲಿ ನೋಡಿದ್ದು, ಇದರ ಫೋಟೋ ಕೂಡ ನನ್ನ ಹತ್ತಿರ ಇದೆ.

ಸಾಮಾನ್ಯ ಜನಗಳ ಪಾತ್ರವೂ ಮುಖ್ಯವಾದದ್ದು. ಅವರಲ್ಲಿ ಅಸುರಕ್ಷತೆಯ ಚಿಹ್ನೆ ಕಾಣುವುದಿಲ್ಲ. ಎಲ್ಲರೂ ಆರೋಗ್ಯವಂತರಂತೆ ಇದ್ದಾರೆ. ಗೌರವ ಕೊಡುವ ಆತ್ಮವಿಶ್ವಾಸ ತರುವ ಬಟ್ಟೆಬರೆ ಧರಿಸಿರುತ್ತಾರೆ. ಉಲ್ಲಾಸ ತರುವ ಚಟುವಟಿಕೆಗಳಲ್ಲಿ ಭಾಗಿಗಳಾಗಿರುತ್ತಾರೆ. ಸಾಧ್ಯ ವಾದೆಡೆ ಬೇರೆ ಜನರೊಡನೆ ಬೆರೆಯಬಲ್ಲರು. (ಭಾಷೆಯ ತೊಂದರೆ ಇಲ್ಲದಿದ್ದರೆ ಇದು ಇನ್ನೂ ಬಲವಾಗಿರು ತ್ತಿತ್ತೇನೋ). ಯಿಚಾಂಗಿನಲ್ಲಿ ಮೂರು ಗಾರ್ಜಸ್ ಅಣೆಕಟ್ಟಿನ ಒಂದು ವಿಹಾರ ಜಾಗದಲ್ಲಿ ನಮ್ಮೊಡನೆ ಇದ್ದ ಹೆಂಗಸರು ಕಂಬಿ ಒರಗಿಕೊಂಡು ನಿಂತಿದ್ದರೆ ಒಬ್ಬೊಬ್ಬರಾಗಿ ಚೀಣಾ ಮಹಿಳೆಯರು ಇವರಲ್ಲಿಗೆ ಬಂದು ಕೈ ಕೈ ಹಿಡಿದು ಕುಣಿದಾಡಿ ಫೋಟೋ ತೆಗೆಸಿ ಕೊಂಡರು. ಅಲ್ಲಿನ ಜನರಿಗೆ ಮಕ್ಕಳೆಂದರೆ ಬಹಳ ಅಕ್ಕರೆ, ಮಮತೆ. ನಾವು ಆ ಸುಂದರ ಆರೋಗ್ಯಕರ ಮಕ್ಕಳ ಬಗ್ಗೆ ಆಸಕ್ತಿ ತೋರಿಸಿದರೆ ಸಂತೋಷ ಪಡುತ್ತಾರೆ. ಒಟ್ಟಿನಲ್ಲಿ ವಿಶ್ವಾಸಾರ್ಹ ಸಾಮಾನ್ಯ ಜನ.

ನಮ್ಮಂತೆ ಇದ್ದ ದೇಶ ಅಷ್ಟು ಮುಂದುವರಿದಿರು ವುದನ್ನು ನೋಡಿ ಸಂತೋಷ, ಗೌರವ, ಹೆಮ್ಮೆ, ಎಲ್ಲವನ್ನೂ ಅನುಭವಿಸಿದರೂ, ಸಮಕಾಲೀನವಾದ ನಮ್ಮ ಸ್ಥಿತಿಯನ್ನು ಕಂಡು ಒಂದು ರೀತಿಯ ಖೇದದಿಂದ ವಾಪಸ್ಸು ಬಂದದ್ದಾಯಿತು. ನಮ್ಮ ನಾಳೆಗಳು ಹೇಗಿರಬಹುದೆಂಬ ಕುತೂಹಲ ಕೊರೆಯುತ್ತಿದೆ.

**ವೈ. ಸೀ. ಸುಬ್ರಹ್ಮಣ್ಯ**
ನಂ. ೨೯೦/೪, ೩೪ನೇ 'ಎ' ಅಡ್ಡರಸ್ತೆ, ೯ನೇ ಮುಖ್ಯರಸ್ತೆ
೪ನೇ ಬ್ಲಾಕ್, ಜಯನಗರ, ಬೆಂಗಳೂರು – ೫೬೦ ೦೧೧



ನವಾಜ್ ಷರೀಫ್ ಸರಕಾರ ವಿರುದ್ಧ ಪ್ರದರ್ಶನ

# ಅಸ್ಥಿರತೆ ಎದುರಿಸುತ್ತಿರುವ ಪಾಕಿಸ್ತಾನ ಸರಕಾರ

**ಪಾ**ಕಿಸ್ತಾನದಲ್ಲಿ ಕೆಲ ದಿನಗಳ ಹಿಂದೆ ನವಾಜ್ ಷರೀಫ್ ಸರಕಾರದ ರಾಜೀನಾಮೆಗೆ ಒತ್ತಾಯಿಸಿ ನಡೆಯುತ್ತಿದ್ದ ಆಂದೋಳನ ಸ್ವಲ್ಪ ತಣ್ಣಗಾಗಿದೆ. ಕ್ರಿಕೆಟಿಗ, ರಾಜಕಾರಣಿ ಇಮ್ರಾನ್ ಖಾನ್ ನೇತೃತ್ವದಲ್ಲಿರುವ ಪಕ್ಷ ಹಾಗೂ ಕೆನಡಾದಿಂದ ಹಿಂದಿರುಗಿ ಬಂದ ಇಸ್ಲಾಮಿಕ್ ಗುರು ತಹೀರ್–ಉಲ್ ಖಾದ್ರಿ ಅನುಯಾಯಿಗಳು ಪ್ರಾರಂಭಿಸಿದ ಚಳವಳಿ ಒಂದು ಹಂತದಲ್ಲಿ ಅತ್ಯಂತ ಪ್ರಬಲವಾಗಿದ್ದು ಚುನಾಯಿತ ಪ್ರಜಾಪ್ರಭುತ್ವ ಸರಕಾರದ ಬುಡವನ್ನೇ ಅಲುಗಾಡಿಸುವ ಹಂತವನ್ನು ತಲಪಿತ್ತು. ಕೆಲವು ದಿನಗಳ ಕಾಲ ನಡೆದ ನಿರಂತರ ಪ್ರದರ್ಶನಕಾರರ ಮೇಲೆ ಇಸ್ಲಾಮಾಬಾದ್ ಮತ್ತು ಇತರ ಕಡೆಗಳಲ್ಲಿ ಪೊಲೀಸರು ಮತ್ತು ಸೈನಿಕರು ಕಾನೂನು ಸುವ್ಯವಸ್ಥೆ ಕಾಪಾಡಲು ಕೈಗೊಂಡ ಕಾರ್ಯಾಚರಣೆಯಲ್ಲಿ ಹಲವರು ಮೃತಪಟ್ಟರು, ನೂರಾರು ಮಂದಿ ಬಂಧನಕ್ಕೊಳಗಾದರು. ಪಾಕಿಸ್ತಾನದಲ್ಲಿ ಪ್ರಜಾಪ್ರಭುತ್ವದ ಅಸ್ಥಿರತೆಗೆ ಈ ಪ್ರದರ್ಶನಗಳು ದ್ಯೋತಕವಾಗಿದ್ದುವು. ಯಾವುದೇ ಸಮಯದಲ್ಲಿ ಸೇನೆ ಮಧ್ಯೆ ಪ್ರವೇಶಿಸಿ, ಚುನಾಯಿತ ಸರಕಾರವನ್ನು ಪದಚ್ಯುತಗೊಳಿಸುವ ಭೀತಿ ಕೂಡ ಇತ್ತು. ಅದೇ ಸಮಯದಲ್ಲಿ ಕಾಕತಾಳೀಯವೋ ಎಂಬಂತೆ ಗಡಿಪ್ರದೇಶದಲ್ಲಿ, ಮುಖ್ಯವಾಗಿ ಕಾಶ್ಮೀರದ ಗಡಿಯಲ್ಲಿ ಪಾಕಿಸ್ತಾನಿ ಸೈನಿಕರ ಅತಿಕ್ರಮಣ ಹಾಗೂ ಗುಂಡಿನ ಕಾಳಗದ ಅಬ್ಬರವೂ ಅಧಿಕಗೊಂಡಿತ್ತು. ಪ್ರಾಯಶಃ ಎಂದಿನಂತೆ ಪಾಕಿಸ್ತಾನದ ಜನರ ಗಮನ ಬೇರೆಡೆಗೆ ಸೆಳೆಯಲು ನಡೆಸಿದ ಕಿತಾಪತಿಯಾಗಿರಲೂ ಸಾಕು ಇದು.



ಪಾಕಿಸ್ತಾನದ ಪ್ರತಿಪಕ್ಷಗಳು ನವಾಜ್ ಷರೀಫ್ ಸರಕಾರದ ವಿರುದ್ಧ ನಡೆಸಿದ ಪ್ರದರ್ಶನಗಳೂ ಕೂಡ ಕ್ಷುಲ್ಲಕ ಆಪಾದನೆಗಳನ್ನು ಆಧರಿಸಿದ್ದುವು. ಭ್ರಷ್ಟಾಚಾರದ ಆರೋಪಗಳ ಜೊತೆಗೆ, ಚುನಾವಣೆಗಳಲ್ಲಿ ನಡೆದ ಅಕ್ರಮವೂ ಒಂದಾಗಿತ್ತು. ನವಾಜ್ ಷರೀಫ್ ಸರಕಾರ ಅಧಿಕಾರ ವಹಿಸಿಕೊಂಡು ಹದಿನೈದು ತಿಂಗಳಾಗಿವೆ. ಈಗ ಚುನಾವಣೆಗಳಲ್ಲಿ ಅಕ್ರಮ ನಡೆದಿದೆ, ಅದರಿಂದಾಗಿ ಸರಕಾರ ರಾಜೀನಾಮೆ ನೀಡಬೇಕು ಎಂದು ಒತ್ತಾಯಿಸಿರುವುದು ಹಾಸ್ಯಾಸ್ಪದ. ಪಾರ್ಲಿಮೆಂಟ್ ಭವನವನ್ನು ಸುತ್ತುವರಿದು ಸರಕಾರವನ್ನು ಉರುಳಿಸುವ ಪ್ರಯತ್ನವೂ ಕೂಡ ನಡೆಯಿತು. ಮಾತುಕತೆ ನಡೆಸಲು ಸರಕಾರ ಮುಂದಾದಾಗ ರಾಜೀನಾಮೆಗೆ ಪಟ್ಟುಹಿಡಿದಿದ್ದ ಇಮ್ರಾನ್ ಖಾನ್ ಮತ್ತು ಅವರ ಬೆಂಬಲಿಗರು ಆ ಪ್ರಶ್ನೆಯೇ ಇಲ್ಲ ಎಂದು ಹಿಂದೆ ಸರಿದರು. ಅನಂತರ ನಡೆದ ಮಾತುಕತೆಗಳು ವಿಫಲಗೊಂಡುವು. ನಡೆದ ಘಟನೆಗಳನ್ನು ಅವಲೋಕಿಸಿದರೆ ಏಕಾಏಕಿಯಾಗಿ ಉದ್ಭವಿಸಿದ ಈ ರಾಜಕೀಯ ಬೆಳವಣಿಗೆಗಳ ಹಿಂದೆ ಸೇನೆಯ ಕೈವಾಡ ಏನಾದರೂ ಇದೆಯೇ ಎಂಬ ಅನುಮಾನ ಸಹಜ. ಏಕೆಂದರೆ ಪಾಕಿಸ್ತಾನದ ಇತಿಹಾಸದುದ್ದಕ್ಕೂ ಸೇನೆಯ ಕೈವಾಡವೇ ಹೆಚ್ಚು. ಅರವತ್ತೇಳು ವರ್ಷಗಳಲ್ಲಿ ಹೆಚ್ಚು ಕಾಲ ಸೇನಾನಿಗಳ ಸರ್ವಾಧಿಕಾರ ಆಡಳಿತೆ ಕಂಡ ದೇಶ ಅದು. ನಾಗರಿಕ ಸರಕಾರಗಳು ಅಸ್ತಿತ್ವದಲ್ಲಿದ್ದುದು ಅಲ್ಪಕಾಲ ಮಾತ್ರ. ಪಾಕಿಸ್ತಾನದ ಆಡಳಿತ ವ್ಯವಹಾರಗಳಲ್ಲಿ ಸೇನೆಯ ಪಾತ್ರವೇ ಅಧಿಕವಾಗಿರುವುದರಿಂದ ಪ್ರಜಾಪ್ರಭುತ್ವ ಸರಕಾರದ ಅಸ್ತಿತ್ವ ಯಾವತ್ತೂ ಅಸ್ಥಿರ. ತಮ್ಮ ಮರ್ಜಿಗೆ ಅನುಸಾರವಾಗಿ ಚುನಾಯಿತ ಸರಕಾರ ನಡೆದುಕೊಳ್ಳುತ್ತಿಲ್ಲ ಎಂಬುದಾಗಿ ಸೇನಾಧಿಕಾರಿಗಳಿಗೆ ಅನ್ನಿಸಿದಾಗಲೆಲ್ಲ ವಿರೋಧ ಪಕ್ಷಗಳನ್ನು ಎತ್ತಿಕಟ್ಟಿ ಪ್ರದರ್ಶನಗಳನ್ನು ಏರ್ಪಡಿಸಿ, ಸರಕಾರವನ್ನು ಪದಚ್ಯುತಗೊಳಿಸಿ ದೀರ್ಘಕಾಲ ಸೇನಾಡಳಿತೆ ಬರುವುದು ಒಂದು ಪರಂಪರೆಯೇ ಆಗಿದೆ. ಹಾಗಾಗಿ, ಪ್ರತಿಪಕ್ಷಗಳು ಈಗ ಪ್ರಾರಂಭಿಸಿರುವ ಆಂದೋಳನದ ಹಿಂದೆಯೂ ಸೇನೆಯ ಕೈವಾಡವಿದ್ದರೆ ಅಚ್ಚರಿಪಡಬೇಕಾಗಿಲ್ಲ. ೧೯೭೭ರಲ್ಲಿ ೧೯೯೯ರಲ್ಲಿ ಚುನಾಯಿತ ಸರಕಾರಗಳನ್ನು ಪಾಕಿಸ್ತಾನಿ ಮಿಲಿಟರಿ ಪದಚ್ಯುತಗೊಳಿಸಿ ಅಧಿಕಾರ ವಹಿಸಿಕೊಂಡ ಪ್ರಕರಣಗಳು ನಮ್ಮ ಮುಂದಿವೆ. ಇಸ್ಲಾಮಾಬಾದಿನಲ್ಲಿ ಚುನಾಯಿತ ಸರಕಾರ ಸೇನೆಯ ಪೂರ್ಣ ಬೆಂಬಲವಿಲ್ಲದೆ ಅಧಿಕಾರದಲ್ಲಿ ಮುಂದುವರಿಯಲು ಸಾಧ್ಯವಿಲ್ಲ ಎನ್ನುವ ಪರಿಸ್ಥಿತಿ ಈ ದೇಶದಲ್ಲಿ ಉಂಟಾಗಿದೆ.

ಇಮ್ರಾನ್ ಖಾನ್ ಮತ್ತು ಮುಲ್ಲಾ ಖಾದ್ರಿ ಸೆಪ್ಟೆಂಬರ್ ತಿಂಗಳಲ್ಲಿ ಪ್ರಾರಂಭಿಸಿದ ನವಾಜ್ ಷರೀಫ್ ಸರಕಾರದ ವಿರುದ್ಧದ ಹೋರಾಟದ ಸಂದರ್ಭ ಕೂಡ ಸೇನೆಯ ಕೈವಾಡಕ್ಕೆ ಸೂಚಕ. ಪಾಕಿಸ್ತಾನದ ಗೂಢಚರ್ಯೆ ಸಂಸ್ಥೆ ಐ.ಎಸ್.ಐ.ನ ಮುಖ್ಯಸ್ಥನನ್ನೂ ಒಳಗೊಂಡಂತೆ ಸೇನೆಯ ಐದು ಮಂದಿ ಜನರಲ್‌ಗಳು ಸದ್ಯದಲ್ಲೇ ನಿವೃತ್ತರಾಗಲಿದ್ದಾರೆ. ಹಾಗಾಗಿ ಪ್ರದರ್ಶನಗಳ ಹಿಂದೆ ಸೇನೆಯ ಪ್ರೇರಣೆ ಇದೆ ಎಂಬುದು ಪಾಕಿಸ್ತಾನಿ ವಲಯಗಳಲ್ಲಿ ಹಬ್ಬಿರುವ ಸಂಶಯ. ನವಾಜ್ ಷರೀಫ್ ಸರಕಾರ ವಿದೇಶಾಂಗ ವ್ಯವಹಾರ ಮತ್ತು ರಾಷ್ಟ್ರೀಯ ಭದ್ರತಾ ವಿಷಯಗಳಲ್ಲಿ ಕೈಗೊಂಡ ಕೆಲ ನಿರ್ಧಾರಗಳು ಸೇನಾಧಿಕಾರಿಗಳಲ್ಲಿ ಅಸಮಾಧಾನ



ಇಮ್ರಾನ್ ಖಾನ್ | ನವಾಜ್ ಷರೀಫ್

ಉಂಟುಮಾಡಿತ್ತು. ಭಾರತದೊಂದಿಗೆ ಸಂಬಂಧಗಳ ಸುಧಾರಣೆಗೆ ಆರ್ಥಿಕ ವ್ಯವಹಾರಗಳ ವಿಸ್ತರಣೆಗೆ ನವಾಜ್ ಷರೀಫ್ ನೀಡಿದ ಒತ್ತು ಸೇನಾಧಿಕಾರಿಗಳಿಗೆ ಹಿಡಿಸಲಿಲ್ಲ. ನವಾಜ್ ಷರೀಫ್ ನರೇಂದ್ರ ಮೋದಿಯ ಪ್ರಮಾಣವಚನ ಸಮಾರಂಭದಲ್ಲಿ ಪಾಲ್ಗೊಂಡಿದ್ದುದು ಸೇನೆಯ ಅಸಮಾಧಾನಕ್ಕೆ ಒಂದು ಕಾರಣವಿರಬಹುದು. ಪಾಕಿಸ್ತಾನದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ಬೇರೂರಲು ಅವಕಾಶವೇ ಆಗಿಲ್ಲ. ನವಾಜ್ ಷರೀಫ್ ಸರಕಾರ ಪ್ರಜಾಪ್ರಭುತ್ವ ಆಡಳಿತವೊಂದರಿಂದ ಅಧಿಕಾರ ವಹಿಸಿಕೊಂಡ ಮೊದಲ ಸರಕಾರ. ಸುಮಾರು ಆರೂವರೆ ವರ್ಷಗಳಿಂದ ಪ್ರಜಾಪ್ರಭುತ್ವ ರೀತಿಯಲ್ಲಿ ಚುನಾಯಿತವಾದ ಸರಕಾರ ಅಧಿಕಾರದಲ್ಲಿದೆ. ಅದು ಎದುರಿಸುತ್ತಿರುವ ಸಮಸ್ಯೆಗಳು ಹಲವು. ಆರ್ಥಿಕ ಸಮಸ್ಯೆಗಳ ಜೊತೆಗೆ ಇಸ್ಲಾಮಿಕ್ ಮೂಲಭೂತವಾದಿಗಳ ಉಪಟಳ ಇನ್ನೊಂದು ಕಡೆ. ತಾಲಿಬಾನ್‌ಗಳ ಹಾವಳಿ, ನೆರೆಯ ಅಫ್ಘಾನಿಸ್ತಾನದ ಅಸ್ಥಿರತೆ ನಿರಂತರವಾಗಿದೆ. ಭಾರತದೊಂದಿಗೆ ಸಂಬಂಧಗಳ ಸುಧಾರಣೆ, ಗಡಿ ಸುರಕ್ಷತೆ ಹಾಗೂ ಕಾಶ್ಮೀರ ಸಮಸ್ಯೆ ಕಗ್ಗಂಟಾಗಿಯೇ ಉಳಿದಿದೆ. ಪಾಕಿಸ್ತಾನದಲ್ಲಿ ಸುಭದ್ರ ಪ್ರಜಾಪ್ರಭುತ್ವ ಸರಕಾರ ನೆಲೆಗೊಳ್ಳುವವರೆಗೆ ಈ ಸಮಸ್ಯೆಗಳಿಗೆ ಪರಿಹಾರವಿಲ್ಲ. ಸದ್ಯಕ್ಕೆ ನವಾಜ್ ಷರೀಫ್ ಸರಕಾರ ಬೀಸುವ ದೊಣ್ಣೆಯಿಂದ ತಪ್ಪಿಸಿಕೊಂಡಿರುವಂತೆ ತೋರುತ್ತಿದೆ. ಆದರೆ ಮತ್ತೆ ಇಂಥದೇ ಅಪಾಯ ಉದ್ಭವಿಸಿದರೆ ಅಚ್ಚರಿಪಡಬೇಕಾಗಿಲ್ಲ. ಅಸ್ಥಿರ ಪಾಕಿಸ್ತಾನ ಯಾವತ್ತೂ ಭಾರತಕ್ಕೆ ಅಪಾಯಕಾರಿಯೆ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫




ಸಂದರ್ಶನ ಲೇಖನ

**ಎಂ. ಆರ್. ಕಮಲ**



# ಮಾಯಾರಾವ್ ಬದುಕು–ನಡಿಗೆ

ಕರ್ನಾಟಕದ ಸಾಂಸ್ಕೃತಿಕ ಲೋಕದಲ್ಲಿ ಶ್ರೀಮತಿ ಮಾಯಾರಾವ್ ಅವರದು ಬಹಳ ದೊಡ್ಡ ಹೆಸರು. ದೇಶ-ವಿದೇಶಗಳಲ್ಲಿ ಅವರು ನೀಡಿರುವ ಪ್ರದರ್ಶನಗಳೆಲ್ಲವೂ ಅನನ್ಯವೇ. "ಹೆಣ್ಣಾಗಿ ಹುಟ್ಟಿದ್ದು ಎಂದೂ ಬೇಸರ ತರಲಿಲ್ಲ"ವೆಂದು ಗಟ್ಟಿಯಾಗಿ ಹೇಳುವ ಮಾಯಾ ಅವರು ಎದುರಿಸಿದ ಅಡಚಣೆಗಳು ಮತ್ತು ಸವಾಲುಗಳು ಅವರನ್ನೆಂದೂ ಕಂಗಾಲಾಗಿಸಲಿಲ್ಲ. ರಷ್ಯದಲ್ಲಿ ಮೂರು ವರ್ಷ ಉನ್ನತ ತರಬೇತಿ ಪಡೆದ ಇವರು ಹೇಳುತ್ತಾರೆ : "ಬೇರೆಡೆ ನೃತ್ಯ ಕಲಿಸುವುದೆಂದರೆ ಏನನ್ನೋ ಹೇಳಿಕೊಡುವುದೆಂಬುದು ಪ್ರಮುಖವಾಗಿರುತ್ತದೆ. ರಷ್ಯದಲ್ಲಿ ಹಾಗಲ್ಲ. ಅಲ್ಲಿ ನನ್ನಲ್ಲಿರುವ ಪ್ರತಿಭೆ ಮತ್ತು ಕ್ರಿಯಾವಂತಿಕೆಯನ್ನು ಹೊರಗೆಳೆಯುವುದು ಶಿಕ್ಷಣದ ಉದ್ದೇಶವಾಗಿತ್ತು." ತಮ್ಮ ಶಿಷ್ಯರಿಂದ ಶ್ರೀಮತಿ ಮಾಯಾರಾವ್ ಅವರು ಕಲಾಪ್ರತಿಭೆಯನ್ನು ವಿಪುಲವಾಗಿ ಹೊರಹೊಮ್ಮಿಸಿದ್ದಾರೆ ಮತ್ತು ಅದಕ್ಕೂ ಅಧಿಕವಾಗಿ ತುಂಬಿಸಿಕೊಟ್ಟಿದ್ದಾರೆ. ಇತ್ತೀಚೆಗೆ ತಮ್ಮ ೮೮ನೇ ವಯಸ್ಸಿನಲ್ಲಿ ನಿಧನಹೊಂದಿದ ಶ್ರೀಮತಿ ಮಾಯಾರಾವ್ ಅವರಿಗೆ 'ಹೊಸತು' ನಮನ ಸಲ್ಲಿಸುತ್ತದೆ. ಈ ಸಂದರ್ಭದಲ್ಲಿ ಅವರು 'ಹೊಸತು'ಗೆ ನೀಡಿದ ಸಂದರ್ಶನದ ಕೆಲ ಭಾಗಗಳನ್ನು ಪ್ರಕಟಿಸುತ್ತಿದ್ದೇವೆ.

- *ಸಂ.*

**ಹೊಸತು :** ನೃತ್ಯ ಒಲಿದು ಬಂದಿದ್ದು ಹೇಗೆ, ಅದಕ್ಕೆ ಏನಾದರೂ ಪ್ರೇರಣೆ, ಸಿದ್ಧತೆ ಇತ್ತೆ? ಅದೂ ನಾಟ್ಯ ಕಲೆಯ ಕುರಿತು ಅಷ್ಟಾಗಿ ಸಾಮಾಜಿಕ ಮನ್ನಣೆ ಇರದ ಕಾಲದಲ್ಲಿ?

**ಮಾಯಾರಾವ್ :** ಕಲಿಯುವಾಗ ನಾನು ಇಷ್ಟೆಲ್ಲ ಯೋಚನೆ ಮಾಡಲೇ ಇಲ್ಲ. ನೃತ್ಯ ಕಲೀಬೇಕು ಅನ್ನೋ ತೀವ್ರವಾದ ಆಸೆ ಇತ್ತು, ಅಷ್ಟೆ. ಎಷ್ಟೋ ಜನ ನೀವು ದೊಡ್ಡ ಕ್ರಾಂತಿಕಾರಿ, ಬಂಡಾಯ ಮನೋಧರ್ಮದವರು ಅಂತೆಲ್ಲ ಹೇಳ್ತಾರೆ. ಆ ವಯಸ್ಸಲ್ಲಿ ಕಲೀಬೇಕು ಅನ್ನೋದು ಬಿಟ್ಟು ಬೇರೆ ಏನೂ ಗೊತ್ತಾಗಿರಲಿಲ್ಲ. ನೃತ್ಯ ಕಲಿತು ಪ್ರದರ್ಶನ ಮಾಡೋದು ಅಷ್ಟು ಸುಲಭವಾಗಿರಲಿಲ್ಲ ಅನ್ನೋದು ನಿಜ. ಆದರೆ ಸಂಗೀತ ಕಲಿಯೋದಕ್ಕೆ ಅಡ್ಡಿ ಇರಲಿಲ್ಲ. ನನಗೆ ಸಂಗೀತ ಇಷ್ಟ ಇರಲಿಲ್ಲ. ಆ ವಯಸ್ಸೇ ವಿಚಿತ್ರ ನೋಡಿ. ಗುರುಗಳು ಇಷ್ಟವಾಗದೆ ಇದ್ರೆ ಕಲಿಯೋ ವಿಷಯಾನೂ ಇಷ್ಟವಾಗೋಲ್ಲ. ನಾನು ಚೆನ್ನಾಗಿಯೇ ಹಾಡ್ತಿದ್ದೆ. ದಿಲ್‌ರುಬಾ ಸಹ ನುಡಿಸ್ತಿದ್ದೆ. ಆದರೂ ಅದ್ಯಾಕೋ ಸಂಗೀತದ ಬಗ್ಗೆ ನನಗೆ ಒಲವು ಮೂಡಲೇ ಇಲ್ಲ.

**ಹೊಸತು :** ನಿಮ್ಮ ಆಸಕ್ತಿಗೆ ಪೋಷಕರ ಸಹಕಾರ ಹೇಗಿತ್ತು? ಸ್ವಲ್ಪ ನಿಮ್ಮ ಕುಟುಂಬದ ಹಿನ್ನೆಲೆ ಹೇಳ್ತೀರ?

**ಮಾಯಾ :** ನನ್ನ ತಂದೆ ಸಂಜೀವ ರಾವ್. ಅವರು ಸಿವಿಲ್ ಇಂಜಿನಿಯರ್. ತಾಯಿ ಲಲಿತಾಬಾಯಿ ಗೃಹಿಣಿ. ನಾವು ಆರು ಜನ ಮಕ್ಕಳು. ಉದಯಶಂಕರ್ ಅವರ ನೃತ್ಯವೇ ನೃತ್ಯ ಕಲಿಕೆಗೆ ಸ್ಫೂರ್ತಿ ನೀಡಿದ್ದು. ಆಗಿನ ಪ್ರಖ್ಯಾತ ನೃತ್ಯ ಕಲಾವಿದ ಶ್ರೀ ರಾಮ್‌ಗೋಪಾಲ್ ಅವರ ತಂಡದಲ್ಲಿ ಕಥಕ್ ನೃತ್ಯ ಕಲಾವಿದ ಸೋಹನ್‌ಲಾಲ್ ಇದ್ದರು. ರಾಮ್‌ಗೋಪಾಲ್ ಕಥಕ್, ಕಥಕ್ಕಳಿ, ಭರತನಾಟ್ಯ ಎಲ್ಲ ಮಾಡ್ತಿದ್ರು. ಸೋಹನ್‌ಲಾಲ್ ಅವರು ನನ್ನ ತಂಗಿಯರಾದ ಚಿತ್ರಾ ಮತ್ತು ಉಮಾಗೆ ನೃತ್ಯ ಪಾಠ ಪ್ರಾರಂಭಿಸಿದ್ದರು. ಅವರ ವಯಸ್ಸು ಅದಕ್ಕೆ ಸೂಕ್ತವಾಗಿತ್ತು. ಒಬ್ಬಳಿಗೆ ೪, ಮತ್ತೊಬ್ಬಳಿಗೆ ೬ ವರ್ಷ. ನನಗಾಗ ೧೪ ವರ್ಷ. ನಾನು ಸಾರ್ವಜನಿಕವಾಗಿ ನೃತ್ಯ ಮಾಡೋದಿಲ್ಲ ಅಂತ ನನ್ನ ತಂದೆಗೆ ಭಾಷೆ ಕೊಟ್ಟಿದ್ದರಿಂದ ಕಲಿಯೋದಕ್ಕೆ ಅನುಮತಿ ಸಿಕ್ಕಿತ್ತು. ಆದರೆ ಅವರಿಗೆ ಕೊಟ್ಟ ಮಾತನ್ನು ನಾನು ಉಳಿಸಿಕೊಳ್ಳಲಿಲ್ಲ. ನನಗೆ ಭರತನಾಟ್ಯ ಕಲಿಯೋದಕ್ಕೆ ಇಷ್ಟ ಇರಲಿಲ್ಲ. ೧೯೪೨ರಲ್ಲಿ ಗುರು ಸೋಹನ್‌ಲಾಲ್ ಅವರ ಬಳಿ ಅತ್ಯಂತ ಗಂಭೀರವಾಗಿ ಕಥಕ್ ಕಲಿಯೋದಕ್ಕೆ ಶುರುಮಾಡಿದೆ. ಎರಡು ವರ್ಷ ಕಲಿತಿರಬಹುದು. ಆಮೇಲೆ ನಮ್ಮ ಗುರುಗಳು ಉದಯಶಂಕರ್ ಅವರಿಂದ ಪ್ರೇರೇಪಿತರಾಗಿ ಸಿನಿಮಾ ಮಾಡೋದಕ್ಕೆ ಅಂತ ಮುಂಬಯಿಗೆ ಹೊರಟುಹೋದರು.

**ಹೊಸತು :** ನೀವು ನಟರಾಜ್ ಅವರನ್ನು ಮದುವೆ ಮಾಡಿಕೊಳ್ಳುವುದಕ್ಕೆ ಅಷ್ಟು ದಿನ ಯಾಕೆ ಕಾಯಬೇಕಾಯ್ತು?

**ಮಾಯಾ :** ನನಗೆ ಎಷ್ಟು ಕಲಿತರೂ ಮತ್ತಷ್ಟು ಕಲೀಬೇಕು ಅನ್ನುವ ಹುಚ್ಚು. ನಾನು ದೆಹಲಿಯಲ್ಲಿದ್ದೆ. ಅವರು ಬೆಂಗಳೂರಿನಲ್ಲಿದ್ದರು. ಅಕಾಡೆಮಿ, ಚಳವಳಿ ಇತ್ಯಾದಿಗಳಲ್ಲಿ ಮುಳುಗಿಹೋಗಿದ್ದರು. ಇನ್ನೊಂದು ಕಾರಣ : ನಾವು ಸಾರಸ್ವತ ಬ್ರಾಹ್ಮಣರು, ಕೊಂಕಣಿ ಮನೆ ಮಾತು. ನಟರಾಜ್ ಅವರು ಅಯ್ಯರ್. ಜೊತೆಗೆ ನನ್ನ ತಂದೆ ಸತ್ತಮೇಲೆ ನಮ್ಮ ಆರ್ಥಿಕ ಪರಿಸ್ಥಿತಿ ಅಷ್ಟು ಚೆನ್ನಾಗಿರಲಿಲ್ಲ. ನಮ್ಮ ಅಮ್ಮನಿಗೆ ನನ್ನ ತಂಗಿಯರಿಗೆ ಗಂಡು ಸಿಗುತ್ತೋ ಇಲ್ಲವೋ ಅನ್ನುವ ಭಯ ಬೇರೆ ಇತ್ತು.



ರಾಷ್ಟ್ರಪತಿ ಆರ್. ವೆಂಕಟರಾಮನ್ ಅವರಿಂದ ಅಕಾಡೆಮಿ ಪ್ರಶಸ್ತಿ ಸ್ವೀಕರಿಸುತ್ತಿರುವ ಮಾಯಾರಾವ್

**ಹೊಸತು :** ಆ ವಯಸ್ಸಿನಲ್ಲಿಯೇ ನೃತ್ಯ–ನಾಟಕಗಳ ಸಂಯೋಜನೆಯ ಬಗ್ಗೆ ಆಸಕ್ತಿ ಬೆಳೆದಿದ್ದು ಹೇಗೆ ?

**ಮಾಯಾ :** ಅದೂ ಒಂದು 'ಫ್ಯಾಷನ್' ಅನ್ನಬಹುದು. ಇಂಗ್ಲಿಷ್ ಆನರ್ಸ್ ವಿದ್ಯಾರ್ಥಿಯಾಗಿದ್ದ ನನಗೆ ಕಾವ್ಯ, ನಾಟಕಗಳ ಬಗ್ಗೆ ತೀವ್ರವಾದ ಆಸಕ್ತಿಯಿತ್ತು, ಹೀಗಾಗಿ ವಸ್ತುಗಳನ್ನು ಸುಲಭವಾಗಿ ಆರಿಸಿಕೊಳ್ತಿದ್ದೆ.

**ಹೊಸತು :** ನಿಮಗೆ ಶಂಭು ಮಹಾರಾಜರಂತಹ ಹಿರಿಯ ಗುರುಗಳ ಮಾರ್ಗದರ್ಶನ ದೊರೆತಿದ್ದು ಹೇಗೆ ?

**ಮಾಯಾ :** ಜೈಪುರದ ಪ್ರಸಿದ್ಧವಾದ 'ಮಹಾರಾಣಿ ಗಾಯತ್ರಿ ದೇವಿ ಶಾಲೆ'ಯಲ್ಲಿ ನನಗೆ ಇಂಗ್ಲಿಷ್ ಶಿಕ್ಷಕಿ ಕೆಲಸ ೧೯೫೧ರಲ್ಲಿ ಸಿಕ್ತು. ಈ ಅವಕಾಶವನ್ನು ಉಪಯೋಗಿಸಿಕೊಂಡು ಜೈಪುರದಲ್ಲಿ ಕಥಕ್ ಕಲೀಬೇಕು ಅನ್ನುವುದು ನನ್ನ ಉದ್ದೇಶವಾಗಿತ್ತು. ಅಷ್ಟು ಹೊತ್ತಿಗೆ ದೊಡ್ಡ ಗುರುಗಳೆಲ್ಲ ಜೈಪುರವನ್ನು ಬಿಟ್ಟು ಹೊರಟುಹೋಗಿದ್ದರಿಂದ ಒಂದೆರಡು ವರ್ಷ ಬ್ರಹ್ಮಾನಂದ ಗೋಸ್ವಾಮಿ ಸಂಸ್ಥೆಯಲ್ಲಿ ಕಥಕ್ ಕಲಿತೆ. ದೆಹಲಿಯಲ್ಲಿ ಕಥಕ್ ಕಲಿಯುವುದಕ್ಕೆ ವಿದ್ಯಾರ್ಥಿ ವೇತನ ಕೊಡ್ತಾರೆ ಅಂತ ನನ್ನ ಸೋದರ ಸಂಬಂಧಿಯಿಂದ ತಿಳಿದು ಅರ್ಜಿ ಹಾಕಿದೆ. ಇಂಗ್ಲಿಷ್ ಶಿಕ್ಷಕ ವೃತ್ತಿ ಸ್ವಲ್ಪ ಬೇಸರವಾಗಿತ್ತು. ಶ್ರೀಲಂಕಾದಲ್ಲಿದ್ದ ನನ್ನ ಸೋದರ ನನ್ನನ್ನು ಆಹ್ವಾನಿಸಿದ್ದರಿಂದ ಅಲ್ಲಿಗೆ ಹೋಗಿ ಚಿತ್ರಸೇನಾ ಅವರಿಂದ ಕ್ಯಾಂಡಿಯನ್ ನೃತ್ಯವನ್ನು ಕಲಿತೆ. ಸಂದರ್ಶನಕ್ಕೆ ಕೇವಲ ಮೂರು ದಿನ ಇದೆ ಎನ್ನುವಾಗ ನನಗೆ ದೆಹಲಿಯಿಂದ ಕರೆ ಬಂದಿದೆ ಅನ್ನುವ ವಿಷಯ ಗೊತ್ತಾಯ್ತು. ಕೊನೆಗೆ ಅಣ್ಣ ನನ್ನ ತೊಳಲಾಟ ನೋಡಿ ವಿಮಾನದಲ್ಲಿ ನನ್ನನ್ನು ಕಳಿಸಿದರು. ದಕ್ಷಿಣ ಭಾರತದಿಂದ ಬಂದವಳು ನಾನೊಬ್ಬಳೇ ! ಉಳಿದವರೆಲ್ಲ ಗುರುಗಳು, ತಬಲಾ ಸಮೇತ ಒಳ್ಳೇ ಸಿದ್ಧತೆ ಮಾಡಿಕೊಂಡು ಬಂದಿದ್ದರು. ನನಗೆ ಆತಂಕವಾಗಿತ್ತು. ಹಲವಾರು ಬ್ಯಾಲೆಗಳಿಗೆ ನೃತ್ಯ ಸಂಯೋಜನೆ ನಾನು ಮಾಡಿದ್ದು ಸಂದರ್ಶಕರ ಗಮನ ಸೆಳೆಯಿತು. ನೃತ್ಯವನ್ನು ಚೆನ್ನಾಗೇ ಮಾಡಿ ತೋರಿಸಿದೆ. ಹೀಗೆ ನನಗೆ ವಿದ್ಯಾರ್ಥಿ ವೇತನ ಸಿಕ್ಕಿ ಶಂಭು ಮಹಾರಾಜರ ಶಿಷ್ಯಳಾದೆ.

**ಹೊಸತು :** ಕಥಕ್ ವೈಶಿಷ್ಟ್ಯಗಳೇನು ?

**ಮಾಯಾ :** ಕಥೆ ಹೇಳುವವನೇ ಕಥಕ. ನೃತ್ಯ ಶೈಲಿಯಲ್ಲಿ ಕಥೆ ಹೇಳೋದು. ಹಿಂದೆ ದೇವಸ್ಥಾನಗಳಲ್ಲಿ ಪುರಾಣವನ್ನು ಹೇಳುವಾಗ ನೃತ್ಯದ ಮುದ್ರೆಗಳನ್ನು ಉಪಯೋಗಿಸ್ತಿದ್ರು. ಅಂಥವರ ಒಂದು ಪುಟ್ಟ ಗುಂಪು ಇತ್ತು. ಮೊಗಲರ ಆಕ್ರಮಣದ ಸಮಯದಲ್ಲಿ ಇವರೆಲ್ಲ ಭೂಗತರಾಗಿದ್ದರು. ಉದಾರ ಮನೋಭಾವದ ದೊರೆಗಳು ಬಂದಾಗ ತಂತ್ರ, ಪದಚಲನೆ ಎಲ್ಲವನ್ನು ಹಾಗೇ ಇಟ್ಟುಕೊಂಡು ಶೈಲಿಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸ ಮಾಡಿಕೊಂಡು ಪ್ರದರ್ಶನ ಮಾಡ್ತಿದ್ದರು. ಮೂಲ ಅದೇ. ಕೃಷ್ಣ, ರಾಧೆಯ ಮುದ್ರೆ ಕಥಕ್‌ನಲ್ಲಿದೆ ಅಂತ ನಮ್ಮ ಗುರುಗಳು ಹೇಳ್ತಿದ್ರು. ದೇವಸ್ಥಾನಗಳ ಮೇಲೆ ಆಕ್ರಮಣ ಮಾಡಿದಾಗ ಈ ಕಲಾವಿದರು ಎಲ್ಲೋ ಬಚ್ಚಿಟ್ಟುಕೊಂಡಿದ್ದರು. ಅಕಬರ್‌ನ ಸಮಯದ ತನಕ ಕಾದು ಹೊರಬಂದರು. ಶಹಜಹಾನ್, ಜಹಾಂಗೀರ್ ಅವರು ಸ್ವಲ್ಪ ಉದಾರ ಮನೋಭಾವದವರು. ಈ ಕಲಾವಿದರು 'ತತ್ಕಾರ್' ಮತ್ತು 'ಚಕ್ಕರ್'ನ ತೋರಿಸುತ್ತಿದ್ದರು. ಅದಕ್ಕೆ ಕಾರಣ ಇತ್ತು. ಆದರೆ ಜನರು ಕಥಕ್‌ನಲ್ಲಿ ಅಭಿನಯ ಇಲ್ಲ ಅಂದುಬಿಡ್ತಾರೆ. ಅಭಿನಯಕ್ಕೆ ತುಂಬಾ ಪ್ರಾಮುಖ್ಯತೆ ಇದೆ. ತತ್ಕಾರ್, ಚಕ್ಕರ್‌ಗಳೆಲ್ಲ ಹೆಚ್ಚು ಚಪ್ಪಾಳೆಗಾಗಿ ಅಂತ ಗುರುಗಳು ಹೇಳ್ತಿದ್ರು.

**ಹೊಸತು :** ನೀವು ಜಾನಪದದ ವಸ್ತುಗಳನ್ನು ತಗೊಂಡು ಸಂಯೋಜನೆ ಮಾಡಿದ್ದೀರಿ ಅಲ್ವಾ ? ಅದನ್ನು ಕಥಕ್‌ನಲ್ಲಿ ಹೇಗೆ ನಿಭಾಯಿಸ್ತೀರಾ ?

**ಮಾಯಾ :** ಜಾನಪದ ಲೋಕದ ಡಾ॥ ಎಚ್. ಎಲ್. ನಾಗೇಗೌಡರಿಗಾಗಿ ನಾನು 'ಅರ್ಜುನ್ ಜೋಗಿ' ಮಾಡಿದ್ದೆ. ಅವರೇ ಸಾಹಿತ್ಯ ಕೊಟ್ಟಿದ್ದರು. ನಾನು ಅದರಲ್ಲಿ ಯಕ್ಷಗಾನ, ಮಣಿಪುರಿ, ಒಡಿಸ್ಸಿ ಎಲ್ಲಾ ಸೇರಿಸಿದ್ದೆ. ಅರ್ಜುನ ತೀರ್ಥಯಾತ್ರೆಗೆ ಹೋಗ್ತಾನಲ್ಲಾ, ಮಣಿಪುರಕ್ಕೆ ಹೋದಾಗ ಮಣಿಪುರಿ, ಆಂಧ್ರಕ್ಕೆ ಹೋದಾಗ ಒಡಿಸ್ಸಿ... ಹೀಗೆ. ನಾನು ಭರತನಾಟ್ಯವನ್ನಾಗಲಿ, ಯಕ್ಷಗಾನವನ್ನಾಗಲಿ ತೋರಿಸುವಾಗ ಆ ಪ್ರಕಾರವನ್ನು ಹೇಗೆ ತೋರಿಸಬೇಕೋ ಹಾಗೇ ತೋರಿಸಿದ್ದೀನಿ. ಯಕ್ಷಗಾನ ಶೈಲಿಯಲ್ಲಿ 'ಹೊಯ್ಸಳ ವೈಭವ' ಅಂತ ಮಾಡಿದ್ದೆ. ವಿಷ್ಣುವರ್ಧನನ ಒಡ್ಡೋಲಗವೇ ಮೊದಲ ದೃಶ್ಯ. ಅಲ್ಲಿರುವ ಶಿಲ್ಪಕಲೆಯನ್ನು ಅಧ್ಯಯನ ಮಾಡಿಯೇ ಕಿರೀಟ ಮುಂತಾದವನ್ನೆಲ್ಲ ಮಾಡಿಸಿದ್ದೆವು. 'ಹೊಯ್ಸಳ ವೈಭವ' ಮಾಡಿದಾಗ ಭರತನಾಟ್ಯದ ಭಾಗವನ್ನು ಹೇಳಿಕೊಡುವುದಕ್ಕೆ ಮೈಸೂರು ಶೈಲಿ ಭರತನಾಟ್ಯ ಗುರುಗಳಾದ ರಾಧಾಕೃಷ್ಣ ಅವರನ್ನೇ ದೆಹಲಿಗೆ ಕರೆಸಿದ್ದೆ. ಹಾಗಾಗಿ ಕಷ್ಟವಾಗಲಿಲ್ಲ.

**ಹೊಸತು :** ಸಾಮಾಜಿಕ ವಸ್ತುಗಳನ್ನು ಅಳವಡಿಸಿಕೊಂಡು ಯಾವ ಪ್ರಯೋಗ ಮಾಡಿದ್ದೀರಿ ?

**ಮಾಯಾ :** ನೃತ್ಯದಲ್ಲಿ 'ನಾಟ್ಯಧರ್ಮಿ' ಮತ್ತು 'ಲೋಕಧರ್ಮಿ' ಅಂತ ಇದೆ. ಲೋಕಧರ್ಮಿಯಲ್ಲಿ ಕಟು ವಾಸ್ತವ ಲೋಕವನ್ನು ತೋರಿಸುವುದಕ್ಕೆ ಅವಕಾಶ ಇದೆ. ನಾನು 'ವಧು ದಹನ್' ಅಂತ ವರದಕ್ಷಿಣೆಯ ಬಗ್ಗೆ ಮಾಡಿಸಿದ್ದೆ. ನಾವೀಗ ನಮ್ಮ ಶಾಲೆಯಲ್ಲಿ ಪ್ರತೀ ವಿದ್ಯಾರ್ಥಿಗೂ ಒಂದೊಂದು 'ಕೇಸ್ ಸ್ಟಡಿ' ಮಾಡೋದಕ್ಕೆ ಕೊಡ್ತೀವಿ. ಇತ್ತೀಚೆಗೆ ನಮ್ಮ ವಿದ್ಯಾರ್ಥಿಗಳು 'ಸಲಿಂಗಕಾಮ'ದ ಬಗ್ಗೆಯೂ ನೃತ್ಯ–ನಾಟಕ ಮಾಡಿದ್ರು. ಈಗ 'ಮೌಲ್ಯಯುತ ಶಿಕ್ಷಣ'ದ ಬಗ್ಗೆ ಚರ್ಚೆ ನಡೀತಾ ಇದೆ. ನಾವು ಶಾಲಾ–ಕಾಲೇಜಿನ ಹುಡುಗರಿಗೆ ತೋರಿಸಬೇಕು ಅಂತ 'ಸಾರೇ ಜಹಾಂ ಸೇ' ಮಾಡಿದ್ದೀವಿ. ರಾಕೇಶ್ ಶರ್ಮ ಬಾಹ್ಯಾಕಾಶದಿಂದ ಶ್ರೀಮತಿ ಇಂದಿರಾಗಾಂಧಿಯವರೊಂದಿಗೆ ಮಾತನಾಡಿದ್ದನ್ನು ಹಾಗೇ ಉಪಯೋಗಿಸಿಕೊಂಡಿದ್ದೇವೆ.

**ಹೊಸತು :** ಯಾವುದಾದರೂ ಕನ್ನಡ ಸಾಹಿತ್ಯ ಕೃತಿಯನ್ನು ತೆಗೆದುಕೊಂಡು ಸಂಯೋಜನೆ ಮಾಡಿದ ಅನುಭವವನ್ನು ಹೇಳಿ.

**ಮಾಯಾ :** ಅ.ನ.ಕೃ. ಅವರ 'ಜಗಜ್ಯೋತಿ ಬಸವೇಶ್ವರ' ಮಾಡಿದ್ದೇನೆ ಮತ್ತು ಕುವೆಂಪು ಅವರ 'ಶ್ರೀ ರಾಮಾಯಣ ದರ್ಶನಂ'ನ ಕೆಲವು ಭಾಗಗಳು.

**ಹೊಸತು :** ನೀವು ಕಲಿತಿದ್ದಕ್ಕೂ ಮತ್ತು ನಿಮ್ಮ ಶಿಷ್ಯರಿಗೆ ನೀವು ನೀಡುತ್ತಿರುವ ಶಿಕ್ಷಣಕ್ಕೂ ವ್ಯತ್ಯಾಸ ಏನು ?

**ಮಾಯಾ :** ನಾನು ರಷ್ಯದಲ್ಲಿ ಇದ್ದಾಗ ಕಲಿತಿದ್ದು ಏನೆಂದರೆ ಯಾವುದನ್ನೂ ನಾವು ನಕಲು ಮಾಡಬಾರದು ಎಂದು. ಅಮೆರಿಕನ್ನರು, ಯುರೋಪಿಯನ್ನರು ನಕಲು ಮಾಡುವುದನ್ನು ಇಷ್ಟಪಡ್ತಾರೆ. ಆದರೆ ರಷ್ಯನ್ನರಿಗೆ ಪ್ರತಿಯೊಬ್ಬರಲ್ಲೂ ಇರುವ ಸತ್ವವನ್ನು ಹೊರತೆಗೆಯುವುದೇ ನಿಜವಾದ ಕಲಿಕೆ. ವಿದ್ಯಾರ್ಥಿಗಳಿಗೆ ಅಂತಹ ವಾತಾವರಣವನ್ನು ಮೂಡಿಸುವುದಕ್ಕೆ ನಾನು ಪ್ರಯತ್ನಪಡ್ತೀನಿ.

**ಹೊಸತು :** ರಾಜ್ಯದಲ್ಲಿ ಸಾಂಸ್ಕೃತಿಕ ಉತ್ಸವಗಳು ನಡೀತಿವೆ. ಹಂಪಿ ಉತ್ಸವ, ಹೊಯ್ಸಳ ಉತ್ಸವ ಇತ್ಯಾದಿ... ಇದರ ಅವಶ್ಯಕತೆ ಎಷ್ಟರಮಟ್ಟಿಗಿದೆ ?

**ಮಾಯಾ :** ಉತ್ಸವಗಳು ಇರಬೇಕು. ಸಂಗೀತ–ನೃತ್ಯ ಅಕಾಡೆಮಿ ಅಧ್ಯಕ್ಷೆಯಾಗಿದ್ದಾಗ ನಾನೇ ಪಟ್ಟದಕಲ್ಲಿನಲ್ಲಿ ಉತ್ಸವ ಶುರು ಮಾಡಿದ್ದು. ಈ ಉತ್ಸವಗಳು ನಮಗೂ ಒಂದು ಬಗೆಯಲ್ಲಿ ಶಿಕ್ಷಣ ನೀಡುತ್ತವೆ. ಅಲ್ಲಿನ ಶಿಲ್ಪಕಲೆಯ ಬಗ್ಗೆ ತಿಳಿದುಕೊಳ್ಳಬಹುದು.

**ಹೊಸತು :** ಸಿನಿಮಾದಲ್ಲಿ ಕೆಲಸ ಮಾಡಲು ನೀವು ಹೋಗಲಿಲ್ವಾ ?

**ಮಾಯಾ :** ನಮ್ಮ 'ಹೊಯ್ಸಳ ವೈಭವ'ವನ್ನು ನೋಡಿದ ಮರುದಿನ ಗಿರೀಶ್ ಕಾರ್ನಾಡ್ ಅವರು ತಮ್ಮ ಸಾಕ್ಷ್ಯಚಿತ್ರಕ್ಕೆ ನೃತ್ಯ ಸಂಯೋಜನೆ ಮಾಡಿಕೊಡಲು ಕೇಳಿದ್ದರು. ಆದರೆ ಹಳ್ಳಿಯ ಪಾತ್ರಧಾರಿಗಳೇ ಬೇಕು ಎಂದುದರಿಂದ ಮಾಡಲಿಲ್ಲ. ಜೊತೆಗೆ ನನಗೆ ಸಿನಿಮಾದ ಬಗ್ಗೆ ಅಷ್ಟೇನೂ ಒಲವಿಲ್ಲ.

*(೨೦೧೦ರ 'ಹೊಸತು' ವಿಶೇಷ ಸಂಚಿಕೆಯಲ್ಲಿ ಪ್ರಕಟವಾದದ್ದು)*

ಸಂದರ್ಶನ ಲೇಖನ : ಎಂ. ಆರ್. ಕಮಲ
ನಂ. ೪೦೫, 'ಉಮಾಶಂಕರ', ೧ನೇ 'ಎನ್' ಬ್ಲಾಕ್
೧೯ನೇ 'ಜಿ' ಮುಖ್ಯರಸ್ತೆ, ರಾಜಾಜಿನಗರ, ಬೆಂಗಳೂರು – ೫೬೦ ೦೧೦

ಥಲಿಡೋಮೈಡ್ ತಂದ ದುರಂತದಿಂದ ಕಲಿಯಲೇಬೇಕಾಗಿ ಬಂದ ಪಾಠಗಳೆಂದರೆ ಔಷಧಗಳ ಸಂಶೋಧನೆ, ತಯಾರಿಕೆ ಮತ್ತು ಬಳಕೆಗೆ ಸಂಬಂಧಿಸಿದಂತೆ ವೈಜ್ಞಾನಿಕ ಮುನ್ನೆಚ್ಚರಿಕೆಗಳನ್ನು ತೆಗೆದುಕೊಳ್ಳುವ ಸಲುವಾಗಿ ಕಠಿಣ ಆರೋಗ್ಯ ಕಾಯಿದೆಗಳು ಮತ್ತು ಕಾನೂನು ಕ್ರಮಗಳನ್ನು ರೂಪಿಸುವ ಒತ್ತಡಕ್ಕೆ ಸರ್ಕಾರಗಳು ಒಳಗಾದುದು. ಆದರೆ ತೊಂಬತ್ತರ ದಶಕದಲ್ಲಿ ಮೇಲುಗೈ ಸಾಧಿಸಿದ ಆರ್ಥಿಕ ಉದಾರೀಕರಣ ನೀತಿಗಳು ಆದ್ಯತೆಗಳನ್ನು ರೋಗಿಗಳ ಸುರಕ್ಷತೆಯಿಂದ ಕಂಪೆನಿಗಳ ಲಾಭದ ಹಸಿವು ತಣಿಸುವ ದಿಕ್ಕಿಗೆ ಪಲ್ಲಟಗೊಳಿಸಿದ ಮೇಲೆ ಔಷಧ ಕಂಪೆನಿಗಳು ಅನುಸರಿಸಬಹುದಾದ ಸುರಕ್ಷತಾ ಕ್ರಮಗಳ ಕುರಿತು ಒಂದು ಅನುಮಾನ ಸದಾ ಇದ್ದೇ ಇರುತ್ತದೆ. ಮೇಲಾಗಿ ಸರ್ಕಾರಗಳ ತುಷ್ಟೀಕರಣದಿಂದ ಕಂಪೆನಿಗಳು ಅದೆಷ್ಟು ಬಲಿತುಹೋಗಿವೆಯೆಂದರೆ ಚುನಾಯಿತ ಸರ್ಕಾರಗಳನ್ನು ತಮಗಿಷ್ಟ ಬಂದಂತೆ ಒಗ್ಗಿಸಿಕೊಳ್ಳಬಲ್ಲವು, ತಮ್ಮ ಮೂಗಿನ ನೇರಕ್ಕೆ ಬಗ್ಗಿಸಿಕೊಳ್ಳಬಲ್ಲವು. ಅಮೆರಿಕಾದ ಉದಾಹರಣೆಯನ್ನೇ ತೆಗೆದುಕೊಳ್ಳಿ. ಐದು ವರ್ಷಗಳ ಕಾಲ (೧೯೫೭-೧೯೬೨) ಜಗತ್ತಿನೆಲ್ಲೆಡೆ ಥಲಿಡೋಮೈಡ್ ವಿಜೃಂಭಿಸುತ್ತಿದ್ದಾಗ ತನ್ನ ದೇಶದಲ್ಲಿ ಅದರ ಬಳಕೆಯನ್ನು ಅಮೆರಿಕಾ ಯಶಸ್ವಿಯಾಗಿ ನಿರ್ಬಂಧಿಸಿತ್ತು. ಥಲಿಡೋಮೈಡ್‌ಅನ್ನು ಯಾವ ಕಾರಣಕ್ಕೂ ಮಾರಾಟ ಮಾಡದಂತೆ ಜನಜಾಗೃತಿ ಮೂಡಿಸಲು ಹೋರಾಡಿದ್ದ ಎಫ್.ಡಿ.ಎ.ಯ ಔಷಧ ಶಾಸ್ತ್ರಜ್ಞೆ ಫ್ರಾನ್ಸಿಸ್ ಓಲ್ಡ್‌ಹ್ಯಾಮ್ ಕೆಲ್ಸಿಗೆ ೧೯೬೨ರಲ್ಲಿ ಸ್ವತಃ ಅಮೆರಿಕಾದ ಅಧ್ಯಕ್ಷ ಜಾನ್ ಎಫ್. ಕೆನಡಿ ಉತ್ತಮ ನಾಗರಿಕ ಸೇವೆಗಾಗಿ ನೀಡುವ ಪ್ರಶಸ್ತಿ ನೀಡಿ ಗೌರವಿಸಿದ್ದರು. ಆದರೆ ಇದೇ ಅಮೆರಿಕ ೧೯೯೮ರಲ್ಲಿ ಥಲಿಡೋಮೈಡ್‌ಗೆ ಅನುಮೋದನೆ ನೀಡಿತು. ಸಾರ್ವತ್ರಿಕ ಸಾರ್ವಜನಿಕ ಕಾಳಜಿಯ ಕೊರತೆಯಿಂದ ನರಳುತ್ತಿರುವ ಭಾರತವನ್ನಂತೂ ಕೇಳುವುದೇ ಬೇಡ.




# ಲಾಭಬಡುಕರೂ ಜೋಕ್ ಮಾಡಬಲ್ಲರು

**ಕೆ. ಎಸ್. ರವಿಕುಮಾರ್**

೧೯೬೧ರಲ್ಲಿ ಅಂದಿನ ಪಶ್ಚಿಮ ಜರ್ಮನಿಯ ಪತ್ರಿಕೆಗಳಲ್ಲಿ ಸುದ್ದಿಯೋ ಸುದ್ದಿ. ವೈದ್ಯರಿಗೆ ತಲೆನೋವೋ ತಲೆನೋವು. ಸುದ್ದಿಯೇನೂ ಸಂತೋಷದ್ದಾಗಿರಲಿಲ್ಲ. ಜರ್ಮನಿಯಾದ್ಯಂತ ವಿಕಲಾಂಗ, ವಿಕೃತ ಶಿಶುಗಳು ಜನಿಸುತ್ತಿದ್ದ ಪ್ರಮಾಣ ಹಿಂದೆಂದೂ ಕೇಳದ, ಕಾಣದ ಪ್ರಮಾಣದಲ್ಲಿತ್ತು. ಬುದ್ಧಿಮಾಂದ್ಯ, ಜನನೇಂದ್ರಿಯ ದೋಷ, ಹೃದಯ ದೋಷ, ಕೈಗಳಿರದ, ಕಾಲಿಲ್ಲದ, ಕಿವಿಯಿಲ್ಲದ, ಮೂಳೆಗಳೇ ಇಲ್ಲದ, ಜಾಲಪಾದದಂತಿರುವ ಕಾಲುಗಳನ್ನು ಹೊಂದಿದ ಶಿಶುಗಳು ಸಾವಿರಾರು ಸಂಖ್ಯೆಯಲ್ಲಿ ಜನಿಸಿದ ವರದಿಗಳು ಪತ್ರಿಕೆಗಳಲ್ಲಿ ಪುಂಖಾನುಪುಂಖವಾಗಿ ಬರತೊಡಗಿದಂತೆ ಜನ ಕಂಗಾಲಾದರು. ವೈದ್ಯಕೀಯ ವಲಯದಲ್ಲಿ ಕೋಲಾಹಲವೆದ್ದಿತು. ಅನೇಕ ತಾಯಂದಿರು ತಮ್ಮ ವಿಕೃತ ಶಿಶುಗಳನ್ನು ನೋಡಲಾಗದೆ ಆತ್ಮಹತ್ಯೆ ಮಾಡಿಕೊಂಡರು. ಹುಟ್ಟುತ್ತಲೇ ಸತ್ತ ಮಕ್ಕಳನ್ನು ಕಂಡು ಅಪ್ಪ, ಅಮ್ಮಂದಿರಿಗೆ ಅವುಗಳ ಹುಟ್ಟುಹಬ್ಬ ಆಚರಿಸಿದಾಗ ಆಗುವಷ್ಟೆ ಸಂತೋಷವಾಗಿತ್ತು. ಜೀವನಪೂರ್ತಿ ಪರಾವಲಂಬಿಗಳಾಗಿ ದಾರುಣ ಬದುಕನ್ನು ಬಾಳಬೇಕಿದ್ದ ತಮ್ಮ ಮಕ್ಕಳು ಹುಟ್ಟಿನಲ್ಲೆ ಸಾವು ಕಂಡಿದ್ದು ಅವರಿಗೆ ಸಮಾಧಾನವನ್ನೇ ತಂದಿತ್ತು. ಅನೇಕ ವೈದ್ಯ ಪತ್ನಿಯರೂ ವಿಕಲಾಂಗ ಶಿಶುಗಳಿಗೆ ಜನ್ಮವಿತ್ತರು.

ಶಿಶುಗಳ ಅಂಗವೈಕಲ್ಯ ಹಾಗೂ ವಿಕೃತ ರೂಪಕ್ಕೆ ಮೇಲು ನೋಟದ ಕಾರಣಗಳನ್ನು ಅರಿಯದೆ ವೈದ್ಯರು ತಲೆಯ ಮೇಲೆ ಕೈ ಹೊತ್ತರು. ಎಲ್ಲಾದರೂ ಅಣುವಿಕಿರಣ ಸೋರಿ ಹೀಗಾಗಿರಬಹುದೆ ? ಈ ತನಕ ತಿಳಿದಿರದ ಹೊಸ ವೈರಸ್ ಕಾರಣವೆ ? ಸಂಶೋಧನೆಗಳು ತ್ವರಿತ ಗತಿಯಲ್ಲಿ ಸಾಗಿ ಆಸ್ಟ್ರೇಲಿಯಾದ ಪ್ರಸೂತಿ ತಜ್ಞ ಡಾ॥ ವಿಲಿಯಮ್ ಮ್ಯಾಕ್‌ಬ್ರೈಡ್ ಮತ್ತು ಜರ್ಮನಿಯ ಮಕ್ಕಳ ತಜ್ಞ ಡಾ॥ ವಿದುಕಿಂಡ್ ಲೆಂಜ್ ಶಿಶುಗಳ ವಿಕೃತ ರೂಪಕ್ಕೂ, ಥಲಿಡೋಮೈಡ್ ಎಂಬ ಔಷಧಕ್ಕೂ ಸಂಬಂಧವಿದೆ ಎಂಬ ಅಂಶದ ಕಡೆ ಗಮನ ಸೆಳೆದರು. ನಂತರದ ದಿನಗಳಲ್ಲಿ ಲೆಂಜ್ ಇದನ್ನು ವಿವಾದಕ್ಕೆಡೆಯಿಲ್ಲದಂತೆ ಸಾಬೀತುಪಡಿಸಿದ್ದೂ ಆಯಿತು.

**ಪಶ್ಚಿಮ ಜರ್ಮನಿಯ ಬೇಬಿ ಸಿಟ್ಟರ್**

ಥಲಿಡೋಮೈಡ್ ಉಪಶಾಮಕ ಮತ್ತು ನೋವು ನಿವಾರಕ ಎಂಬ ಹಣೆಪಟ್ಟಿಯೊಂದಿಗೆ ೧೯೫೭ರ ಅಕ್ಟೋಬರ್ ೧ರಂದು ಮಾರುಕಟ್ಟೆಗೆ ಆಗಮಿಸಿತು. ಕೆಮಿ ಗ್ರುನೆಂಥಾಲ್ ಎಂಬ ಜರ್ಮನ್ ಔಷಧ ಕಂಪೆನಿಯ ಹೆಮ್ಮೆಯ ಉತ್ಪನ್ನವಾಗಿತ್ತು ಅದು. ನಿದ್ರಾಹೀನತೆ, ನೆಗಡಿ, ಕೆಮ್ಮು, ಫ್ಲೂ, ತೀವ್ರ ತಲೆನೋವು, ಅರೆ ತಲೆಶೂಲೆ, ಆಸ್ತಮಾ, ವಾಂತಿ, ಭೇದಿ ಮತ್ತು ಹಲವು ನರರೋಗಗಳಿಗೂ ಥಲಿಡೋಮೈಡ್ ಪರಿಣಾಮಕಾರಿಯೆಂದು (ಭಾರತೀಯ ಸಂದರ್ಭದಲ್ಲಿ ಹೇಳುವುದಾದರೆ ರಾಮಬಾಣವೆಂದು), ವೈದ್ಯರ ಸೂಚನೆ ಇಲ್ಲದೆಯೂ ಔಷಧದ ಅಂಗಡಿಗಳಿಂದ ನೇರ ಖರೀದಿಸಿ ಬಳಸಬಹುದಾದ ಒಂದು ಅದ್ಭುತವೆಂದು

ಕಂಪೆನಿ ಪ್ರಚಾರಮಾಡಿತು. ವಿವಿಧ ದೇಶಗಳಲ್ಲಿ ತನ್ನ ಅಧಿಕೃತ ವಿತರಕರ ನೆರವಿನಿಂದ ಸ್ಥಳೀಯ ವೈದ್ಯರಿಂದ ಶಿಫಾರಸು ಲೇಖನಗಳನ್ನು ಬರೆಸಿ ಥಲಿಡೋಮೈಡ್‌ಗೆ ಪ್ರಚಾರ ಒದಗಿಸಿತು. ಬರೆಯಲು ಹಿಂದೆ ಮುಂದೆ ನೋಡಿದ ವೈದ್ಯರಿಗೆ ಹಣದ ಆಮಿಷ ಒಡ್ಡಲು ಕಂಪೆನಿ ಹಿಂಜರಿಯಲಿಲ್ಲ. ಕೆಲವು ಸಾರಿ ಬೇನಾಮಿ ವೈದ್ಯರ ಹೆಸರಿನಲ್ಲಿ ವಿತರಕರ ಕಡೆಯವರೇ ಲೇಖನಗಳನ್ನು ಬರೆದ ಉದಾಹರಣೆಯೂ ಇತ್ತು.



ಥಲಿಡೋಮೈಡ್ ತೆಗೆದುಕೊಂಡ ವ್ಯಕ್ತಿಗೆ ಮತ್ತು ಬಂದು ಆತ ಸುಖ ನಿದ್ರೆಗೆ ಜಾರುತ್ತಾನೆ ಎಂದು ಕಂಪೆನಿಯ ಜಾಹೀರಾತುಗಳು ಸಾರಿದವು. ಪಶ್ಚಿಮ ಜರ್ಮನಿಯಲ್ಲಂತೂ ತಾಯಂದಿರು ರಚ್ಚೆ ಹಿಡಿವ, ತುಂಟತನ ಮಾಡುವ ತಮ್ಮ ಮಕ್ಕಳಿಗೆ ಥಲಿಡೋಮೈಡ್ ತಿನ್ನಿಸಿ ಮಲಗಿಸಿಬಿಡುವ ಹೊಸ ಪರಿಪಾಠವನ್ನು ರೂಢಿಸಿಕೊಂಡರು. ಹೀಗಾಗಿ ಅದನ್ನು 'ಪಶ್ಚಿಮ ಜರ್ಮನಿಯ ಬೇಬಿ ಸಿಟ್ಟರ್' ಎಂಬ ಅಡ್ಡ ಹೆಸರಿನಿಂದ ಕರೆಯುವುದು ಚಾಲ್ತಿಗೆ ಬಂತು.

ಥಲಿಡೋಮೈಡ್ ಕುರಿತಂತೆ ಗ್ರುನೆಂಥಾಲ್ ಕಂಪೆನಿಯ ಬಹುಮುಖ್ಯ ಪ್ರತಿಪಾದನೆ ಏನೆಂದರೆ ಅದನ್ನು ಗರ್ಭಿಣಿಯರು ಲವಲೇಶವೂ ಹಿಂಜರಿಕೆ ಇಲ್ಲದೆ ಬಳಸಬಹುದು ಎಂಬುದಾಗಿತ್ತು. ಸಾಮಾನ್ಯವಾಗಿ ಶೇಕಡಾ ೫೦ರಷ್ಟು ಗರ್ಭಿಣಿಯರನ್ನು ಬೆಳಗಿನ ತೊಂದರೆ (ತಲೆ ಸುತ್ತುವಿಕೆ, ವಾಕರಿಕೆಯಂತಹ ಲಕ್ಷಣ, ಮಾರ್ನಿಂಗ್ ಸಿಕ್‌ನೆಸ್) ಕಾಡುತ್ತದೆ. ಈ ತೊಂದರೆಯನ್ನು ನಿವಾರಿಸಬೇಕಿದ್ದರೆ ಥಲಿಡೋಮೈಡೇ ಸೂಕ್ತ ಎಂಬ ಕಂಪೆನಿಯ ಪ್ರಚಾರ ಸಹಜವಾಗಿ ಗರ್ಭಿಣಿಯರನ್ನು ಆಕರ್ಷಿಸಿತು.

ಥಲಿಡೋಮೈಡ್ ಸೃಷ್ಟಿಯ ಹಿನ್ನೆಲೆಯಲ್ಲೂ ಒಂದು ಕ್ರೂರ ಕುತೂಹಲಕರ ಅಂಶವಿದೆ. ಹಿಟ್ಲರನ ನಾಸೀ ಸೈನ್ಯದಲ್ಲಿ ವೈದ್ಯ ಹಾಗೂ ನಾಸೀ ಪಕ್ಷದ ನಿಷ್ಠಾವಂತ ಸದಸ್ಯನಾಗಿದ್ದ ಹೈನ್ರಿಕ್ ಮಕ್ಟರ್ ಎಂಬಾತ ಟೈಫಸ್ ಎಂಬ ಸಾಂಕ್ರಾಮಿಕ ಜ್ವರಕ್ಕೆ ಲಸಿಕೆ ಕಂಡುಹಿಡಿದಿದ್ದ ಮೇಧಾವಿ ಎನಿಸಿದ್ದನು. ಆದರೆ ಯಾತನಾ ಶಿಬಿರದಲ್ಲಿ ನೂರಾರು ಬಡಪಾಯಿಗಳ ಮೇಲೆ ಟೈಫಾಯಿಡ್ ಕಾಯಿಲೆಗೆ ಸಂಬಂಧಿಸಿದಂತೆ ಕ್ರೂರ ಪ್ರಯೋಗಗಳನ್ನು ನಡೆಸಿ ಅವರ ಸಾವಿಗೆ ಕಾರಣನಾಗಿದ್ದವನು ಎಂಬ ಕುಖ್ಯಾತಿಯೂ ಅವನ ಬೆನ್ನಿಗಿತ್ತು. ಗ್ರುನೆಂಥಾಲ್ ಕಂಪೆನಿ ಅಸ್ತಿತ್ವಕ್ಕೆ ಬಂದಾಗ ಅದರ ಸಂಶೋಧನಾ ವಿಭಾಗದ ಮುಖ್ಯಸ್ಥನಾಗಿ ಕೆಲಸ ಮಾಡಿ ಥಲಿಡೋಮೈಡ್‌ನ ಫಾರ್ಮುಲಾವನ್ನು ಅವನೇ ಅಭಿವೃದ್ಧಿಪಡಿಸಿದ್ದನು. ಅವನೊಂದಿಗೆ ಇನ್ನೂ ಅನೇಕ ನಾಸೀಗಳ ಪರವಾಗಿದ್ದ ವೈದ್ಯರು ದುಡಿದಿದ್ದರು.

ಇವೆಲ್ಲದರ ಹಿನ್ನೆಲೆ ಏನೇ ಇರಲಿ, ಮಾಜಿ ನಾಸೀಗಳ ಕಲ್ಪನೆಯ ಕೂಸು ಎಂಬ ಕುಖ್ಯಾತಿ ಇರಲಿ, ಥಲಿಡೋಮೈಡ್ ಅಂತೂ ಜನಪ್ರಿಯವಾಗಿಹೋಗಿತ್ತು. ಅದಕ್ಕೆ ಶರಣಾಗುವವರ ಸಂಖ್ಯೆ ಏರುತ್ತ ಸಾಗುತ್ತಿತ್ತು. ಗ್ರುನೆಂಥಾಲ್ ಹಾಗೂ ಅದರ ವಿತರಕ ಕಂಪೆನಿಗಳು ಹಣ ಬಾಚತೊಡಗಿದ್ದವು.

**ಗುರುತರ ನಿರ್ಲಕ್ಷ್ಯ**

ಗ್ರುನೆಂಥಾಲ್ ಥಲಿಡೋಮೈಡ್‌ಗೆ ಸಂಬಂಧಿಸಿದಂತೆ ಒಂದು ಗುರುತರ ಪ್ರಮಾದ ಎಸಗಿತ್ತು. ಅದನ್ನು ಮಾರುಕಟ್ಟೆಗೆ ಬಿಡುಗಡೆ ಮಾಡುವ ಮುನ್ನ ಅದರಿಂದೇನಾದರೂ ಪಾರ್ಶ್ವ ಪರಿಣಾಮಗಳಿವೆಯೇ ಎಂಬ ನಿಟ್ಟಿನಲ್ಲಿ ಗಂಭೀರ ಸಂಶೋಧನೆಗಳನ್ನು ನಡೆಸುವ ಅಗತ್ಯವನ್ನೇ ನಿರ್ಲಕ್ಷಿಸಿತ್ತು. ಮುಖ್ಯವಾಗಿ ಗರ್ಭಿಣಿಯರು ತೆಗೆದುಕೊಳ್ಳುವ ಯಾವುದೇ ಔಷಧದ ಅಂಶ ಪ್ಲಸೆಂಟಾ (ಮಾಸು, ತಾಯಿಯಿಂದ ಗರ್ಭಸ್ಥ ಶಿಶುವಿಗೆ ರಕ್ತ ಪೂರೈಸುವ ಅಂಗ)ವನ್ನು ದಾಟಿ ಭ್ರೂಣವನ್ನೊ, ಶಿಶುವನ್ನೊ ತಲುಪಿದಾಗ ಸಂಭವಿಸಬಹುದಾದ ಪರಿಣಾಮಗಳ ಕುರಿತು ಕಂಪೆನಿ ಸಂಶೋಧನೆ ನಡೆಸಿಯೇ ಇರಲಿಲ್ಲ. ಇಂತಹ ಸಂಶೋಧನೆಗಳನ್ನು ಪೂರ್ವಭಾವಿಯಾಗಿ ಪ್ರಯೋಗಪಶುಗಳ ಮೇಲೆ ನಡೆಸುವುದು ಅವಶ್ಯವಿರುತ್ತದೆ. ಕಂಪೆನಿಗೆ ಈ ಮುನ್ನೆಚ್ಚರಿಕೆಗಳೆಲ್ಲ ಮುಖ್ಯವೆನಿಸಿರಲೇ ಇಲ್ಲ. ಲಾಭದ ಹೊಳೆ ಹರಿಯುವಾಗಲಂತೂ ಅದು ಹಿಂತಿರುಗಿ ನೋಡಲು ತಯಾರಿರಲಿಲ್ಲ. ವಿಚಿತ್ರ ವಿಡಂಬನೆಯೆಂದರೆ ತನ್ನ ನೌಕರನ ಪತ್ನಿಯೊಬ್ಬಳು ಥಲಿಡೋಮೈಡ್ ನುಂಗಿ ಕಿವಿಯಿಲ್ಲದ ಮಗುವಿಗೆ ಜನ್ಮವಿತ್ತಾಗಲೂ ಗ್ರುನೆಂಥಾಲ್ ತಲೆಕೆಡಿಸಿಕೊಳ್ಳಲಿಲ್ಲ. ದೂರದ ಆಸ್ಟ್ರೇಲಿಯಾದಿಂದಲೂ ದೈಹಿಕ ದೋಷವುಳ್ಳ ಶಿಶುಗಳು ಜನಿಸಿದ ವರದಿಗಳು ಬಂದಾಗಲೂ ಅದು ದಿವ್ಯ ನಿರ್ಲಕ್ಷ್ಯ ತಳೆದಿತ್ತು. ನಿದ್ದೆ ಬರಲೆಂದು ಮತ್ತು ಮೈ ಕೈ ನೋವು ನಿವಾರಣೆಯಾಗಲೆಂದು ಥಲಿಡೋಮೈಡ್ ತೆಗೆದುಕೊಂಡ ದೊಡ್ಡವರಲ್ಲಿ ಪದೇ ಪದೇ ಮಲಬದ್ಧತೆ, ತಲೆ ಸುತ್ತುವುದು, ನಡೆಯುವಾಗ ಸಮತೋಲನ ತಪ್ಪುವುದು ಮುಂತಾದ ಲಕ್ಷಣಗಳು ಕಾಣಬಂದವು. ಈ ಎಲ್ಲದಕ್ಕೂ ಥಲಿಡೋಮೈಡ್ ಕಾರಣವೆಂದು ಅರಿಯದೆ ಅವರು ಮತ್ತೆ ಮತ್ತೆ ಅದಕ್ಕೇ ಮೊರೆ ಹೋಗುತ್ತಿದ್ದರೋ ಏನೋ ತಿಳಿಯದು. ಆದರೆ ಜರ್ಮನಿಯಲ್ಲಿ ವಿಕೃತ ಶಿಶು ಜನನದ ಪ್ರಕರಣಗಳಲ್ಲಿ ಗಮನಾರ್ಹ ಹೆಚ್ಚಳವಾದಾಗಲಷ್ಟೆ ಪ್ರಪಂಚ ಥಲಿಡೋಮೈಡ್‌ಅನ್ನು ಅನುಮಾನದಿಂದ ನೋಡಲು ಶುರು ಮಾಡಿದ್ದು.

ಲೆಂಜ್‌ನ ಸಂಶೋಧನೆ ಥಲಿಡೋಮೈಡ್‌ಗೆ ದೊಡ್ಡ ಪ್ರಹಾರವನ್ನೇ ನೀಡಿತು. ವೈದ್ಯಕೀಯ ವಲಯ ಅದನ್ನು ಜಾಗತಿಕ ಔಷಧ ಮಾರುಕಟ್ಟೆಯಿಂದಲೇ ನಿಷೇಧಿಸುವಂತೆ ಸರ್ಕಾರಗಳ ಮೇಲೆ ಒತ್ತಡ ತರತೊಡಗಿತು. ಆದರೆ ಗ್ರುನೆಂಥಾಲ್ ಸುಮ್ಮನಿರುವ ಪೈಕಿಯದಲ್ಲ. ಜನಪ್ರಿಯತೆ ಮತ್ತು ಲಾಭದ ಪ್ರವಾಹದಲ್ಲಿ ಮೈ ಮರೆತಿದ್ದ ಅದು ನಿಷೇಧದ ನಿರ್ಣಯ ತೆಗೆದುಕೊಳ್ಳದಂತೆ ಸರ್ಕಾರಗಳ ಮೇಲೆ ಪ್ರತಿಯಾಗಿ ಒತ್ತಡ ತಂದಿತು. ಲಂಚದ ಆಮಿಷ ಒಡ್ಡಿತು. ಖೋಟಾ ವೈದ್ಯರಿಂದ ಥಲಿಡೋಮೈಡ್ ನಿರಪಾಯಕಾರಿ ಎಂದು ಹೇಳಿಕೆ ಕೊಡಿಸುವ ಪ್ರಯತ್ನಗಳನ್ನು ನಡೆಸಿತು. ಆದರೆ ನೈಜ ಕಳಕಳಿಯಿದ್ದ ವೈದ್ಯರು ಲೇಖನಗಳನ್ನು ಬರೆದು ಥಲಿಡೋಮೈಡ್ ವಿರುದ್ಧ ಜನರನ್ನು ಎಚ್ಚರಿಸಿದರು. ಭಾಷಣ, ಉಪನ್ಯಾಸಗಳೆಲ್ಲ ಜನರ ಪರವಾಗಿದ್ದವು. ಔಷಧಗಳ ಇತಿಹಾಸದಲ್ಲಿ ಅಪೂರ್ವ ಎನಿಸಿದ್ದ ಈ ಸಮರ ಕಡೆಗೂ ೧೯೬೧ರಲ್ಲಿ ಥಲಿಡೋಮೈಡ್‌ನ ನಿಷೇಧದಲ್ಲಿ ಕೊನೆಗೊಂಡಿತು. ಥಲಿಡೋಮೈಡ್ ಮಾರುಕಟ್ಟೆಯಿಂದ ನಿರ್ಗಮಿಸಿತು.

**ಘಾಸಿಗೊಂಡ ನಂಬಿಕೆಗಳು**

ಜನರ ಮನದಲ್ಲಿ ಅಲ್ಲಿಯವರೆಗೆ ಔಷಧಗಳೆಂದರೆ ಪ್ರಾಣ ಉಳಿಸುವ ವಸ್ತುಗಳು ಎಂಬ ಅಚ್ಚೊತ್ತಿದ್ದ ನಂಬಿಕೆಗೆ ಥಲಿಡೋಮೈಡ್ ದೊಡ್ಡ ಆಘಾತ ನೀಡಿತ್ತು. ಔಷಧಗಳಿಂದ ಮಾರಣಾಂತಿಕ ಪಾರ್ಶ್ವ ಪರಿಣಾಮಗಳು ಸಾಧ್ಯ ಎಂದು ಸಾಬೀತಾಗಿತ್ತು. ಥಲಿಡೋಮೈಡ್ ನಿಷೇಧದ ನಂತರದ ವರ್ಷಗಳಲ್ಲಿ ವಿಕೃತ ಶಿಶು ಜನಿಸುವ ಪ್ರಕರಣಗಳು ಗಣನೀಯವಾಗಿ ಇಳಿದು ಅದರ ಮೇಲಿದ್ದ ಸಂಶಯ ದೃಢವಾಯಿತು. ಒಂದು ಸಮೀಕ್ಷೆಯ ಪ್ರಕಾರ ೪೬ ದೇಶಗಳಲ್ಲಿ ೧೦ ಸಾವಿರಕ್ಕೂ ಹೆಚ್ಚು ಮಕ್ಕಳ ಮೇಲೆ ಅದು ದುಷ್ಪರಿಣಾಮ ಬೀರಿತ್ತು. ಥಲಿಡೋಮೈಡ್ ಚಾಲ್ತಿಯಲ್ಲಿ ಇದ್ದದ್ದು ಐದೇ ವರ್ಷವಾದರೂ ಅದು ಸೃಷ್ಟಿಸಿದ್ದ ಕೋಲಾಹಲ ಮಾತ್ರ ಮಾನವಕುಲದ ಒಂದು ಕರಾಳ ಅಧ್ಯಾಯವಾಗಿತ್ತು.

ಔಷಧಗಳ ಇತಿಹಾಸದಲ್ಲೆ ಮೊಟ್ಟ ಮೊದಲ ಬಾರಿಗೆ ನಿಷೇಧಕ್ಕೊಳಗಾದ ಔಷಧ ಥಲಿಡೋಮೈಡ್ ಆಗಿತ್ತು. ಅದರ ಪ್ರಕರಣದಿಂದ ದೃಢಪಟ್ಟಿದ್ದು ಇಷ್ಟು: ಔಷಧ ತಯಾರಿಕಾ ಕಂಪೆನಿಗಳು ಜನರಿಗೆ ಸುಳ್ಳು ಹೇಳಬಲ್ಲವು, ಅವರ ಜೀವದೊಡನೆ ಆಟವಾಡಬಲ್ಲವು, ಲಾಭಕ್ಕಾಗಿ ಎಂತಹ ವಂಚನೆಯ ಮಾರ್ಗವನ್ನೂ ತುಳಿಯಬಲ್ಲವು ಮತ್ತು ಪ್ರಭುತ್ವಗಳಿಗೆ ಆಮಿಷ ಒಡ್ಡಬಲ್ಲವು ಎಂದು.

**ಪುನರಾಗಮನ**

೩೬ ವರ್ಷಗಳ ಅಜ್ಞಾತವಾಸದ ಬಳಿಕ ಥಲಿಡೋಮೈಡ್ ೧೯೯೮ರಲ್ಲಿ ಅಮೆರಿಕಾದ ಆಹಾರ ಮತ್ತು ಔಷಧ ಆಡಳಿತದಿಂದ ಕಾನೂನುಬದ್ಧ ಅನುಮೋದನೆ ಪಡೆದು ಮತ್ತೆ ಮಾರುಕಟ್ಟೆಗೆ ಬಂದಿತು. ಈ ಅವಧಿಯಲ್ಲಿ ಅದು ಇನ್ಯಾವ ಕಾಯಿಲೆಗಳಿಗೆ ಸೂಕ್ತವಿದ್ದೀತು ಎಂಬ ಕಡೆ ಸಂಶೋಧನೆಗಳು ತಣ್ಣನೆ ಜರುಗಿದ್ದವು. ಕುಷ್ಠರೋಗ, ಕೆಲವು ಬಗೆಯ ಕ್ಯಾನ್ಸರ್ ಮತ್ತು ಏಡ್ಸ್‌ಗೆ ಸಂಬಂಧಿಸಿದಂತೆ ಥಲಿಡೋಮೈಡ್ ಬಹುಮಟ್ಟಿಗೆ ಪ್ರಯೋಜನಕಾರಿ ಎಂದು ತಿಳಿದುಬಂದಿತ್ತು. ಕುಷ್ಠರೋಗಿಗಳಲ್ಲಿ ಸತ್ತ ಬ್ಯಾಕ್ಟೀರಿಯಾಗಳಿಂದಾಗಿ ಚರ್ಮದಲ್ಲಿ ಗಂಟುಗಳಾಗುತ್ತವೆ. ಮೂಳೆ ಸಂದುಗಳಲ್ಲಿ ವಿಪರೀತ ನೋವು ಕಾಣಿಸಿಕೊಳ್ಳುತ್ತದೆ. ಜ್ವರವೂ ಬಾಧಿಸುತ್ತದೆ. ಈ ಲಕ್ಷಣಗಳ




ಹಂತವನ್ನು 'ಎರಿಥೆಮಾ ನೋಡೋಸಮ್ ಲೆಪ್ರೋಸಮ್ (ಇ.ಎನ್.ಎಲ್.)' ಎನ್ನುತ್ತಾರೆ. ಥಲಿಡೋಮೈಡ್ ಈ ಹಂತದಲ್ಲಿ ಬ್ಯಾಕ್ಟೀರಿಯಗಳನ್ನು ನಿವಾರಿಸಿ ಗಂಟುಗಳನ್ನು ತಡೆಯುತ್ತದೆ. ಏಡ್ಸ್ ರೋಗಿಗಳಲ್ಲಿ ಕಾಣಬರುವ ಬಾಯಿ ಅಲ್ಸರ್ ಮತ್ತು ಸ್ನಾಯು ಕರಗುವಿಕೆಗಳಿಗೂ ಥಲಿಡೋಮೈಡ್ ಪರಿಣಾಮಕಾರಿ ಎಂದು ಸಂಶೋಧನೆಗಳು ತಿಳಿಸಿವೆ. ಅಸ್ಥಿ ರಜ್ಜೆಯ ಕ್ಯಾನ್ಸರ್‌ನ ಚಿಕಿತ್ಸೆಯಲ್ಲೂ ಥಲಿಡೋಮೈಡ್‌ಅನ್ನು ಸೂಚಿಸಲಾಗುತ್ತದೆ. ಅಮೆರಿಕ ಸೇರಿದಂತೆ ಹಲವು ದೇಶಗಳಲ್ಲಿ ಥಾಲೋಮಿಡ್, ರೆವ್‌ಲಿಮಿಡ್ ಎಂಬ ವಾಣಿಜ್ಯ ಹೆಸರುಗಳಲ್ಲಿ ಥಲಿಡೋಮೈಡ್ ಇಂದು ಬಳಕೆಯಲ್ಲಿದೆ.

**ಲಾಭಬಡುಕರ ಹಾಸ್ಯಪ್ರಜ್ಞೆ** ?

೨೦೧೨ರ ಆಗಸ್ಟ್ ೩೧ರಂದು ಜರ್ಮನಿಯ ಸ್ಟಾಲ್‌ಬರ್ಗ್ ನಗರದಲ್ಲಿ ಒಂದು ಸಮಾರಂಭ ಜರುಗಿತು. ಥಲಿಡೋಮೈಡ್‌ನಿಂದ ಅಂಗವಿಕಲರಾದವರು ಮತ್ತು ಅಸುನೀಗಿದವರ ನೆನಪಿಗೆ ಕೈಗಳಿಲ್ಲದ ಬಾಲಕಿಯ ಕಂಚಿನ ಪ್ರತಿಮೆಯನ್ನು ಈ ಸಮಾರಂಭದಲ್ಲಿ ಅನಾವರಣಗೊಳಿಸಲಾಯಿತು. ಈ ಸಂದರ್ಭದಲ್ಲಿ ಗ್ರುನೆಂಥಾಲ್ ಕಂಪೆನಿ (ಪ್ರತಿಮೆಯ ಕಲ್ಪನೆಯೂ ಈ ಕಂಪೆನಿಯದ್ದೇ)ಯ ಮುಖ್ಯ ಕಾರ್ಯ ನಿರ್ವಾಹಕ ಹೆರಾಲ್ಡ್ ಸ್ಟಾಕ್ ಮಾತನಾಡುತ್ತ, "ಥಲಿಡೋಮೈಡ್‌ನಿಂದ ಹಾನಿಗೊಳಗಾದವರಲ್ಲಿ ನಾವು ಕ್ಷಮೆ ಕೋರುತ್ತೇವೆ. ಕಳೆದ ಐವತ್ತು ವರ್ಷಗಳಲ್ಲಿ ನಾವು ಮೌನಕ್ಕೆ ಮೊರೆಹೋಗಿದ್ದೆವು. ಥಲಿಡೋಮೈಡ್ ಸಂತ್ರಸ್ತರಿಗಾಗಿ ನಾವು ಕಾಳಜಿಪೂರ್ಣ ವಿಷಾದ ಮತ್ತು ಹೃದಯಪೂರ್ವಕವಾದ ಸಹಾನುಭೂತಿಯನ್ನು ಹೊಂದಿದ್ದೇವೆ. ನಮ್ಮ ಕಂಪೆನಿ ಥಲಿಡೋಮೈಡ್‌ನಿಂದ ತೊಂದರೆ ಅನುಭವಿಸಿದವರಿಗೆ ನೆರವಾಗಲು ಕ್ರಮ ಕೈಗೊಳ್ಳುತ್ತದೆ" ಎಂದು ಭಾಷಣ ಮಾಡಿದನು. ಆದರೆ ಥಲಿಡೋಮೈಡ್‌ನಿಂದ ನರಳಿದವರಿಗೆ, ತಮ್ಮ ಕುಟುಂಬಗಳನ್ನು ಕಳೆದುಕೊಂಡವರಿಗೆ, ದುರಂತಕ್ಕೊಳಗಾದವರಿಗೆ ಹೆರಾಲ್ಡ್ ಸ್ಟಾಕ್‌ನ ಮಾತುಗಳು ಹೇಗೆ ತಾನೆ ಸಮಾಧಾನ ತರಲು ಸಾಧ್ಯ ?

ಈಗಲೂ ಜಗತ್ತಿನಾದ್ಯಂತ ೫೦೦೦-೬೦೦೦ ಮಂದಿ ಥಲಿಡೋಮೈಡ್ ವಿಕಲಾಂಗರಿದ್ದಾರೆ. ಅವರೆಲ್ಲರ ವಯಸ್ಸು ೫೦ ದಾಟಿದೆ. ಇವರಲ್ಲಿ ಬಹುಪಾಲು ಜನರು ತಮ್ಮನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದ ಅಪ್ಪ, ಅಮ್ಮನನ್ನು ಕಳೆದುಕೊಂಡು ಅನಾಥರಾಗಿದ್ದಾರೆ.

ಈಗ ೫೫ರ ವಯಸ್ಸಿನಲ್ಲಿರುವ, ಥಲಿಡೋಮೈಡ್‌ನಿಂದ ಕೈ ಕಾಲು ಕಳೆದುಕೊಂಡ ಇಂಗ್ಲೆಂಡಿನ ಫ್ರೆಡ್ಡೀ ಆಸ್ಟ್‌ಬರಿ, "ಈ ಕ್ಷಮೆಯಾಚನೆ ನಮ್ಮನ್ನು ಅಣಕಿಸಿದಂತಿದೆ. 'ಕ್ಷಮಿಸಿ' ಎನ್ನಲು ಐವತ್ತು ವರ್ಷಗಳು ಬೇಕಿತ್ತೇನು ? ನನಗೆ ದಿಗ್ಭ್ರಮೆಯಾಗಿದೆ. ಇಲ್ಲಿಯವರೆಗೆ ತಪ್ಪೇ ಎಸಗಿಲ್ಲ ಎಂದು ವಾದಿಸುತ್ತ ನಮ್ಮೊಡನೆ ಮಾತುಕತೆಗೆ ಬರಲು ನಿರಾಕರಿಸುತ್ತಿದ್ದ ಕಂಪೆನಿಯ ಮಂದಿ ಇವರೇ ಏನು ?" ಎಂದು ಆಕ್ರೋಶ ವ್ಯಕ್ತಪಡಿಸಿದರು. ಥಲಿಡೋಮೈಡ್ ವಿಕಲಾಂಗರಿಗೆ ಪರಿಹಾರ ಒದಗಿಸಲು ಹೋರಾಡುತ್ತಿರುವ 'ಥಲಿಡೋಮೈಡ್ ಏಜೆನ್ಸಿ ಯು.ಕೆ.' ಎಂಬ ಸಂಸ್ಥೆಯ ಮುಖ್ಯ ಸಲಹೆಗಾರನಾಗಿ ಫ್ರೆಡ್ಡೀ ಇಂದಿಗೂ ಕೆಲಸ ಮಾಡುತ್ತಿದ್ದಾರೆ.

ಕೆನಡಾದ ಥಲಿಡೋಮೈಡ್ ಅಂಗವಿಕಲ ಪಾಲ್ ಮರ್ಫಿ ಪ್ರಕಾರ ಈ ಕ್ಷಮೆಯಾಚನೆ ಒಂದು ದೊಡ್ಡ ಜೋಕ್. ಸಮಯ ಕೊಲ್ಲಲಿಕ್ಕಿರುವ ಒಂದು ಹಾಸ್ಯ ಪ್ರಹಸನ.

"ಕ್ಷಮೆ ಯಾಚಿಸುವುದು ಒಂದು ಕ್ರಿಯೆಯಾದರೆ, ತಮ್ಮದಲ್ಲದ ತಪ್ಪಿಗೆ ಅನ್ಯಾಯಕ್ಕೊಳಗಾದವರ ಪರವಾಗಿ ಜವಾಬ್ದಾರಿ ಹೊತ್ತುಕೊಳ್ಳುವುದು ಇನ್ನೊಂದು ಕ್ರಿಯೆ. ಥಲಿಡೋಮೈಡ್‌ನಿಂದ ಅನ್ಯಾಯಕ್ಕೊಳಗಾದವರಿಗೆ ಮೊದಲು ಪರಿಹಾರ ಕೊಡಿ, ನಂತರ ಕ್ಷಮೆ" ಎಂದು ಖಾರವಾಗಿ ಪ್ರತಿಕ್ರಿಯಿಸಿದ್ದು ಆಸ್ಟ್ರೇಲಿಯಾದ ವೆಂಡಿ ರೋವ್.

ವೆಂಡಿ ರೋವ್ ೧೯೬೦ರಲ್ಲಿ ಗರ್ಭಿಣಿಯಾಗಿದ್ದಾಗ ಥಲಿಡೋಮೈಡ್ ಸೇವಿಸಿದ್ದಳು. ಇದರ ಪರಿಣಾಮವಾಗಿ ಕೈ ಕಾಲುಗಳಿಲ್ಲದ ಲಿನ್ನೆಟ್ ಜನಿಸಿದಳು. ತಾಯಿ ಮಗಳಿಬ್ಬರೂ ಪರಿಹಾರ ಕೋರಿ ಥಲಿಡೋಮೈಡ್ ವಿತರಿಸಿದ ಬ್ರಿಟಿಷ್ ಕಂಪೆನಿಯ ಮೇಲೆ ಮೊಕದ್ದಮೆ ಹೂಡಿದರು. ದೀರ್ಘ ಕಾಲದ ಕಾನೂನು ಸಮರದ ನಂತರ ೨೦೧೨ರ ಜುಲೈನಲ್ಲಿ ಲಿನ್ನೆಟ್ ಮೊಕದ್ದಮೆ ಗೆಲ್ಲುವುದು ಖಚಿತವಾಗುತ್ತಿದ್ದಂತೆ ಬ್ರಿಟಿಷ್ ವಿತರಕ ಕಂಪೆನಿ ಕೋರ್ಟಿನ ಹೊರಗೆ ಪರಿಹಾರದ ಒಪ್ಪಂದಕ್ಕೆ ಸಮ್ಮತಿಸಿತು. ಆದರೆ ಗ್ರುನೆಂಥಾಲ್ ತನ್ನ ಪಾಲಿನ ಪರಿಹಾರ ನೀಡಲು ನಿರಾಕರಿಸಿತು. ಹೆರಾಲ್ಡ್ ಸ್ಟಾಕ್‌ನ ಕ್ಷಮೆಯಾಚನೆಯ ಸುದ್ದಿ ತಿಳಿಯುತ್ತಿದ್ದಂತೆ ವೆಂಡಿ, "ಆಘಾತವೆಂದರೆ ನಿಮ್ಮ ಅತ್ಯಮೂಲ್ಯ ಮಗು ಕೈ ಕಾಲುಗಳಿಲ್ಲದೆ ಜನಿಸುವುದು. ವೇದನೆಯೆಂದರೆ ನಿಮ್ಮ ಮಗುವಿಗೆ ಎಂತಹ ಬದುಕು ಬೇಡವೆಂದು ನೀವು ಆಶಿಸುತ್ತೀರೋ ಅಂತಹ ಬದುಕೇ ಆ ಮಗುವಿಗೆ ಖಚಿತವೆಂದಾಗ ಭಾರವಾದ ಹೃದಯದಿಂದ ಅದನ್ನು ಒಪ್ಪಿಕೊಳ್ಳುವುದು" ಎಂದು ಬಿಕ್ಕಳಿಸಿದಳು. ೫೩ ವರ್ಷದ ತನ್ನ ಮಗಳು ಜೀವನಪೂರ್ತಿ ಗಾಲಿ ಕುರ್ಚಿಯನ್ನೇ ಅವಲಂಬಿಸಬೇಕಾಗಿರುವ ಕ್ರೂರ ಸತ್ಯವನ್ನು ವೆಂಡಿಯ ಮಾತುಗಳು ಸಮರ್ಥವಾಗಿ ಪ್ರತಿಫಲಿಸುತ್ತವೆ.

ಜರ್ಮನಿಯ ಥಲಿಡೋಮೈಡ್ ವಿಕಲಾಂಗರ ಒಕ್ಕೂಟದ ಐಲೂಂಕಾ ಸ್ಟೊಬ್‌ರಿಟ್ಜ್, "ಈ ಕ್ಷಮೆಯಾಚನೆ ನಮ್ಮ ನಿತ್ಯದ ದುರ್ಭರ ಬದುಕಿಗೆ ಏನೂ ಸಹಾಯ ಮಾಡುವುದಿಲ್ಲ" ಎಂದು ನಿಟ್ಟುಸಿರು ಬಿಡುತ್ತಾಳೆ.

ಗ್ರುನೆಂಥಾಲ್ ಕಂಪೆನಿ ತಾನು ಥಲಿಡೋಮೈಡ್ ವಿಕಲಾಂಗರ ನೆರವಿಗಿದ್ದೇನೆ ಎಂದು ಹೇಳಿಕೊಳ್ಳುತ್ತದೆ. ೨೦೧೧ರ ಅಂತ್ಯದ ಹೊತ್ತಿಗೆ ಅದು ಕೆಲವು ವಿಕಲಾಂಗರಿಗೆ ೫೦೦ ದಶಲಕ್ಷ ಯೂರೋ ಪರಿಹಾರ ನೀಡಿದ್ದರೂ, ಹಾಗೆ ನೀಡಿದ್ದು ನ್ಯಾಯಾಲಯಗಳ ತೀರ್ಪಿನ ಮೇರೆಗೇ ಹೊರತು ಔದಾರ್ಯದಿಂದಲ್ಲ, ಸ್ವಯಂ ತೀರ್ಮಾನದಿಂದಲ್ಲ. ಈಗಲೂ ಗ್ರುನೆಂಥಾಲ್ ವಿರುದ್ಧ ಮೊಕದ್ದಮೆಗಳು ದಾಖಲಾಗುತ್ತಲೇ ಇವೆ. ಇನ್ನೂ ಪರಿಹಾರಕ್ಕಾಗಿ ಕಾದಿರುವವರ ಸಂಖ್ಯೆ ದೊಡ್ಡದೇ ಇದೆ.

✶ ✶ ✶

ಥಲಿಡೋಮೈಡ್ ತಂದ ದುರಂತದಿಂದ ಕಲಿಯಲೇಬೇಕಾಗಿ ಬಂದ








ಪಾಠಗಳೆಂದರೆ ಔಷಧಗಳ ಸಂಶೋಧನೆ, ತಯಾರಿಕೆ ಮತ್ತು ಬಳಕೆಗೆ ಸಂಬಂಧಿಸಿದಂತೆ ವೈಜ್ಞಾನಿಕ ಮುನ್ನೆಚ್ಚರಿಕೆಗಳನ್ನು ತೆಗೆದುಕೊಳ್ಳುವ ಸಲುವಾಗಿ ಕಠಿಣ ಆರೋಗ್ಯ ಕಾಯಿದೆಗಳು ಮತ್ತು ಕಾನೂನು ಕ್ರಮಗಳನ್ನು ರೂಪಿಸುವ ಒತ್ತಡಕ್ಕೆ ಸರ್ಕಾರಗಳು ಒಳಗಾದುದು. ಆದರೆ ತೊಂಬತ್ತರ ದಶಕದಲ್ಲಿ ಮೇಲುಗೈ ಸಾಧಿಸಿದ ಆರ್ಥಿಕ ಉದಾರೀಕರಣ ನೀತಿಗಳು ಆದ್ಯತೆಗಳನ್ನು ರೋಗಿಗಳ ಸುರಕ್ಷತೆಯಿಂದ ಕಂಪೆನಿಗಳ ಲಾಭದ ಹಸಿವು ತಣಿಸುವ ದಿಕ್ಕಿಗೆ ಪಲ್ಲಟಗೊಳಿಸಿದ ಮೇಲೆ ಔಷಧ ಕಂಪೆನಿಗಳು ಅನುಸರಿಸಬಹುದಾದ ಸುರಕ್ಷತಾ ಕ್ರಮಗಳ ಕುರಿತು ಒಂದು ಅನುಮಾನ ಸದಾ ಇದ್ದೇ ಇರುತ್ತದೆ. ಮೇಲಾಗಿ ಸರ್ಕಾರಗಳ ತುಷ್ಟೀಕರಣದಿಂದ ಕಂಪೆನಿಗಳು ಅದೆಷ್ಟು ಬಲಿತುಹೋಗಿವೆಯೆಂದರೆ ಚುನಾಯಿತ ಸರ್ಕಾರಗಳನ್ನು ತಮಗಿಷ್ಟ ಬಂದಂತೆ ಒಗ್ಗಿಸಿಕೊಳ್ಳಬಲ್ಲವು, ತಮ್ಮ ಮೂಗಿನ ನೇರಕ್ಕೆ ಬಗ್ಗಿಸಿಕೊಳ್ಳಬಲ್ಲವು. ಅಮೆರಿಕಾದ ಉದಾಹರಣೆಯನ್ನೇ ತೆಗೆದುಕೊಳ್ಳಿ. ಐದು ವರ್ಷಗಳ ಕಾಲ (೧೯೫೭–೧೯೬೨) ಜಗತ್ತಿನೆಲ್ಲೆಡೆ ಥಲಿಡೋಮೈಡ್ ವಿಜೃಂಭಿಸುತ್ತಿದ್ದಾಗ ತನ್ನ ದೇಶದಲ್ಲಿ ಅದರ ಬಳಕೆಯನ್ನು ಅಮೆರಿಕಾ ಯಶಸ್ವಿಯಾಗಿ ನಿರ್ಬಂಧಿಸಿತ್ತು. ಥಲಿಡೋಮೈಡ್‌ಅನ್ನು ಯಾವ ಕಾರಣಕ್ಕೂ ಮಾರಾಟ ಮಾಡದಂತೆ ಜನಜಾಗೃತಿ ಮೂಡಿಸಲು ಹೋರಾಡಿದ್ದ ಎಫ್.ಡಿ.ಎ.ಯ ಔಷಧ ಶಾಸ್ತ್ರಜ್ಞೆ ಫ್ರಾನ್ಸಿಸ್ ಓಲ್ಡ್‌ಹ್ಯಾಮ್ ಕೆಲ್ಸಿಗೆ ೧೯೬೨ರಲ್ಲಿ ಸ್ವತಃ ಅಮೆರಿಕಾದ ಅಧ್ಯಕ್ಷ ಜಾನ್ ಎಫ್. ಕೆನಡಿ ಉತ್ತಮ ನಾಗರಿಕ ಸೇವೆಗಾಗಿ ನೀಡುವ ಪ್ರಶಸ್ತಿ ನೀಡಿ ಗೌರವಿಸಿದ್ದರು. ಆದರೆ ಇದೇ ಅಮೆರಿಕ ೧೯೯೮ರಲ್ಲಿ ಥಲಿಡೋಮೈಡ್‌ಗೆ ಅನುಮೋದನೆ ನೀಡಿತು. ಸಾರ್ವತ್ರಿಕ ಸಾರ್ವಜನಿಕ ಕಾಳಜಿಯ ಕೊರತೆಯಿಂದ ನರಳುತ್ತಿರುವ ಭಾರತವನ್ನಂತೂ ಕೇಳುವುದೇ ಬೇಡ. ಪ್ರಶ್ನಿಸುವುದನ್ನು ಅಪರಾಧವೆಂದೇ ಪರಿಗಣಿಸುವ ನಮ್ಮ ಸಾಂಪ್ರದಾಯಿಕ ದೃಷ್ಟಿಕೋನ ಲಾಭಬಡುಕರ ಅಕ್ರಮಗಳನ್ನು ಬಹಳ ಬೇಗ ಕಡೆಗಣಿಸಿಬಿಡುತ್ತದೆ. ಇಂದಿಗೂ ನೂರಾರು ಔಷಧಗಳು ನಿಷೇಧಿಸಲ್ಪಟ್ಟಿದ್ದರೂ ಮಾರಾಟವಾಗುತ್ತಲೇ ಇವೆ. ಕಂಪೆನಿಗಳ ಬೊಕ್ಕಸ ತುಂಬುತ್ತಲೇ ಇದೆ. ಆದರೆ ಔಷಧಗಳ ಬಳಕೆದಾರರಾಗಿ ನಾವು ಎಚ್ಚರದಿಂದಿರುವುದು ಖಂಡಿತ ಅಪರಾಧವಲ್ಲ. ಬೇರೆಯವರನ್ನು ಎಚ್ಚರಿಸುವುದೂ ಅಪರಾಧವಲ್ಲ. ಥಲಿಡೋಮೈಡ್ ತಂದ ಆಘಾತ ನಮಗೆ ನೀಡಬಹುದಾದ ಸಂದೇಶವೆಂದರೆ ಇದೇ.

**ಕೆ. ಎಸ್. ರವಿಕುಮಾರ್**
ಭಾರತೀಯ ಜೀವ ವಿಮಾ ನಿಗಮ, ಚನ್ನರಾಯಪಟ್ಟಣ – ೫೭೩ ೧೧೬, ಹಾಸನ ಜಿಲ್ಲೆ

ಸುದ್ದಿ ಚಿತ್ರ

## ಮಂಗಳೂರಿನಲ್ಲಿ ಬಿ. ವಿ. ಕಕ್ಕಿಲ್ಲಾಯ ಸ್ಮರಣಾರ್ಥ ಎರಡು ಉಪನ್ಯಾಸ ಕಾರ್ಯಕ್ರಮಗಳು




'ಹೊಸತು' ಪತ್ರಿಕೆ, ಬೆಂಗಳೂರಿನ ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ, ಮಂಗಳೂರಿನ ಸಮದರ್ಶಿ ವೇದಿಕೆ - ಈ ಸಂಸ್ಥೆಗಳ ಆಶ್ರಯದಲ್ಲಿ ಬಿ. ವಿ. ಕಕ್ಕಿಲ್ಲಾಯ ಪ್ರೇರಿತ ಉಪನ್ಯಾಸಗಳ ಎರಡು ಕಾರ್ಯಕ್ರಮಗಳನ್ನು ಮಂಗಳೂರಿನಲ್ಲಿ ಹಮ್ಮಿಕೊಳ್ಳಲಾಯಿತು. ೨೨-೮-೨೦೧೪ರಂದು ವಿಶ್ವವಿದ್ಯಾನಿಲಯದ ಹಳೆ ಸೆನೆಟ್ ಸಭಾಂಗಣದಲ್ಲಿ 'ಅಭಿವೃದ್ಧಿ ಮತ್ತು ಪರಿಸರಗಳ ಮುಖಾಮುಖಿ : ಸಂಘರ್ಷ ಮತ್ತು ಸಹಕಾರ' ಕುರಿತು ಹಾಗೂ ೨೩-೮-೨೦೧೪ರಂದು 'ಜಾಗತೀಕರಣದ ಯುಗದಲ್ಲಿ ರಾಷ್ಟ್ರೀಯವಾದ ಮತ್ತು ಆರ್ಥಿಕ ಅಭಿವೃದ್ಧಿ' ಕುರಿತು ನವದೆಹಲಿಯ ಜವಹರಲಾಲ್ ನೆಹರು ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕ, ಅರ್ಥಶಾಸ್ತ್ರಜ್ಞ ಪ್ರೊ॥ ಅಮಿತ್ ಬಾಧುರಿ ವಿಶೇಷ ಉಪನ್ಯಾಸ ನೀಡಿದರು. ಮಂಗಳೂರು ವಿ. ವಿ. ಅರ್ಥಶಾಸ್ತ್ರ ವಿಭಾಗದ ಮುಖ್ಯಸ್ಥ ಪ್ರೊ॥ ಕಲ್ಲೂರಾಯ, ನಿವೃತ್ತ ಪ್ರಾಧ್ಯಾಪಕ ಪ್ರೊ॥ ಸುರೇಂದ್ರ ರಾವ್, ಪ್ರಾಂಶುಪಾಲ ಶ್ರೀ ಸತ್ಯನಾರಾಯಣ ಮಲ್ಲಿಪಟ್ಟಣ ಮುಂತಾದವರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಡಾ॥ ಶ್ರೀನಿವಾಸ ಕಕ್ಕಿಲ್ಲಾಯ ಸ್ವಾಗತಿಸಿದರು.

# ನೆಮ್ಮದಿಯನ್ನು ಹೆಚ್ಚುಮಾಡಿಕೊಳ್ಳುವ ಪ್ರಪಂಚ ಬರಲಿ

# ಯು. ಆರ್. ಅನಂತಮೂರ್ತಿ




ಇತ್ತೀಚೆಗೆ ನಮ್ಮನ್ನಗಲಿದ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ, ಸಾಹಿತಿ, ಚಿಂತಕ ಯು. ಆರ್. ಅನಂತಮೂರ್ತಿಯವರೊಂದಿಗೆ, ಅವರಿಗೆ ೮೦ ತುಂಬಿದ ಸಂದರ್ಭದಲ್ಲಿ ರೋಹಿತ್ ಚಕ್ರತೀರ್ಥ ಅವರು ನಡೆಸಿದ ಸಂದರ್ಶನದ ಆಯ್ದ ಭಾಗ. – **ಸಂ.**

**ಮಾ**ತುಕತೆ ನಡೆದದ್ದು ಅವರ ಮನೆ "ಸುರಗಿ"ಯಲ್ಲಿ. ನಾನು ಅವರ ಮನೆಗೆ ಹೋದಾಗ, ಮೇಷ್ಟ್ರು ತುಸು ಜ್ವರದಿಂದ ಬಳಲುತ್ತಿದ್ದರು. ಮೈಮೇಲೆ ಶಾಲು ಹೊದ್ದುಕೊಂಡಿದ್ದರು. ಕೈಯಲ್ಲೊಂದು ಪುಸ್ತಕ. "ಮೇಷ್ಟ್ರೇ, ಸಂದರ್ಶನ ಇನ್ನೊಂದು ದಿನ ಇಟ್ಟುಕೊಳ್ಳೋಣ. ಮಾತಾಡಿ ಆಯಾಸ ಮಾಡಿಕೊಳ್ಳಬೇಡಿ" ಅಂದರೆ, "ಹರಟೆ ಹೊಡೆಯುವುದಕ್ಕಿಂತ ಸಂತೋಷದ ಕೆಲಸ ಬೇರೆ ಯಾವುದಿದೆ ! ಬಾ ಕೂತುಕೊ, ಮಾತಾಡೋಣ !" ಅಂದುಬಿಟ್ಟರು. ಮಾತ್ರವಲ್ಲ, ನಿರರ್ಗಳವಾಗಿ ತಮ್ಮ ಎಂದಿನ ಆಪ್ತ ಮೆಲುದನಿಯಲ್ಲಿ ಎರಡು ಗಂಟೆ ಮಾತಾಡಿದರು !

**ರೋಹಿತ್ ಚಕ್ರತೀರ್ಥ :** ನಿಮ್ಮ ಹೆಸರಿಂದಾನೇ ಶುರು ಮಾಡೋಣ. ನಿಮ್ಮ ಹೆಸರಲ್ಲಿ ಉಡುಪಿ ಇದೆ ಅಲ್ವ. ಇದು ಹೇಗೆ ಸೇರಿಕೊಂಡಿತು ? ಉಡುಪಿಯ ಜೊತೆ ನಿಮ್ಮ ಸಂಬಂಧ ಯಾವ ಬಗೆಯದು ?

**ಯು. ಆರ್. ಅನಂತಮೂರ್ತಿ :** ನನ್ನ ಪೂರ್ವಜರು ಉಡುಪಿಯವರು. ನನ್ನ ಅಜ್ಜ ಹುಟ್ಟಿದ್ದು ಉಡುಪಿಯಲ್ಲಿ. ಆಮೇಲೆ ಅವರು ಕೇರಳಕ್ಕೆ ಹೋದರು. ಅಲ್ಲಿ ಪೂಜೆಗೀಜೆ ಮಾಡ್ಕೊಂಡಿದ್ರು. ಆಯುರ್ವೇದ ಕಲಿತ್ರು. ನನ್ನಪ್ಪ ಕೇರಳದಲ್ಲಿ ಹುಟ್ಟಿದ್ರು. ಆಮೇಲೆ ಅವರೆಲ್ಲ ತಿರುಗಿ ಮಲೆನಾಡಿಗೆ ಬಂದ್ರು.

ನನ್ನ ತಾಯಿ ತುಳು ಮಾತಾಡ್ತಿದ್ರು. ನನ್ನಜ್ಜಾನೂ ತುಳು ಮಾತಾಡ್ತಿದ್ರು. ನನ್ನಪ್ಪ ಲೋಕಸಂಚಾರಿಯಾದ್ದರಿಂದ ಅಷ್ಟು ತುಳು ಮಾತಾಡ್ತಿರಲಿಲ್ಲ. ಹಾಗಾಗಿ ನನಗೊಂದು ಕ್ವಚಿತ್ತಾದ ಭಾಷೆಯ, ಉಡುಪಿಯ ಊಟ–ರುಚಿಯ ಸಂಬಂಧ ಇದೆ. ಉಡುಪಿ ಕಡೆಯ ಆಚರಣೆಗಳೆಲ್ಲ ನಮ್ಮ ಮನೆಯಲ್ಲಿತ್ತು. ಯಕ್ಷಗಾನದ ಜೊತೆಗೂ ಸಂಬಂಧವಿತ್ತು. ತಾಯಿಯ ತಂದೆ ತಾಳಮದ್ದಲೆಯಲ್ಲಿ ಭಾಗವಹಿಸ್ತಿದ್ರು. ನಾನೂ ಸ್ವಲ್ಪ ಕಾಲ ಉಡುಪಿಯಲ್ಲಿ ವಾಸವಿದ್ದೆ.

**ರೋಹಿತ್ :** ನೀವು ಬಹಳ ಮಡಿವಂತ ಬ್ರಾಹ್ಮಣನಾಗಿ ಬಾಲ್ಯವನ್ನು ಕಳೆದವರು. ಆದರೆ ತಿರುಪತಿಯಲ್ಲಿ ಉಪನಯನ ಆದ ಮೇಲೆ ದೇವರನ್ನು ನೋಡಿದಾಗ ಇವನು ದೇವರಲ್ಲ ಅನ್ನೋದಕ್ಕೆ ಶುರುವಾಯಿತು ಅಂತ ಹೇಳಿಕೊಂಡಿದೀರಿ. ಯಾಕೆ ಈ ಥರ ಆಯಿತು ?

ಸಂದರ್ಶನ ಲೇಖನ :
**ರೋಹಿತ್ ಚಕ್ರತೀರ್ಥ**

**ಅ. ಮೂ. :** ಬಹಳ ಮುಖ್ಯವಾಗಿ ಗಾಂಧಿಯ "ಹರಿಜನ" ಪತ್ರಿಕೆಯನ್ನು ಮನೆಗೆ ತರಿಸ್ತಾ ಇದ್ರು. ನನ್ನಪ್ಪ ಅದನ್ನು ಓದ್ತಾ ಇದ್ರು. ಗಾಂಧೀಜಿಯವರಲ್ಲಿ ತೀವ್ರವಾದ ದೇವರ ಹುಡುಕಾಟ ಇದೆ. ಸತ್ಯವೇ ದೇವರು ಅಂತಾರೆ ಅವರು. ನಮ್ಮ ಆಚರಣೆಯಲ್ಲಿ ಇದ್ದದ್ದೆಲ್ಲ ಮೂಢನಂಬಿಕೆಯಲ್ಲಿ ಉಂಟಾಗುವ ದೇವರು. ಆದರೆ, ಸತ್ಯವೇ ದೇವರು ಅಂತಾದಾಗ ದೇವರ ಬಗ್ಗೆ ನಮ್ಮ ಆಸಕ್ತಿ ಇನ್ನಷ್ಟು ಗಂಭೀರವಾಗುತ್ತೆ. ಹಾಗಾಗಿ, ಅಷ್ಟೆಲ್ಲ ಬಂಗಾರ–ವಜ್ರ–ವೈಡೂರ್ಯಗಳನ್ನು ಹೇರಿಕೊಂಡ ವಿಗ್ರಹವನ್ನು ನನಗೆ ದೇವರು ಅಂತ ಒಪ್ಪಿಕೊಳ್ಳಲಿಕ್ಕೆ ಆಗಲಿಲ್ಲ.

ನಮ್ಮೂರಲ್ಲೇ ಒಂದು ಸಣ್ಣ ದೇವಾಲಯ ಇತ್ತು, ಪ್ರಕೃತಿಯ ಮಧ್ಯೆ. ಅಲ್ಲಿ ನನಗೆ ದೇವತಾ ಭಾವ ಮೂಡ್ತಿತ್ತು. ದೈವತ್ವದ ನಿರಾಕರಣೆ ನನ್ನಲ್ಲಿಲ್ಲ, ಹುಡುಕಾಟ ಇದೆ.

**ರೋಹಿತ್ :** ಹಾಗಾದ್ರೆ ಇವತ್ತೂ ನೀವು ನಾಸ್ತಿಕರು ಅಂತ ಹೇಳ್ಕೊಳ್ಳಲ್ವ ?

**ಅ. ಮೂ. :** ಇಲ್ಲ. ನಾನು ನಾಸ್ತಿಕ ಅಲ್ಲ. ಆದರೆ, ಸುಲಭವಾಗಿ ನಂಬುವ ಆಸ್ತಿಕನೂ ಅಲ್ಲ.

**ರೋಹಿತ್ :** ನೀವು ದಲಿತರ ವಿಚಾರವಾಗಿ, ಹರಿಜನರ ವಿಚಾರವಾಗಿ, ಸಮಾಜದ ಕೆಳಸ್ತರದ ಜನರ ಬಗ್ಗೆ ಗದ್ಯ ಬರೀತೀರಿ, ಮಾತಾಡತೀರಿ, ಎಲ್ಲ ಸರಿ. ಆದರೆ, ನಿಮ್ಮ ಕತೆಗಳಲ್ಲಿ ಬ್ರಾಹ್ಮಣರ ಕುಟುಂಬಗಳ ಒಳಗಿನ ವಿಷಯಗಳೇ ಬರ್ತವಲ್ಲ ? ಉದಾಹರಣೆಗೆ, ಸಂಸ್ಕಾರದಲ್ಲಿ ಚಂದ್ರಿ ಹೊರಗಿನವಳೇ ಆಗಿ ಉಳೀತಾಳೆ...

**ಅ. ಮೂ. :** ನೀವು ಹೇಳೋದು ನಿಜ. ಯಾಕೇಂದ್ರೆ ನನಗೆ ಯಾವುದನ್ನು ಒಳಗಿನಿಂದ



ಪತ್ನಿ ಶ್ರೀಮತಿ ಎಸ್ತರ್ ಅವರೊಂದಿಗೆ ಅನಂತಮೂರ್ತಿ

ಕಾಣೋದಕ್ಕೆ ಸಾಧ್ಯವೋ ಅದನ್ನು ಒಳಗಿನಿಂದ ಕಂಡು ಬರೀಬಹುದು. ಯಾವುದನ್ನು ನನಗೆ ಕಾಣಲಿಕ್ಕೆ ಸಾಧ್ಯವಿಲ್ಲವೋ ಅದನ್ನು ಕಂಡಿದೇನೆ ಅನ್ನುವ ಸುಳ್ಳನ್ನು ಹೇಳಬಾರದು. ಅದೊಂದು ಕಾರಣ. ಇನ್ನೊಂದು – ನಾವು ಕಾಣುವ ರೀತಿಯಲ್ಲೇ ನಿಜವಾಗಿಯೂ ನಮ್ಮ ಪಾಲಿಗೆ ಅವರಿರೋದು. ನಾವು ಮುಟ್ಟುವ, ನಮ್ಮ ಜೊತೆ ಊಟ ಮಾಡುವ ಜನ ಅಲ್ಲ ಅವರು. ನಮಗೆಲ್ಲ ಪ್ರಾಯ ಆದ ಮೇಲೆ ಅವರ ಜೊತೆ ಬೆರೆತೆವು, ಅಷ್ಟೆ. ನನ್ನ ಬಾಲ್ಯದಲ್ಲಿ ಅವರು ಹೊರಗಿನವರು. ಇದು ನಮ್ಮ ಒಳಗೆ ಇರುವ ಟೊಳ್ಳನ್ನು ತೋರಿಸುತ್ತೆ ಅಂತ ನನಗೆ ಅನ್ನಿಸಕ್ಕೆ ಶುರುವಾಯ್ತು.

ದೇವಸ್ಥಾನಕ್ಕೆ ಆ ಜನರ ಪ್ರವೇಶ ಇಲ್ಲ, ದೇವರು ಅವರಿಂದ ದೂರ ನಿಲ್ತಾನೆ ಅನ್ನೋ ಕಾರಣಕ್ಕೇನೇ "ದೇವರು ಅಪೂರ್ಣ" ಅನ್ನುವ ಭಾವನೆ ನನ್ನಲ್ಲಿ ಬೆಳೀತು.

**ರೋಹಿತ್ :** ನಿಮ್ಮ 'ಭಾರತೀಪುರ'ದಲ್ಲಿ ಈ ಪ್ರಶ್ನೆ ಬರುತ್ತೆ.

**ಅ. ಮೂ. :** ಹೌದು. ಅಲ್ಲಿ ಎಲ್ಲ ಹಂತಗಳಲ್ಲೂ ಅವರು ಬರ್‍ತಾರೆ. ಮೊದಲು ಬರೀ ದೂರದಲ್ಲಿರೋರು, ಆಮೇಲೆ ಕೇವಲ ಪಾಠ ಹೇಳಿಸ್ಕೊಳ್ಳೋರು, ಸ್ವಲ್ಪ ಹತ್ರ ಬರೋರು, ಮುಟ್ಟಕ್ಕೆ ಹೋದರೆ ಮುಟ್ಟಿಸ್ಕೊಳ್ಳದೇ ಇರೋರು, ...ಹೀಗೆ, ಹತ್ತಿರ ಆಗ್ತಾ ಹೋಗ್ತಾರೆ, ಆದರೂ ದೂರವಾಗೇ ಉಳೀತಾರೆ. ಇದೆಲ್ಲ ಹೇಗೆ ಅಂದ್ರೆ, ಈಗಿನ ಒಬ್ಬ ಅಮೇರಿಕದ ಬಿಳಿಯನಿಗೆ ಒಬ್ಬ ಕರಿಯನನ್ನು ತನ್ನ ಕತೆಯ ಪಾತ್ರ ಮಾಡೋದು ಬಹಳ ಕಷ್ಟ. ಇಂಥ ಕಷ್ಟವನ್ನು ಮೀರಿ ಬರೆದವರು – ಕಾರಂತರು "ಚೋಮನ ದುಡಿ"ಯಲ್ಲಿ, ಕುವೆಂಪು "ಮಲೆಗಳಲ್ಲಿ ಮದುಮಗಳು"ನಲ್ಲಿ. ಒಬ್ಬ ಬ್ರಾಹ್ಮಣ ಹುಡುಗನಿಗೆ ಇಲ್ಲದೇ ಇರುವ ಸ್ವಾತಂತ್ರ್ಯ ಕುವೆಂಪು ಅವರಿಗಿತ್ತು.

**ರೋಹಿತ್ :** ನಿಮಗೆ ಅದರ ಬಗ್ಗೆ ಏನಾದ್ರೂ ಬೇಸರ ಇದೆಯ ?

**ಅ. ಮೂ. :** ಖಂಡಿತ ಇದೆ. ಅದೊಂದು ಸಮಸ್ಯೆಯಾಗಿದೆ ನನಗೆ. ನನ್ನ ಒಳಬಾಳಿನ, ಲೇಖಕ ಪ್ರಪಂಚದ ವ್ಯವಸಾಯದ ಸಮಸ್ಯೆಯಾಗಿ.

ಅಪೂರ್ಣತೆಯ ಭಾವ ಈಗಲೂ ಇದೆ. ದಲಿತರ ಬಗ್ಗೆ ಅಂತಲ್ಲ, ಮುಸ್ಲಿಮರ ಜಗತ್ತಿಗೂ ನಾನು ಹೊರಗಿನವನೇ.

**ರೋಹಿತ್ :** ನೀವು ಮದುವೆಯಾದ ಸಂದರ್ಭ ಹೇಗಿತ್ತು ? ಆಗ ನಿಮ್ಮ ಕಡೆಯಿಂದ ಅಥವಾ ಅವರ ಕಡೆಯಿಂದ ವಿರೋಧ ಬರಲಿಲ್ಲವಾ ?

**ಅ. ಮೂ. :** ನಾನು ಮೈಸೂರಿನಲ್ಲಿದ್ದಾಗಲೇ ಮದುವೆಯಾದದ್ದು. ಆದರೆ ನನ್ನ ಹೆಂಡತಿಯನ್ನು ನೋಡಿದ್ದು ಹಾಸನದಲ್ಲಿ. ಆಕೆ ಅಲ್ಲಿ ನನ್ನ ವಿದ್ಯಾರ್ಥಿನಿಯಾಗಿದ್ಲು. ಬಹಳ ವರ್ಷ ನಾನು ಕಾದೆ. ಯಾಕೇಂದ್ರೆ ನನ್ನ ತಂಗಿಗೆ ಮದುವೆ ಆಗ್ಬೇಕಾಗಿತ್ತು. ತಮ್ಮಂದಿರನ್ನು ಓದಿಸಬೇಕಾಗಿತ್ತು. ನಾನು ತುಂಬಾ ಮಡಿವಂತ ಕುಟುಂಬದಿಂದ ಬಂದಿದ್ದರಿಂದ, ನನ್ನ ಹಕ್ಕಿಗಿಂತ ಹೆಚ್ಚಾಗಿ ನನ್ನ ಕರ್ತವ್ಯಪ್ರಜ್ಞೆ ನನಗಿತ್ತು.




ಹಾಗಾಗಿ ಎಲ್ಲ ಜವಾಬ್ದಾರಿಗಳನ್ನು ನಿರ್ವಹಿಸಿದ ಮೇಲೆ ಮದುವೆಯಾದೆ.

ವಿರೋಧಗಳು – ಕಡಿಮೆಯಿತ್ತು. ನಾನು ಯಾವತ್ತೂ ಕುಟುಂಬದ ಸಂಬಂಧವನ್ನು ಕತ್ತರಿಸಿ ಕಳಕೊಳ್ಳಲಿಲ್ಲ. ಕಳಿತ ಹಣ್ಣು ಮರದಿಂದ ತೊಟ್ಟು ಕಳಚಿಕೊಂಡು ಉದುರಿದ ಹಾಗೆ ನಾನು ನನ್ನ ಸಂಪ್ರದಾಯದ ಕುಟುಂಬದಿಂದ ಬೇರೆಯಾದೆ, ಅಷ್ಟೆ.

**ರೋಹಿತ್ :** ನಿಮ್ಮ ಮೇಲೆ ಬಹಳ ಪ್ರಭಾವ ಬೀರಿದವರು, ಕಾಡಿದವರು ಯಾರು ?

**ಅ. ಮೂ. :** ಕನ್ನಡದಲ್ಲಿ ಕಾರಂತರು, ಅಡಿಗರು, ಕುವೆಂಪು, ಬೇಂದ್ರೆ – ಇವರೆಲ್ಲ ಬಹಳ ಕಾಡಿದ್ದಾರೆ. ಇಂಗ್ಲಿಷಿನಲ್ಲಿ ಲಾರೆನ್ಸ್, ಯೇಟ್ಸ್, ಎಲಿಯೆಟ್. ಈ ಪೂರ್ವ–ಪಶ್ಚಿಮ ಎರಡೂ ಹತ್ತಿರವಾಗಿ ನನ್ನೊಳಗೆ ಸೇರಿಬಿಟ್ಟಿದಾವೆ. ಅವಷ್ಟನ್ನೂ ನಾನು ಸ್ವೀಕರಿಸಿದ್ದೇನೆ. ಮೂರನೇ ಜಗತ್ತಿನ ಲೇಖಕನ ವಿಶೇಷವೇ ಅದು. ಮೊದಲ ಜಗತ್ತಿನ ಲೇಖಕನಿಗೆ ಅವನ ಜಗತ್ತು ಗೊತ್ತು, ನಮ್ಮದು ಗೊತ್ತಿಲ್ಲ. ನಮಗೆ – ನಮ್ಮದೂ ಅವರದೂ – ಎರಡೂ ಜಗತ್ತುಗಳು ಗೊತ್ತು. ಹಾಗಾಗಿ ನಾವು ಅವರಿಗಿಂತ ಹೆಚ್ಚು ಹೊರೆಯನ್ನು ಹೊತ್ತವರು ಮತ್ತು ಹೆಚ್ಚು ಆಸ್ತಿಯನ್ನು ಪಡೆದವರು ಕೂಡ.

**ರೋಹಿತ್ :** ನೀವು ಸಾಹಿತಿ ಆಗ್ತೀನಿ ಅಂತ ಅಂದ್ಕೊಂಡಿದ್ರ ? ಇಲ್ದೇ ಇದ್ರೆ ಬೇರೆ ಏನು ಆಗಬೇಕು ಅಂತ ಆಸೆ ಇತ್ತು ?

**ಅ. ಮೂ. :** ನನ್ನಪ್ಪನಿಗೆ ನಾನು ಗಣಿತಶಾಸ್ತ್ರಜ್ಞ ಆಗಬೇಕು ಅಂತ ಆಸೆಯಿತ್ತು. ನನಗದರ ಕಡೆಗೆ ಆಸಕ್ತಿಯೂ ಇತ್ತು, ಚಿಕ್ಕವಯಸ್ಸಿನಲ್ಲಿ. ಆದರೆ ಜೀವನದಲ್ಲಿ ಆದ ಅನೇಕ ಪಲ್ಲಟಗಳಿಂದ ಮತ್ತು ಅವನ್ನು ನಾನು ಸ್ವೀಕರಿಸ್ತಾ ಹೋದದ್ದರಿಂದ ಸಾಹಿತಿ ಆದೆ.

**ರೋಹಿತ್ :** ನಿಮ್ಮ "ಆವಾಹನೆ" ನಾಟಕದ ಬಗ್ಗೆ ಒಂದು ಪ್ರಶ್ನೆ : ಇದು ನಿಜವಾಗಿ ಏನನ್ನು ಚರ್ಚಿಸುತ್ತೆ ? ಇದನ್ನು ಬರೆದ ಸಂದರ್ಭದ ಬಗ್ಗೆ ಹೇಳಿ.

**ಅ. ಮೂ. :** ನನ್ನೊಬ್ಬ ಸ್ನೇಹಿತ ತನ್ನ ಜಾತಿಯನ್ನು ಮುಚ್ಚಿಟ್ಟುಕೊಂಡಿದ್ದ. ಅದರಿಂದಾಗಿ ಅವನ ಇಡೀ ಜೀವನದಲ್ಲೇ ಅನೇಕ ಬದಲಾವಣೆಗಳಾದ್ವು. ಇದನ್ನು ನಾಟಕೀಯವಾಗಿ ವೇದಿಕೆ ಮೇಲೆ ತರಬೇಕು ಅನ್ನಿಸಿತು. "ಆವಾಹನೆ"ಯಲ್ಲಿ ಅದು ಸಂಪೂರ್ಣ ಯಶಸ್ವಿಯಾಯಿತು ಅಂತ ಹೇಳಲಾರೆ.

**ರೋಹಿತ್ :** ಮತ್ತೆ ನೀವು ನಾಟಕಗಳನ್ನು ಬರೀಲಿಲ್ಲ.

**ಅ. ಮೂ. :** ನನ್ನ ಕತೆಗಳೇ ನಾಟಕಗಳಾದವು.

**ರೋಹಿತ್ :** ನಿಮ್ಮ ಮೊದಲ ಕಥಾಸಂಕಲನ "ಎಂದೆಂದೂ ಮುಗಿಯದ ಕಥೆ"ಯಿಂದ "ಪ್ರಶ್ನೆ"ಗೆ ಬರೋ ಹೊತ್ತಿಗೆ ನಿಮ್ಮಲ್ಲಿ ಬಹಳ ಬದಲಾವಣೆಗಳಾಗಿತ್ತು ಅಂತ ಅನ್ನಿಸ್ತದೆ.

**ಅ. ಮೂ. :** ಖಂಡಿತ. ಒಂದು "leap" ತಗೊಂಡೆ. ನಾನು ನನ್ನ ಆಲೋಚನಾ ಕ್ರಮ, ಗಾಢವಾಗಿ ಒಂದು ರೂಪಕ ಆಗೋದಕ್ಕೆ ಕಾಯ್ತಾ ಇರ್ತೀನಿ. ನನ್ನ ಹೊಸ ಚಿಂತನೆಗಳ ದೃಷ್ಟಿಯನ್ನು, ದರ್ಶನಗಳನ್ನು ನುಡಿಯೋ ತರಹ ನನ್ನ ಬರಹ ಇರಬೇಕು ಅಂತ ಬಯಸ್ತೇನೆ.

**ರೋಹಿತ್ :** ಒಬ್ಬ ಬ್ರಾಹ್ಮಣ "ಘಟಶ್ರಾದ್ಧ"ವನ್ನು ಓದೋದಕ್ಕೂ ಒಬ್ಬ ದಲಿತ ಓದೋದಕ್ಕೂ ವ್ಯತ್ಯಾಸ ಇರಬಹುದು, ಅಲ್ವೆ ? ಈ ನಿಟ್ಟಿನಲ್ಲಿ ನೋಡಿದಾಗ, ನಮ್ಮ ಹಳ್ಳಿಗಳ, ಜಾತಿ, ಧರ್ಮಗಳ ಒಳಗಿನ ಕತೆಗಳನ್ನು ಬರೀತಾ ಇರೋ ಲೇಖಕರನ್ನು ಹೊರಗಿನ ಜಗತ್ತು ಹೇಗೆ ಸ್ವೀಕರಿಸಿದೆ ?

**ಅ. ಮೂ. :** ಒಂದು ಸಾಹಿತ್ಯಕೃತಿಗೆ ಸಾರ್ವತ್ರಿಕ ಆಗಿರುವಂತಹ ಗುಣ ಇದೆ ಅಂದ್ರೆ ಅದು ಬೇರೆಯವರ ಗುಣ–ಜಾಯಮಾನಕ್ಕೆ ತಕ್ಕ ಹಾಗೆ ಬೇರೆಬೇರೆ ಆಯಾಮಗಳನ್ನು ಪಡಕೊಳ್ಳುತ್ತೆ. ನನ್ನ "ಘಟಶ್ರಾದ್ಧ" ಕತೇನ್ನ ಅಮೇರಿಕದಲ್ಲಿ ಪಾಠ ಮಾಡುವಾಗ ತೋರಿಸಿದ್ರು. ಅಲ್ಲಿ ಸೇರಿದ್ದ ಯಹೂದ್ಯ ಹೆಂಗಸರು, "ಇದು ನಮ್ಮಲ್ಲಿ ಯಾರದ್ದು ಬೇಕಾದ್ರೂ ಕತೆ ಆಗಿರಬಹುದು" ಅಂದ್ರು! ಈ ಗುಣ ಸಾಹಿತ್ಯಕೃತಿಗೆ ಇರೋದು ಬಹಳ ಮುಖ್ಯ. ನೀವು ಎಲ್ಲರಿಗೂ ಸಲ್ಲುವ ಹಾಗೆ ಬರೀಬೇಕು ಅಂದಾಗ ಅದು ಬಹಳ ನೀರುನೀರಾಗಿ ಬಿಡುತ್ತೆ. ಯಾವುದೋ ಒಂದು ಸ್ಥಳದಲ್ಲಿ ನಿಜವಾಗಿ ನಡೆದದ್ದು ಅನ್ನೋ ರೀತಿಯಲ್ಲಿ ಬರೆದಾಗ, ಅದು ಎಲ್ಲ ವರ್ಗಗಳಿಗೂ ಸಲ್ಲುವ ಗುಣಗಳನ್ನು ಪಡೆದುಕೊಳ್ಳಬಹುದು.

**ರೋಹಿತ್ :** ನಿಮ್ಮ ಕತೆಗಳ ಮೂಲಕ ನೀವು ಮತ್ತೆ ಮತ್ತೆ ನಿಮ್ಮ ಹುಟ್ಟೂರಿಗೆ ಹೋಗ್ತೀರಿ. ನಮ್ಮ ಅನೇಕ ಲೇಖಕರು ಕೂಡ ಹೀಗೇನೆ ?

**ಅ. ಮೂ. :** ನಂಗೂ ಈ ಪ್ರಶ್ನೆ ಕಾಡಿದೆ. ಬಹಳ ಸಲ ಅನ್ನಿಸಿದೆ – ಯಾಕೆ ಬೆಂಗಳೂರು ಜೀವಂತವಾಗಿ ನಮ್ಮ ಕೃತಿಗಳಲ್ಲಿ ಬರಲ್ಲ ಅಂತ. ಬಹುಶಃ ಈಗ ಇದೊಂದು ನಗರ ಅಂತಾನೇ ಅನ್ನಿಸ್ತಿಲ್ಲ ಅಂತಲೋ ?

**ರೋಹಿತ್ :** ನಮ್ಮ ಭಾರತೀಯ ಭಾಷೆಗಳಲ್ಲಿ ಬರೀತಾ ಇರುವ ಲೇಖಕರು ಹೊರಗಡೆ ಪ್ರಸಿದ್ಧರಾಗದೆ ಇರೋದಕ್ಕೆ ಏನು ಕಾರಣ ಇರಬಹುದು ? ಅವರ ಕೃತಿಗಳು ಸಮರ್ಥ ಇಂಗ್ಲಿಷ್ ಅನುವಾದಕ್ಕೆ ದಕ್ಕಿಲ್ಲ ಎಂದೇ ?

**ಅ. ಮೂ. :** ಪ್ರಸಿದ್ಧರಾಗಬೇಕು ಅಂತ ಬಯಸಿದರೆ ಚೀಪಾಗಿಬಿಡುತ್ತೆ. ಅದು ಬಯಸಿ ಆಗುವಂಥಾದ್ದಲ್ಲ. ಪ್ರಸಿದ್ಧರಾಗದೆ ಇರೋದಕ್ಕೆ ಬಹಳ ಮುಖ್ಯ ಕಾರಣ ಅಂದ್ರೆ ಬೇರೆ ದೇಶದವರು ಮಾರ್ಕೆಟಿಂಗ್ ಮಾಡ್ತಾರೆ, ನಮಗೆ ಮಾಡಕ್ಕೆ ಬರಲ್ಲ. ಕುವೆಂಪು, ಕಾರಂತರಿಗೆಲ್ಲ ನೊಬೆಲ್ ಬರಬೇಕಾಗಿತ್ತು. ಗಾಂಧೀಜಿಗೆ ಬರಬೇಕಾಗಿತ್ತು. ಆದ್ರೆ ಬರಲಿಲ್ಲ. ಆದ್ದರಿಂದ ನಾನು ಯಾವ ಪುರಸ್ಕಾರದಿಂದಾನೂ ಯಾವುದನ್ನೂ ಅಳೆಯಲ್ಲ. ನನಗೆ ಇವತ್ತು ಯಾವುದು ಪ್ರಸ್ತುತ ಅಂತ ನೋಡ್ತೀನಿ. ಭಾರತೀಯ ಸಾಹಿತ್ಯ ಭಾರತೀಯರಿಗೆ ಪ್ರಸ್ತುತ. ಅದಕ್ಕಿರುವಂತಹ ಬಿಗಿ, ಆಳ – ಇತ್ಯಾದಿಗಳು ವಿಶಿಷ್ಟವಾದವು. ಜಾಗತಿಕವಾಗಿಯೂ ಅಷ್ಟೇ – ಇಂಗ್ಲಿಷ್, ಫ್ರೆಂಚ್ ಇತ್ಯಾದಿ ಭಾಷೆಗಳಲ್ಲಿ ಬರೋದಕ್ಕಿಂತ ಸ್ಪ್ಯಾನಿಷ್‌ನಲ್ಲಿ, ಹಿಂದುಳಿದ ದೇಶಗಳಲ್ಲಿ ಒಳ್ಳೆಯ, ಜೀವಂತಿಕೆ ಪಡೆದ ಸಾಹಿತ್ಯ ಬರತಾ ಇದೆ.

**ರೋಹಿತ್ :** ನಮ್ಮ ಸಂಸ್ಕೃತಿಯ ಒಳಗಿನ ಭಿನ್ನತೆಗಳನ್ನು, ವೈಶಿಷ್ಟ್ಯಗಳನ್ನು ಇಂಗ್ಲಿಷಿನಲ್ಲಿ ಹೇಳೋದಕ್ಕೆ ಆಗದೇ ಇರೋದು ಕೂಡ ಕಾರಣವಿರಬಹುದು.

**ಅ. ಮೂ. :** ಹೌದು. ಈಗ ನೋಡಿ, ನಾನು "ಅವನು ಬೆಳಗ್ಗೆ ಎದ್ದು ಮಸಾಲೆ ದೋಸೆ ತಿಂದ" ಅಂದ್ರೆ ನಿಮಗರ್ಥವಾಗುತ್ತೆ – ಅವನೇನೋ ತುಂಬ ಹೆವಿಯಾದ್ದನ್ನು ತಿಂದ, ಅಂತ. ಆದರೆ, ವಿದೇಶೀಯರಿಗೆ ಅದನ್ನು ನಾವು ಬ್ರಾಕೆಟ್‌ನಲ್ಲಿ ಬರೆದು ಹೇಳ್ಬೇಕಾಗುತ್ತೆ !

ಅದೇ – ನಾವು ಇಂಗ್ಲಿಷ್ ಸಾಹಿತಿಗಳು ಬರೆದದ್ದನ್ನು ಅರ್ಥ ಮಾಡ್ಕೋತೀವಿ. ಯಾಕೆಂದರೆ ಅವರ ಬಗ್ಗೆ ನಮಗೆ ಹೆಚ್ಚು ಗೊತ್ತಿದೆ ನೋಡಿ. ಅವರು ನಮ್ಮನ್ನು ಆಳಿದವರು. ಅವರನ್ನು ನಾವು ಹತ್ತಿರದಿಂದ – ಭಯ ಮತ್ತು ಆಸಕ್ತಿಯಿಂದ ನೋಡಿದವರು. ಆದರೆ ನಮ್ಮ ಬಗ್ಗೆ ಅವರು ತಿಳ್ಕೊಂಡಿದ್ದು ಕಡಿಮೆ.

**ರೋಹಿತ್ :** ಇತ್ತೀಚೆಗೆ – ಕಾವ್ಯದಲ್ಲಿ ಪ್ರವೇಶ ಪಡೆಯಲು ವಿಮರ್ಶೆಯ ಸಹಾಯ ಬೇಕೆ ಬೇಡವೆ ಅನ್ನೋ ಚರ್ಚೆ ಶುರುವಾಗಿದೆ. ಪದ್ಯಗಳನ್ನು ಬಗೆವ ಬಗೆಯನ್ನು ತುಂಬ ವರ್ಷಗಳ ಕಾಲ "ರುಜುವಾತಿ"ನಲ್ಲಿ ಹೇಳಿಕೊಟ್ಟವರು ನೀವು. ಏನು ಹೇಳ್ತೀರಿ ಇದಕ್ಕೆ ?

**ಅ. ಮೂ. :** ವಿಮರ್ಶೆ ಅಂದ್ರೆ ಏನು ? ನಾನು ಏನೋ ಓದಿದಾಗ ಅಸ್ಪಷ್ಟವಾಗಿ ಗ್ರಹಿಸಿದ್ದನ್ನು ಇನ್ನೊಬ್ಬ ಸ್ನೇಹಿತನ ಜೊತೆ ಸ್ಪಷ್ಟಪಡಿಸಿಕೊಳ್ಳೋದು. ಅದೇ ವಿಮರ್ಶೆ. ಇನ್ನೊಬ್ಬ ಸಹ ಓದುಗನ ಓದಿನಲ್ಲಿ ನನ್ನ ಓದು ಪೂರ್ಣವಾಗುತ್ತೆ. ಆದರೆ ನನ್ನ ಓದಿನಲ್ಲೇ ಆ ಅಂಶ ಇಲ್ಲದೇ ಹೋದರೆ ಅವನದನ್ನು ಕೊಡಲಾರ. ಕಾವ್ಯದ ವಿಮರ್ಶೆ ಓದೋದಕ್ಕಿಂತ ಮುಂಚೆ, ಆ ಕಾವ್ಯ ನಿಮ್ಮಲ್ಲಿ ಕೆಲವು ಭಾವನೆಗಳನ್ನು ಹುಟ್ಟಿಸಿದ್ರೆ ಅಥವಾ ಅಸ್ಪಷ್ಟವಾಗಿದ್ರೆ ನೀವು ಒಂದು ಸಹಾಯವನ್ನು ತಗೋತೀರಿ. ಕವನ ಅನ್ನೋದು – ಕವಿಯಿಂದ ಹೇಗೋ – ಹತ್ತು ಜನರ ಓದಿನಿಂದಲೂ ತಯಾರಾಗುವಂಥಾದ್ದು.

ನಾನು ಅಡಿಗರ ಪದ್ಯ ವಿಮರ್ಶೆ ಮಾಡಿದಾಗ, ಅಷ್ಟೂ ವಿವರಗಳನ್ನು ಪದ್ಯದ ಒಳಗಿನಿಂದಲೇ ತಗೊಂಡೆ. ಅದನ್ನು ಓದಿದಾಗ ಒಬ್ಬ ಓದುಗನಿಗೆ – "ಹೌದಲ್ವೇ, ನನಗೂ ಈ ರೀತಿ ಅನ್ನಿಸಬಹುದಿತ್ತಲ್ವೆ ?" ಅಂತ ಅನ್ನಿಸಬೇಕು. ವಿಮರ್ಶೆ ಅನ್ನೋದು – ನಮಗೆ ಕವಿದಿರಬಹುದಾದ ಮಂಕನ್ನು ಹರಿದು ಕಾವ್ಯವನ್ನು ಹೆಚ್ಚುಹೆಚ್ಚು ಕಾಣಿಸುವ ಹಾಗಿರಬೇಕು.

**ರೋಹಿತ್ :** ಇತ್ತೀಚೆಗೆ ನೀವು ಹೆಚ್ಚುಹೆಚ್ಚು ಅನುವಾದದಲ್ಲಿ ತೊಡಗಿಸಿಕೊಂಡಿದೀರಿ.

**ಅ. ಮೂ. :** ಹೌದು. ನನಗೆ ಸ್ವಂತ ಬರೆಯಕ್ಕೆ ಆಗದೇ ಇದ್ದಾಗ ಅದನ್ನು ಮಾಡ್ತೀನಿ. ಒಂದು ರೀತಿ ಅದು ನನ್ನ ಮನಸ್ಸನ್ನು ಹರಿತವಾಗಿಡುತ್ತೆ. ಅನುವಾದದಲ್ಲಿ ನಾನು ಇನ್ನೊಬ್ಬರ ಮುಖಾಂತರ ಬದುಕೋದಕ್ಕೆ ನೋಡ್ತೀನಿ. ಒಬ್ಬ ಚಿತ್ರಕಾರ ತನ್ನ ಕೈಗಳನ್ನು ಚುರುಕಾಗಿಟ್ಟುಕೊಳ್ಳೋದಕ್ಕೆ ಕೆಲವು ಸಲ ಕಾಪಿ ಮಾಡ್ತಾನಂತೆ. ನಾನು ಅನುವಾದ ಮಾಡ್ತೇನೆ. ನನ್ನ ಕೈ ಕುದುರುತ್ತೆ ಅದರಿಂದ. ಇನ್ನೊಂದು ಮನಸ್ಸಿನ ಜೊತೆ ವ್ಯವಹಾರ ಮಾಡೋದು ಖುಷಿಯ ವಿಚಾರ.

**ರೋಹಿತ್ :** ಮೇಷ್ಟ್ರೇ, ರಾಜಕೀಯ ವಿವಾದಗಳೆದ್ದಾಗ ಅಲ್ಲಿ ಮೊದಲು ಕಾಣಿಸಿಕೊಳ್ಳುವ ಸಾಹಿತಿ ನೀವು. ನಿಮ್ಮ ರಾಜಕೀಯ ನಿಲುವುಗಳೇನು ?

**ಹೊಟ್ಟೆ ಪಾಡು**

ಮಾನವ
ಕೊಳಲೂದುವುದನು
ತೊರೆದು
ಬಿದಿರು
ಹಿಡಿಯುತ್ತಾನೆ
ಕಳಲೆ
ಕೀಳುತ್ತಾನೆ
ಭೂರಿ ಭೋಜನ
ಸವಿಯುತ್ತಾನೆ
ಇನ್ನು ವೀಣೆ
ಎಲ್ಲಿಂದ
ಬರಬೇಕು

**ಡಾ॥ ಮುತ್ತುರಾಜು**
ಕುಮಾರಸ್ವಾಮಿ ಬಡಾವಣೆ
ಬೆಂಗಳೂರು – ೫೬೦ ೦೭೮

**ಅ. ಮೂ. :** ನಾನು ಬಲಪಂಥೀಯ ಅಲ್ಲ. ಆದರೆ ಎಡಪಂಥೀಯವಾದ ಚೀನಾ, ಸೋವಿಯಟ್ ರಷ್ಯಗಳನ್ನು ನಿರಾಕರಿಸುವವನು. ಚೀನಾ, ಟಿಬೆಟ್‌ನಲ್ಲಿ ಮಾಡಿರುವ ಅತ್ಯಾಚಾರವನ್ನು ಯಾವ ಕಾರಣಕ್ಕೂ ಕ್ಷಮಿಸುವುದಕ್ಕೆ ಸಾಧ್ಯವಿಲ್ಲ. ಹಾಗೇನೇ ತಿಯನ್ ಆನ್‌ಮೆನ್ ಚೌಕದಲ್ಲಿ ವಿದ್ಯಾರ್ಥಿಗಳ ಹತ್ಯೆ ಆದಾಗ ನಾನು ಚೀನಾದಲ್ಲಿದ್ದರೂ ಪ್ರತಿಭಟನೆ ಮಾಡಿದೆ. ಇದರಿಂದ ಎಷ್ಟೋ ಕಮ್ಯುನಿಸ್ಟ್ ಗೆಳೆಯರು ದೂರ ಆದ್ರು. ನಾನು ಚೀನಾವನ್ನು ವಿರೋಧಿಸಿದೆ ಅಂತ ನಾನು ವೈಸ್‌ಚಾನ್ಸಲರ್ ಆಗಿದ್ದ ಕೇರಳದ ಯೂನಿವರ್ಸಿಟಿಯಲ್ಲಿ ಕಮ್ಯುನಿಸ್ಟ್ ವಿದ್ಯಾರ್ಥಿಗಳು ಬಂಡೆದ್ದರು. ಆಗ ಹೇಳಿದೆ – ಸತ್ಯ ಹೇಳೋದಕ್ಕೆ ಭಯ ಯಾಕೆ, ಅಂತ. ಸತ್ಯ ಅನ್ನಿಸಿದ್ದನ್ನು ಹೇಳಬೇಕು. ನನ್ನನ್ನು ನಾನು ಕಾಪಾಡಿಕೋಬಾರದು. ಈ ಕಾಲದ ಸಾಕ್ಷಿ ಆಗಿರಬೇಕು.

ನನ್ನ ಈಗಿನ ರಾಜಕೀಯ ನಿಲುವು ಇದು – ಹಿಂಸೆ ನಿಲ್ಲಬೇಕು. ಅದು ಮತೀಯ ಹಿಂಸೇನೋ ನಕ್ಸಲ್‌ವಾದಿಗಳದ್ದೋ ಮಾವೋಗಳದ್ದೋ – ಯಾವುದೇ ಇರಲಿ, ಹಿಂಸೆಯಿಂದ ನಾವು, ನಮ್ಮ ಜಗತ್ತು ಮುಂದೆ ಹೋಗೋದಿಕ್ಕೆ ಸಾಧ್ಯವಿಲ್ಲ.

**ರೋಹಿತ್ :** ಈ ಮಾತು ನಿಮ್ಮ ಗಾಂಧೀವಾದಕ್ಕೆ ಬಹಳ ಹತ್ತಿರದ್ದು. ನೀವು ಗಾಂಧೀಜಿಯ ತತ್ವ, ಆದರ್ಶಗಳ ಬಗ್ಗೆ ಬಹಳ ತನ್ಮಯರಾಗಿ ಮಾತಾಡ್ತೀರಿ, ಬರೀತೀರಿ. ಆದರೆ, ಈಗಿನ ಯುಗಕ್ಕೆ ಇದು ಪ್ರಸ್ತುತ ಅಂತ ಅನ್ನಿಸುತ್ತ ?

**ಅ. ಮೂ. :** ಈಗಿನ ಯುಗಕ್ಕೆ ಮಾತ್ರವಲ್ಲ, ಮುಂದಿನ ಯುಗಕ್ಕೂ ಬೇಕಾಗುತ್ತೆ. ಯಾಕೇಂದ್ರೆ ನೀರು ಕಡಿಮೆಯಾಗ್ತಾ ಇದೆ. ನೀರಿನ ಮೇಲೇನೇ ಒಂದು ಯುದ್ಧ ಆಗ್ಬಹುದು ಅಂತಾರೆ. ಭೂಮಿಯ ಶಾಖ ಹೆಚ್ಚಾಗ್ತಾ ಇದೆ. ಆದ್ರಿಂದ ನಮ್ಮ ಬಳಕೆಯ ಮಟ್ಟದಲ್ಲಿ, ಶೈಲಿಯಲ್ಲಿ ಬಹಳ ದೊಡ್ಡ ಬದಲಾವಣೆ ಆಗ್ಬೇಕು. ಆಗ ಗಾಂಧಿ ಹೇಳಿದ ರೀತಿಯ ಸರ್ವೋದಯದ ಕಲ್ಪನೆ ಎಲ್ಲರಿಗೂ ಬೇಕಾಗುತ್ತೆ. ಈಗ ನಾವು ಅಮೆರಿಕಕ್ಕೆ ಹೇಳಬೇಕಾಗಿರೋದೂ ಅದೇ. ಕೂಡಲೇ ಅಲ್ದೆ ಇದ್ದರೂ ಕೈಸುಟ್ಟುಕೊಂಡ ನಂತರ ಇದರ ಬಗ್ಗೆ ನಮಗೆ ಅರಿವು ಮೂಡಬಹುದು. ಕಾರುಗಳು, ಅಗಲವಾದ ರಸ್ತೆಗಳು, ಮರಗಳನ್ನು ಕಡಿಯೋದು – ಇಂಥ ರೀತಿಯ ಡೆವಲಪ್‌ಮೆಂಟಿಗೆ ಮದ್ದು–ಪರಿಹಾರ ನಮಗೆ ಸಿಗೋದು ಗಾಂಧೀಜಿ ತತ್ವಗಳಲ್ಲೇ.

ಅವರೊಂದು ಅತಿರೇಕದಲ್ಲಿ ಅದನ್ನು ಹೇಳ್ತಾರೆ. ಅತಿರೇಕವನ್ನು ನಾವು ಒಪ್ಪಬೇಕಾಗಿಲ್ಲ. ಗಾಂಧಿ ಜೊತೆ ಜಗಳ ಇರ್ಬೇಕು ನಮಗೆ. ನನಗೇ ಬೇಕಾದಷ್ಟು ಇದ್ದಾವೆ. ಆದರೆ ಮೂಲಭೂತವಾಗಿ, ಮಾರ್ಕ್ಸ್ ಹೇಳಿದ ರೀತಿಗಿಂತ ಗಾಂಧಿ ಹೇಳಿದ ರೀತಿಯಲ್ಲಿ ಮುಂದಿನ ಪ್ರಪಂಚ ನಡೆಯುತ್ತೆ ಅಂತ ಕಾಣುತ್ತೆ. ಮಾರ್ಕ್ಸ್‌ನದು ಸತತವಾಗಿ ಸುಖ ಬೆಳೀತಾ ಹೋಗುವ ಪ್ರಪಂಚ. ಅದು ಸಾಧ್ಯವಿಲ್ಲ ಅಂತ ಗೊತ್ತಾಗ್ತಾ ಇದೆ ನಮಗೆ. ಆದರೆ ಗಾಂಧಿಯದು – ಸತತವಾಗಿ ನಮ್ಮ ಅಗತ್ಯತೆಗಳನ್ನು ಕಡಿಮೆ ಮಾಡಿಕೊಂಡು ನೆಮ್ಮದಿಯನ್ನು ಹೆಚ್ಚು ಮಾಡಿಕೊಳ್ಳುವ ಪ್ರಪಂಚ. ನೆಮ್ಮದಿಯ ಕಡೆಯ ಚಲನೆಯಲ್ಲಿ ಗಾಂಧಿ ಬೇಕಾಗ್ತಾರೆ.

ಮೇಷ್ಟ್ರು ಇನ್ನೂ ಮಾತಾಡುವ ತವಕದಲ್ಲಿದ್ದರು. ಆದರೆ, ಗಂಟೆಗಟ್ಟಲೆ ನಡೆಸಿದ ಮಾತು–ಮಥನ, ಅವರಿಗೆ ಸ್ವಲ್ಪ ಸುಸ್ತು ತಂದಿತ್ತು. ಮಾತುಕತೆ ನಿಲ್ಲಿಸೋಣ ಎಂದು ನಾನೇ ಸೂಚಿಸಿದೆ. ನನ್ನ ಜೊತೆ ಬಂದಿದ್ದ ಗೆಳೆಯ ಅವನ ಮೊಬೈಲಿನಲ್ಲಿ ಮೇಷ್ಟ್ರ ಫೋಟೋ ತೆಗೆದ. "ಅರೆ ! ಇಷ್ಟು ಚಿಕ್ಕ ಮೊಬೈಲಿನಲ್ಲಿ ಫೋಟೋ ಹೊಡೆಯಬಹುದೆ !" ಅಂತ ಮಗುವಿನ ಮುಖ ಮಾಡಿಕೊಂಡು ನಮ್ಮತ್ತ ಬಂದು, ತನ್ನ ಮುಖವನ್ನು ಫೋಟೋದಲ್ಲಿ ನೋಡಿಕೊಂಡು ಖುಷಿಪಟ್ಟರು ! "ಹೋಗಿ ಬರಲೇ, ಮೇಷ್ಟ್ರೇ ?" ಎಂದು ಎದ್ದೆ.

**ರೋಹಿತ್ ಚಕ್ರತೀರ್ಥ**
ನಂ. ೧೮೯, ೧೯ನೇ ಬ್ಲಾಕ್, ಜೀವನ ಮಿತ್ರ ಅಪಾರ್ಟ್‌ಮೆಂಟ್
೯ನೇ ಅಡ್ಡರಸ್ತೆ, ೧ನೇ ಫೇಸ್, ಜೆ. ಪಿ. ನಗರ
ಬೆಂಗಳೂರು – ೫೬೦ ೦೭೮

## ಜಿ. ರಾಮಕೃಷ್ಣ

# ಒಗಟಾಗಿಯೇ ಉಳಿದ ಅನಂತಮೂರ್ತಿ

**ಮಾ**ನ್ಯ ಡಾ॥ ಯು. ಆರ್. ಅನಂತಮೂರ್ತಿಯವರು ಗತಿಸಿದ ಹೊತ್ತಿನಲ್ಲಿ ನಾನು ಮಣಿಪಾಲ್ ಆಸ್ಪತ್ರೆಯಲ್ಲಿದ್ದೆ. ಆಸ್ಪತ್ರೆಗೆ ಸಂಜೆ ಸುಮಾರು ೫.೪೫ಕ್ಕೆ ಹೋದಾಗ ಅಂಗಣದಲ್ಲಿ ಆಸ್ಪತ್ರೆಯ ನಿರ್ದೇಶಕರು ಮಾಧ್ಯಮದವರಿಗೆ ಅನಂತಮೂರ್ತಿಯವರ ಆರೋಗ್ಯ ಹದಗೆಡುತ್ತಿದೆ, ಆದರೆ ಸಾಧ್ಯವಾದ ಎಲ್ಲ ಚಿಕಿತ್ಸೆಯನ್ನೂ ನೀಡುತ್ತಿದ್ದೇವೆ, ಅವರ ಆರೋಗ್ಯ ಸುಧಾರಿಸುತ್ತದೆಯೆ ಎಂಬುದನ್ನು ಹೇಳಬರುವುದಿಲ್ಲ, ಎಂದು ವಿವರಿಸುತ್ತಿದ್ದರು. ನಾನು ಆತ್ಮೀಯರಾದ ಶ್ರೀ. ವೈ. ಎನ್. ರಮೇಶ್ ಅವರನ್ನು ಕಂಡು ೬.೫೦ಕ್ಕೆ ಹೊರಬಂದಾಗ ಮತ್ತೆ ಅದೇ ನಿರ್ದೇಶಕರು ಮಾಧ್ಯಮದವರಿಗೆ ಡಾ॥ ಅನಂತಮೂರ್ತಿಯವರು ತೀರಿಕೊಂಡರೆಂದು ತಿಳಿಸುತ್ತಿದ್ದರು. ಛಾಯಾಚಿತ್ರಕಾರರು ಮತ್ತು ವರದಿಗಾರರು ಮಹಡಿ ಹತ್ತಿಹೋಗಿ ಚಿತ್ರಗಳನ್ನು ತೆಗೆದುಕೊಂಡು ಬರುತ್ತಿದ್ದರು. ಅನಂತಮೂರ್ತಿಯವರ ಕುಟುಂಬದವರ ಪರಿಚಯ ಸಾಕಷ್ಟಿಲ್ಲದಿದ್ದುದರಿಂದ ನಾನು ಅನಂತಮೂರ್ತಿಯವರನ್ನಿರಿಸಿದ್ದ ಜಾಗಕ್ಕೆ ಹೋಗಲಿಲ್ಲ, ಆದರೆ ಆಂಬುಲೆನ್ಸ್ ತೆರಳುವವರೆಗೆ ಅಲ್ಲೇ ಇದ್ದು ಆಮೇಲೆ ಬಸ್ಸು ಹಿಡಿದೆ. ಇನ್ನು ಅವರನ್ನು ಕಾಣಲಾಗದೆಂಬ ಸತ್ಯವನ್ನು ಅಂಗೀಕರಿಸುವುದು ಅಪ್ರಿಯವಾದರೂ ಅನಿವಾರ್ಯ. ನಮ್ಮೆಲ್ಲ ತಕರಾರು ಮತ್ತು ಭಿನ್ನಾಭಿಪ್ರಾಯಗಳ ನಡುವೆಯೂ ಅವರು ಆತ್ಮೀಯತೆಯನ್ನು ಪ್ರಕಟಿಸುತ್ತಿದ್ದರು ಮತ್ತು ನಾನು ಅವರನ್ನು ಗೌರವದಿಂದ ಕಾಣುತ್ತಿದ್ದೆ. ಆ ಗೌರವ ಎಷ್ಟೆಂಬುದನ್ನು ಮಾಪನ ಮಾಡಿ ತೋರಿಸುವ ಅವಶ್ಯಕತೆ ಎಂದೂ ಇರಲಿಲ್ಲ, ಈಗಲೂ ಇಲ್ಲ. ಉನ್ನತ ಭಾರತೀಯ ಸಂಸ್ಕೃತಿಯ ಹಕ್ಕುದಾರರು ತಾವೆಂದು ಘೋಷಿಸಿಕೊಂಡು "ಜನತೆ"ಗೆ ಸುಸಂಸ್ಕೃತ ನಡತೆ ಹೇಳಿಕೊಡುವುದಾಗಿ ಹೇಳಿಕೊಳ್ಳುವ ಸಂಘ, ಪರಿಷತ್ತು, ದಳ, ಪಕ್ಷ, ಇವೆಲ್ಲಾ ನಿಜವಾಗಿ ಸೃಷ್ಟಿಮಾಡಿರುವುದು 'ಪಟಾಕಿ ಸಂಸ್ಕೃತಿ' ಎಂದು ತಿಳಿದು ಮರುಗಬೇಕಾದ ಸನ್ನಿವೇಶ ನಮ್ಮದು. "ಪ್ರಜಾವಾಣಿ"ಯಲ್ಲಿ ಶ್ರೀ. ಪದ್ಮರಾಜ ದಂಡಾವತಿಯವರು ಬರೆದಾಗ ಮೂರ್ತಿಯವರನ್ನು ದ್ವೇಷಿಸುವ ಜನ ಸಾಕಷ್ಟು ಸಂಖ್ಯೆಯಲ್ಲಿದ್ದಾರೆಂಬುದನ್ನು ನೇರವಾಗಿಯೇ ಹೇಳಿದರು. ಆ ಜಂಗುಳಿಗೆಂದೂ ಸೇರದ ನಾನು ವಿನಯದಿಂದ ಅವರನ್ನು ಸ್ಮರಿಸುತ್ತೇನೆ. ಪೇಜಾವರ ಸ್ವಾಮಿಗಳು ಮೂರ್ತಿಯವರಿಗೆ ಪೂಜಾಸಾಮಗ್ರಿಗಳನ್ನು ಕೊಟ್ಟಿದ್ದರು ಮತ್ತು ಮೂರ್ತಿಯವರು ನಿಷ್ಠೆಯಿಂದ ಅವನ್ನೆಲ್ಲಾ ಬಳಸಿ ಪೂಜೆ ಸಲ್ಲಿಸುತ್ತಿದ್ದರು. ಮಲ್ಲೇಶ್ವರದಲ್ಲಿ ರಾಘವೇಂದ್ರ ಮಠಕ್ಕೆ ಹೋಗಿ ಮದುವೆಯನ್ನು ನೆರವೇರಿಸಿದ್ದರು ಮತ್ತು ಕಡೆಗೆ ಕಟ್ಟಿಗೆಯಲ್ಲೇ ಸುಡಿಸಿಕೊಳ್ಳಬೇಕೆಂಬ ಆಶಯವನ್ನು ತಿಳಿಸಿದ್ದರಂತೆ. ಇದರಲ್ಲೆಲ್ಲಾ ಅಗಾಧವಾದ ವ್ಯಂಗ್ಯವಿದೆ, ಆದರೆ ಅದಷ್ಟೇ ಅನಂತಮೂರ್ತಿಯವರಲ್ಲ. ಹಾಗಿದ್ದಿದ್ದರೆ ನೂರಾರು ಹೇಳಿಕೆಗಳು, ಲೇಖನಗಳು, ಸಂತಾಪ ಸೂಚಕ ಸಭೆಗಳು, ಏಕೆ ಬೇಕಾಗುತ್ತಿತ್ತು! ಹೀಗೆ ಪ್ರಕಟವಾಗಿರುವ ಲೇಖನಗಳನ್ನು ಬಹುಮಟ್ಟಿಗೆ ಎಲ್ಲರೂ ಒಪ್ಪಬಹುದು; ಪಟಾಕಿ ಹೊಡೆದ ಕೆಲವರು ಮಾತ್ರ ಅದಕ್ಕೆ ಅಪವಾದ.

ಪ್ರಾಚೀನ ಸಾಹಿತಿಗಳನ್ನು ನೋಡಿ ಅವರೊಡನೆ ಸಮಕಾಲೀನರನ್ನು ಹೋಲಿಸಿ ನೋಡಿದಾಗ ಒಂದಂಶವು ಢಾಳಾಗೆ ವೇದ್ಯವಾಗುತ್ತದೆ. ಕಾಲಿದಾಸನಂಥವನ ಬಗ್ಗೆ ನಮಗೆ ಪೂರ್ವಗ್ರಹಗಳೇನೂ ಇರುವುದಿಲ್ಲ, ಏಕೆಂದರೆ ಅವನ ಜೀವನವನ್ನು ಕುರಿತಂತೆ ನಮಗೇನೂ ತಿಳಿದಿಲ್ಲ. ಆ ಕಾಲದವರಿಗೆ ಆ ಬಗ್ಗೆ ಹೇಳಿಕೊಳ್ಳುವ ಸಂಪ್ರದಾಯವಿರಲಿಲ್ಲ. ಅವರ ಆಸ್ತಿ ಎಷ್ಟು, ಅದನ್ನು ಗಳಿಸಿದ್ದು ಹೇಗೆ, ರಾಜಾಶ್ರಯವನ್ನು ಹೇಗೆ ಪಡೆದುಕೊಂಡರು, ಎಂಬಿತ್ಯಾದಿ ಪ್ರಶ್ನೆಗಳನ್ನು ಎತ್ತುವ ಪ್ರಮೇಯವೇ ಇಲ್ಲ. ಬಿಲ್ಹಣನಂಥವರು, ಬೇರೆಷ್ಟೋ ಕವಿಗಳು ಪಡೆದ ಸವಲತ್ತುಗಳನ್ನು



ಕಾವ್ಯಲೋಕ

# ಬದುಕುತಿಹರು



ಬದುಕುತಿಹರು...
ಇವರು ಅವರಂತೆ, ಅವರು ಇವರಂತೆ
ಮತ್ತವರವರ ಮನೋಧೋರಣೆಯಂತೆ,
ಸತ್ತು ಬದುಕುವ, ಬದುಕಿ ಸಾಯುವ
ಕ್ರೀಡಾಸ್ಪರ್ಧೆಯಿಲ್ಲಿ ... !

ಪರದಲ್ಲಿರುವ ಹಲವರು ಆದರ್ಶ ಜೀವಗಳು
ಒಳಗೊಳಗೆ ನೊಂದುಕೊಳ್ಳುತ್ತಿವೆ.
ಇಹದಲ್ಲಿರುವ ಕೆಲವು ಮಾತ್ರ ಅವರಂತೆ,
ಆದರೇನಂತೆ ಇಳಿಯಲೂ ಆಗದ
ಮಾಡಲೂ ಆಗದ ತ್ರಿಶಂಕು !
ಎಷ್ಟು ಸಾಧಿಸಿದರೇನು ?
ಮೌಲ್ಯದ ಗೂಡು ಕಟ್ಟಿದರೇನು ?
ಆಳ್ವರಸರ ನಾಟ್ಯದ ಮುಂದೆ !
ನಲವತ್ತೇಳರ ಆಚೆಯ ಹಾದಿ,
ಸವೆದ ರೀತಿ, ಚಪ್ಪಲಿಗಳ ಸದ್ದನು
ಪುನರ್ ವಿಮರ್ಶಿಸುತ್ತಾರೆ...
ಗಂಟಲಿಂದ ಹೊರಗೆ ಮಾತ್ರ !
ತಾಮ್ರ ಬಿಂದಿಗೆಯಲ್ಲಿ ಹೆಂಡತುಂಬಿ
ಮೇಲೆ ಉಜ್ಜುಜ್ಜಿ ತೊಳೆದಂತೆ,
ಬದುಕುತಿಹರು ಎಲ್ಲಾ
ಇವರು ಅವರಂತೆ, ಅವರು ಇವರಂತೆ
ಮತ್ತವರವರ ಮನೋಧೋರಣೆಯಂತೆ

**ಕೊಟ್ರೇಶ್ ಎಸ್. ಉಪ್ಪಾರ್**
ಭಾಷಾ ಶಿಕ್ಷಕರು, ಸರಕಾರಿ ಹಿರಿಯ ಪ್ರಾಥಮಿಕ ಪಾಠಶಾಲೆ,
ತಾಳೂರು, ಆಲೂರು ತಾಲೂಕು, ಹಾಸನ ಜಿಲ್ಲೆ

ತಾನು ಪಡೆಯಲಿಲ್ಲ ಎಂದು ಅಸಮಾಧಾನ ತೋಡಿಕೊಂಡನೆಂಬಂತೆ ಕೆಲವು 'ಮಡಿ' ಪದ್ಯಗಳಿವೆ, ಚಾರಿತ್ರಿಕವಾಗಿ ಅವು ನಂಬಲರ್ಹವಾದ ದಾಖಲೆಗಳಲ್ಲ. "ಬೇರೆಯವರ ಬಗ್ಗೆ ಅವನು ಬಹಳ ಕರುಬುತ್ತಾನೆ" ಎಂದಷ್ಟೇ ಹೇಳಬಹುದೇನೊ ! ಕಾಲಿದಾಸನಾದರೊ ತಾನು ನಾಟಕ ಬರೆಯಲು ಅಂಜಬೇಕಾಗಿಲ್ಲ, ತಿಳಿದವರು ತನ್ನ ಕೃತಿಯನ್ನು ಆದರದಿಂದ ಬರಮಾಡಿಕೊಳ್ಳಬೇಕು, ಎಂಬುದನ್ನು ಸೂಚ್ಯವಾಗಿ ಆಗ್ರಹಿಸುತ್ತಾನೆ. ಅದರಿಂದ ನಮ್ಮಲ್ಲೇನೂ ಪೂರ್ವಗ್ರಹ ಸ್ಥಾಪನೆಯಾಗುವುದಿಲ್ಲ. ಸಮಕಾಲೀನರ ಬಗ್ಗೆ ಇದು ಸಾಧ್ಯವಿಲ್ಲ, ಏಕೆಂದರೆ ಅವರನ್ನು ಹತ್ತಿರದಿಂದ ನೋಡುತ್ತೇವೆ. ಅವರು ಬರೆದಿದ್ದನ್ನು ಓದುವ ಜೊತೆಗೆ ಅವರ ಜೀವನಕ್ರಮವನ್ನೂ ಓದುತ್ತೇವೆ. ೧೯೫೫–೫೮ರಲ್ಲಿ ಮೈಸೂರು ಮಹಾರಾಜ ಕಾಲೇಜಿನಲ್ಲಿ ವಿದ್ಯಾರ್ಥಿಗಳಾಗಿದ್ದವರಿಗೆ ಡಾ॥ ಎಸ್. ಎಲ್. ಭೈರಪ್ಪನವರ ಆತ್ಮಕತೆಯಲ್ಲಿ ಏನೆಲ್ಲಾ ಅಸಂಗತ ಅಂಶಗಳು ನುಸುಳಿವೆಯೆಂದು ಗೊತ್ತಾಗದೆ ಇರದು, ಆದರೆ ಸಭ್ಯತೆಯನ್ನು ಕಾಪಾಡಿಕೊಳ್ಳಲು ಅವರು ಮಾನ್ಯ ಭೈರಪ್ಪನವರ ಸಂಕಥನವನ್ನು ಅಷ್ಟಾಗಿ ಒರೆಗೆ ಹಚ್ಚಲು ಹೋಗುವುದಿಲ್ಲ. ಆದರೆ ಹಾಗೆ ಹೋಗಲೇಬಾರದೆಂಬ ನಿಯಮವನ್ನು ಹೇರುವುದಕ್ಕೂ ಆಗುವುದಿಲ್ಲ. ಗೋಪಾಲಕೃಷ್ಣ ಅಡಿಗರು ಭಾರತೀಯ ಜನಸಂಘದ ಅಭ್ಯರ್ಥಿಯಾಗಿ ಲೋಕಸಭೆಗೆ ಸ್ಪರ್ಧಿಸಿದಾಗ ಸಂಗಾತಿ ಸಿ. ವಿ. ಜಯತೀರ್ಥ "ಕಾವ್ಯವನ್ನು ಸ್ವೀಕರಿಸಿ, ಕವಿಯನ್ನು ನಿರಾಕರಿಸಿ" ಎಂಬ ವಿಮರ್ಶಾತ್ಮಕ ಲೇಖನ ಬರೆದಿದ್ದರು ಮತ್ತು ಅದನ್ನು ಕರಪತ್ರದ ರೂಪದಲ್ಲಿ ಅಚ್ಚುಮಾಡಿ ಹಂಚಲಾಗಿತ್ತು. ಅದರಲ್ಲಿ ತಪ್ಪೇನಿದೆ ? ಅನಂತಮೂರ್ತಿಗಳ ಬರಹಗಳು ಪ್ರಖ್ಯಾತವಾದಷ್ಟು ಅವರ ಜೀವನದ ಚರಿತ್ರೆಯು ಪ್ರಖ್ಯಾತವಾಗಿಲ್ಲ, ನಿಜ; ಆದರೆ ಹಲವರಿಗೆ ಅದರ ಸ್ಥೂಲ ಪರಿಚಯವಿರುತ್ತದೆಯಾದ್ದರಿಂದ ಬರಹ ಮತ್ತು ಜೀವನವನ್ನು ಅಕ್ಕಪಕ್ಕದಲ್ಲಿಟ್ಟು ಎರಡನ್ನೂ ಓದಿಕೊಳ್ಳುತ್ತಾರೆ. ಆದ್ದರಿಂದ ಮೆಚ್ಚುಗೆ ಮತ್ತು ಹೆಮ್ಮೆ ಮೂಡುವಂತೆ ಪೂರ್ವಗ್ರಹಗಳೂ ಮನಸ್ಸನ್ನು ಆವರಿಸುತ್ತವೆ. ಸಾರಾಸಗಟಾಗಿ ಅವರನ್ನು ತಿರಸ್ಕರಿಸುವುದು ಸಾಧ್ಯವೂ ಅಲ್ಲ, ಸಾಧುವೂ ಅಲ್ಲ; ಅಂತೆಯೇ, ಬರಹ ಮತ್ತು ಕ್ರಿಯೆಗಳೊಟ್ಟಿಗೆ ಅವರ ಜೀವನದ ವಿವಿಧ ಮುಖಗಳಿಗೆ ಸಮಕಾಲೀನರು ವಿಮುಖರಾಗುವುದಿಲ್ಲ. ಅವರ ವಿಚಾರಗಳು, ಹೋರಾಟಗಳು, ಮಾರ್ಗದರ್ಶನಗಳು, ನೇರನುಡಿಗಳು, ತಾತ್ವಿಕ ನಿಷ್ಠೆ, ಇವೆಲ್ಲಾ ಎಷ್ಟು ಗಾಢವಾಗಿವೆಯೆಂದರೆ ಯಾವ ವಿಮರ್ಶೆಯೂ ಅವರ ಒಟ್ಟಾರೆ ಘನತೆಗೆ ಕುಂದುಂಟು ಮಾಡಲಾರದು.

ಅವರ ಕತೆ–ಕಾದಂಬರಿಗಳ ಬಗೆಗೂ ತಕರಾರು ಮತ್ತು ಸಹಮತ ಏಕಕಾಲದಲ್ಲಿರಲು ಸಾಧ್ಯ; ಅಂತೆಯೇ ವಿಚಾರ ಮತ್ತು ಆಚರಣೆಗಳ ಬಗೆಗೆ ಕೂಡ. ಈ ಮಾತು ಕೇವಲ ಅನಂತಮೂರ್ತಿಯವರಿಗೆ ಮಾತ್ರ ಅನ್ವಯವಾಗುವುದಿಲ್ಲ. ಅವರ ಓದುಗರಿಗೆ, ವಿಮರ್ಶಕರಿಗೆ ಮತ್ತು ಟೀಕಾಕಾರರಿಗೂ ಅದು ಅನ್ವಯಿಸುತ್ತದೆ. ಓದುಗರೆಲ್ಲಾ ವಿಮರ್ಶಕರೂ ಆಗಬೇಕೆಂದಿಲ್ಲ; ಆದ್ದರಿಂದ ಅವರ ಬಗ್ಗೆ ಬರೆಯುದಿದ್ದವರೆಲ್ಲಾ ಅವರ ಸಮರ್ಥಕರೇ ಆಗಿರುವುದಿಲ್ಲ. ಅಂದರೆ, ಯಾವುದೇ ಲೇಖಕನ ಪ್ರತಿಪಾದನೆಗಳನ್ನು ಒಪ್ಪಿಕೊಂಡೇ ಅವನ್ನು ಶ್ಲಾಘಿಸಬೇಕಾಗಿಲ್ಲ; ಅವನ್ನು ಟೀಕಿಸುತ್ತಲೇ ಅವುಗಳ ಅನನ್ಯತೆಯನ್ನು ಗ್ರಹಿಸಲು ಸಾಧ್ಯ. ಬೇರೆಷ್ಟೋ ಬರಹಗಾರರು ಮತ್ತು ಕ್ರಿಯಾಶೀಲರ ಸಂದರ್ಭದಲ್ಲಿ ಪ್ರಧಾನವಾಗಿ ಗೋಚರವಾಗುವುದಕ್ಕಿಂತಲೂ ಹೆಚ್ಚಾಗಿ ಡಾ॥ ಅನಂತಮೂರ್ತಿಯವರ ಸಂದರ್ಭದಲ್ಲಿ ಇದು ವಿಶೇಷವಾಗಿ ಗಮನಕ್ಕೆ ಬರುತ್ತದೆ. ಅವರ "ಭವ" ಕಾದಂಬರಿಯ ಬಗ್ಗೆ ನಾನೊಂದು ತಲೆಹರಟೆಯ ಟೀಕೆ ಮಾಡಿದ್ದೆ : ಕಾದಂಬರಿಯ ಹೆಸರು ಅಚ್ಚಾಗುವಾಗ ಮುದ್ರಣಾಲಯದಲ್ಲಿ ಹೇಗೋ 'ಗ' ಬದಲು 'ವ' ಅಚ್ಚಾಗಿಬಿಟ್ಟಿದೆ, ಎಂದು. ಅಂದರೆ, ವೈಯ್ಯಕ್ತಿಕವಾಗಿ ನನಗೆ ಆ ಕಾದಂಬರಿ

ಹಿಡಿಸುವುದಿಲ್ಲ ಎಂದಷ್ಟೇ ಮೂಲಭೂತವಾದ ವಿಮರ್ಶೆ. ಆ ಟೀಕೆಯು ಅವರ ಕಿವಿಗೆ ಬಿದ್ದಿತ್ತು. ಆಮೇಲೆ ಒಮ್ಮೆ ಭೇಟಿಯಾದಾಗ ಅದನ್ನು ಪ್ರಸ್ತಾಪಿಸಿ, "ಆಗಲಿ, ಆ ಹೆಸರಿನ ಕಾದಂಬರಿಯನ್ನೂ ಬರೆಯುತ್ತೇನೆ" ಎಂದು ಹೇಳಿ ನನ್ನ ಟೀಕೆಯು ಅಪ್ರಸ್ತುತವೆಂಬ ಅವರ ಅಭಿಪ್ರಾಯವನ್ನು ತಿಳಿಸಿದ್ದರು. ಅವರ ಬಗೆಗಿನ ಕೆಲವು ಪೂರ್ವಗ್ರಹಗಳು ಅವರ ಸಾಹಿತ್ಯವನ್ನು ಎಷ್ಟು ಗಂಭೀರವಾಗಿ ಪರಿಗಣಿಸಬೇಕೋ ಅಷ್ಟು ಗಂಭೀರವಾಗಿ ಪರಿಗಣಿಸಲು ನನಗೆ ಸಾಧ್ಯವಾಗದಂತೆ ಮಾಡಿರುವುದು ನಿಜವೆಂದು ತೋರುತ್ತದೆ. ಓದುಗನಲ್ಲಿರುವ ಕೊರತೆಯೆಂದು ಅದನ್ನು ವ್ಯಾಖ್ಯಾನಿಸಬೇಕೇನೊ.

ನನ್ನಲ್ಲಿ ಅವರ ಬಗ್ಗೆ ರೂಪುಗೊಂಡ ಭಾವನೆಗಳಿಂದ ಅವರ ವರ್ಚಸ್ಸೇನೂ ಕಡಿಮೆಯಾಗಲಿಲ್ಲ, ಆದರೆ ನನಗೆ ಅವರ ಅಂತರಂಗವನ್ನು ಪ್ರವೇಶಿಸಲಾಗದಿದ್ದುದಕ್ಕೆ ಅದು ಕಾರಣವಾಗಿದ್ದಿರಬೇಕು. ಅವರ ಅನೇಕ ಓದುಗರು, ಮಿತ್ರರು, ವಿದ್ಯಾರ್ಥಿಗಳು ಮತ್ತು ಅಭಿಮಾನಿಗಳು ಅವರೊಡನೆ ನಿರಂತರವಾಗಿ ಸಂಪರ್ಕ ಇರಿಸಿಕೊಂಡಿದ್ದುದನ್ನು ಸ್ಮರಿಸಿಕೊಂಡಿದ್ದಾರೆ. ನನಗೆ ಅಂತಹ ಸಂಬಂಧವಿರಲಿಲ್ಲ. ದೂರವಾಣಿಯಲ್ಲೆಂದೂ ನಾನು ಅವರೊಡನೆ ಸಂಭಾಷಿಸಿಲ್ಲ. ನಾವು ಸಂಧಿಸುತ್ತಿದ್ದುದೆಲ್ಲಾ ಸಾರ್ವಜನಿಕ ಸಭೆ-ಸಮಾರಂಭಗಳಲ್ಲಿ. ತೀರಾ ವೈಯ್ಯಕ್ತಿಕವಾದ ಮಾತುಕತೆ ಇರಲೇ ಇಲ್ಲವೆಂಬಷ್ಟು ವಿರಳ. ೧೯೭೦ರ ದಶಕದಲ್ಲಿ ಅವರ ಕೆಲವು ಶಿಷ್ಯರು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದುದು ನನ್ನನ್ನು ಬಹಳ ಅಧೀರನನ್ನಾಗಿಸಿತ್ತು, 'ಹೀಗೂ ಉಂಟೆ' ಎಂದೆನಿಸಿತ್ತು. ವಿಶ್ವವಿದ್ಯಾನಿಲಯವು ಮಾಪನಕ್ಕೆ ಕಳಿಸುತ್ತಿದ್ದ ಪರೀಕ್ಷಾ ಉತ್ತರ ಪತ್ರಿಕೆಗಳನ್ನು ಡಾ॥ ಅನಂತಮೂರ್ತಿಯವರು ಸ್ವಗೃಹದಲ್ಲಿ ತಮ್ಮ ನೆಚ್ಚಿನ ವಿದ್ಯಾರ್ಥಿಗಳಿಂದ ಮಾಪನ ಮಾಡಿಸುತ್ತಿದ್ದುದುಂಟು, ಎಂದು ಈ ಶಿಷ್ಯರು ಹೇಳುತ್ತಿದ್ದರು. ತಮ್ಮ ಕೆಲಸವನ್ನು ಹೀಗೆ ವರ್ಗಾಯಿಸುವುದು ಅಸಮರ್ಥನೀಯವೆಂಬುದು ನನ್ನ ನಿಲುವು. ಇದು ನಂಬಿಕೆಯ ದ್ರೋಹ ಎನಿಸಿಕೊಳ್ಳುತ್ತದೆ. ಅವರು ನನ್ನ ಬಗ್ಗೆ ವಿಶೇಷವಾಗಿ ಕ್ರುದ್ಧರಾದದ್ದು ಬೆಂಗಳೂರಿನ ಡಾಲರ್ಸ್ ಕಾಲನಿಯಲ್ಲಿ ಮನೆ ಪಡೆದುಕೊಂಡ ಅವ್ಯವಹಾರದ ಸಂಬಂಧದಲ್ಲಿ. ಅವರಿಗೆ ನನಗಿಂತಲೂ ಹೆಚ್ಚು ಆಪ್ತರಾಗಿದ್ದ ಸ್ನೇಹಿತರು ಸಹ ಆ ಬಗ್ಗೆ ಅಸಮಾಧಾನ ಪ್ರಕಟಿಸಿದ್ದರು, ಪ್ರತಿಭಟಿಸಿದ್ದರು. ಮಾಹಿತಿ ಸಂಗ್ರಹಿಸಿದ್ದವರು ಸಹ ಅವರ ಸ್ನೇಹಿತರೇ. ಅನಂತಮೂರ್ತಿಯವರಿಗೆ ಅಂದಿನ ಮುಖ್ಯಮಂತ್ರಿ ಶ್ರೀ. ಜೆ. ಎಚ್. ಪಟೇಲರು ಪರಮಮಿತ್ರರಾಗಿಲ್ಲದಿದ್ದರೆ ಆ ಮನೆಯನ್ನು ಪಡೆಯಲು ಸರ್ವಥಾ ಸಾಧ್ಯವಾಗುತ್ತಿರಲಿಲ್ಲವೆಂದು ನಾನು ಅಂದು ನಂಬಿದ್ದೆ, ಇಂದೂ ನಂಬಿದ್ದೇನೆ. ಮನೆಯ ಮೂಲಬೆಲೆ ಪಾವತಿಸಿಯೇ ಅದನ್ನು ಪಡೆದುಕೊಂಡದ್ದೆಂಬ ಮಾನ್ಯ ಅನಂತಮೂರ್ತಿಯವರ ವಾದವು ಹೊರನೋಟಕ್ಕೆ ಸಹ ಅಂಗೀಕಾರಾರ್ಹವಾಗಿರಲಿಲ್ಲ. ಮೇಲಾಗಿ, ಅಷ್ಟು ಸರ್ಕಸ್ ಮಾಡಿ ಅವರು ಮನೆ ಪಡೆದುಕೊಳ್ಳಬೇಕಾಗಿರಲಿಲ್ಲ. ಅದನ್ನು ಪ್ರತಿಭಟಿಸಿದ್ದ ಇತರರು ಕೂಡ ಅದನ್ನು ಮನ್ನಿಸಿಲ್ಲವೆಂದು ಬಗೆಯುತ್ತೇನೆ. ಆದರೆ ಅದೇಕೋ ಅನಂತಮೂರ್ತಿಯವರಿಗೆ ನನ್ನನ್ನು ಒಪ್ಪಿಸಬೇಕೆಂಬ ಇಚ್ಛೆಯಿದ್ದಿತೆಂದು ತೋರುತ್ತದೆ. "ಕೆಲವರು ಮಾತ್ರ ಮನೆಯನ್ನು ನಾನು ಪಡೆದ ಬಗ್ಗೆ ಇನ್ನೂ ಅನುಮಾನ ಇರಿಸಿಕೊಂಡಿದ್ದಾರೆ, ಅವರಿಗೆ ನಾನು ಸಮಜಾಯಿಷಿ ನೀಡಿ ಒಪ್ಪಿಸುತ್ತೇನೆ" ಎಂದು ಅವರು ಹೇಳಿದ್ದುದು ಪತ್ರಿಕೆಗಳಲ್ಲಿ ವರದಿಯಾಗಿತ್ತು. ನಾನು ಅಥವಾ ಇತರರು ಒಪ್ಪುವುದು, ಬಿಡುವುದು, ಮುಖ್ಯವಲ್ಲ. ನಮಗೆ ಸಮಜಾಯಿಷಿ ನೀಡದಿದ್ದರೂ ನಡೆಯುತ್ತದೆ. ಆದರೆ ತಮಗೆ ತಾವು ಸಮಜಾಯಿಷಿ ನೀಡಿಕೊಂಡು, ಆ ವ್ಯವಹಾರದಲ್ಲಿ ನೈತಿಕತೆಗೆ ಭಂಗ ಬರಲಿಲ್ಲವೆಂದು ಆತ್ಮಸಾಕ್ಷಿಯಾಗಿ ಡಾ॥ ಅನಂತಮೂರ್ತಿಯವರು ಭಾವಿಸಿಕೊಂಡಿದ್ದು ಒಂದು ದುರಂತವೆಂಬುದು ಈಗಲೂ ಪುರಸ್ಕರಿಸಬೇಕಾದ ಅಭಿಮತ. ದೊಡ್ಡವರ ಸಣ್ಣತನಕ್ಕೆ ಅದೊಂದು ಶಾಶ್ವತ ನಿದರ್ಶನವಾಗಿಬಿಟ್ಟಿದೆ. ಅದು ವಿಷಾದದ ಸಂಗತಿ. ಆ ವ್ಯವಹಾರದ ಬಗ್ಗೆ ಸಾರ್ವಜನಿಕ ಚರ್ಚೆ ನಡೆಯುತ್ತಿದ್ದ ಅಂದಿನ ದಿನಗಳಲ್ಲಿ ಸಹನೆಯನ್ನು ಕಳೆದುಕೊಂಡ ಅನಂತಮೂರ್ತಿಯವರು ಒಮ್ಮೆ ಯಾವುದೋ ಟಿ.ವಿ. ಚಾನೆಲ್‌ನಲ್ಲಿ ಪ್ರಶ್ನೆಯೊಂದಕ್ಕೆ ಪ್ರತಿಕ್ರಿಯಿಸುತ್ತಾ ಹೇಳಿದ್ದರು : "ಯಾರು, ಆ ರಾಮಕೃಷ್ಣನೋ ? ಆ ಪಂಚೆ ಕಮ್ಯುನಿಸ್ಟೋ ?" ಎಂದು. ನಾನು ನೀಡಿದ್ದ ಒಂದು ಹೇಳಿಕೆಗೆ ಪ್ರತಿಕ್ರಿಯಿಸಬೇಕೆಂದು ಕೇಳಿದ ವರದಿಗಾರನಿಗೆ ಅದರಿಂದ ಆಶ್ಚರ್ಯವಾಗಿ ಹೋಗಿತ್ತು. ನಾನು ಶ್ರೀ. ಲಂಕೇಶ್‌ಗೆ "ಬ್ರಾಹ್ಮಣ ಕಮ್ಯುನಿಸ್ಟ್" ಆಗಿದ್ದೆ, ಇವರಿಗೆ




"ಪಂಚೆ ಕಮ್ಯುನಿಸ್ಟ್" ಆದೆ ! ಕಮ್ಯುನಿಸ್ಟ್ ಎಂಬ ಗುಣವಾಚಕವನ್ನು ಇಬ್ಬರೂ ಬಳಸಿದ್ದರೆಂಬುದೇ ಸಂತೋಷದ ವಿಷಯ. ಒಮ್ಮೆ ಒಂದು ಅಧ್ಯಯನ ಪ್ರವಾಸಕ್ಕೆ ಚಾಲನೆ ಕೊಡಬೇಕಾಗಿದ್ದ ಅನಂತಮೂರ್ತಿ ಒಂದೂವರೆ ಗಂಟೆ ತಡವಾಗಿ ಬಂದಿದ್ದರು. ಏಕೆ ತಡವಾಗುತ್ತಿದೆಯೆಂದು ಆತ್ಮೀಯ ಸ್ನೇಹಿತರೊಬ್ಬರು ಕೇಳಿದ್ದಕ್ಕೆ "ಜಗದ್ಗುರುಗಳು ಇನ್ನೂ ಬಂದಿಲ್ಲ, ಅದಕ್ಕೆ" ಎಂದು ಹೇಳಿದ್ದೆ. ನಾನು ಅವರ ಬಗ್ಗೆ ಬಳಸಿರುವ ಗುಣವಾಚಕ ಅದೊಂದೇ. ಅದಾದ ಬಳಿಕ ಒಂದೆರಡು ಬಾರಿ ಯಾವುದಾದರೂ ಸಭೆಯಲ್ಲಿ ಭೇಟಿಯಾದಾಗ "ನೋಡಿ, ಜಗದ್ಗುರು ಬೇಗ ಬಂದಿದ್ದೇನೆ" ಎನ್ನುತ್ತಿದ್ದರು. ೧೯೮೦ರ ದಶಕದಲ್ಲಿರಬೇಕು, ಶ್ರೀಯುತರು ಸೋವಿಯೆತ್ ಒಕ್ಕೂಟಕ್ಕೆ ಹೋಗಿಬಂದರು. ಹಿಂದಿರುಗಿದ ತರುವಾಯದಲ್ಲಿ ಮಹಾರಾಣಿ ಕಾಲೇಜಿನಲ್ಲಿ ಅವರದೊಂದು ಉಪನ್ಯಾಸವಿತ್ತು. ಪ್ರಾಸಂಗಿಕವಾಗಿ ಸೋವಿಯೆತ್ ಪ್ರವಾಸದಲ್ಲಿ ತಾವು "ಕಂಡಿದ್ದುದನ್ನು" ವಿದ್ಯಾರ್ಥಿನಿಯರ ಜೊತೆ ಹಂಚಿಕೊಂಡರು. ಅಲ್ಲಿ ಸ್ವಾತಂತ್ರ್ಯವಿಲ್ಲ, ಜನರ ಮುಖಗಳಲ್ಲಿ ನಗೆ ಇಲ್ಲ, ಅಂಗಡಿಗಳೆಲ್ಲಾ ಖಾಲಿ ಖಾಲಿ, ಇತ್ಯಾದಿ, ೧೯೧೭ರಿಂದ ಕೇಳಿಬಂದಿದ್ದ ಚರ್ವಿತ ಚರ್ವಣವನ್ನು ಸಾದರಪಡಿಸಿದರು. ಒಂದು ಅನುಭವವು ಅವರಿಗೆ ಬಹಳ ನೋವನ್ನು ತಂದಿದ್ದಿತಂತೆ, ಆ ದೇಶದ ವಸ್ತುಸ್ಥಿತಿಯನ್ನು ಪರಿಚಯಿಸಿದ್ದಿತಂತೆ. ಒಂದು ಸಂಜೆ ಯಾವುದೋ ಹೊಟೇಲಿನಲ್ಲಿ ಊಟ. ಸೋವಿಯೆತ್ ಅಕಾಡೆಮಿಯ ಒಬ್ಬ ಕಾರ್ಯಕರ್ತೆ ಅವರ ಜೊತೆಯಲ್ಲಿದ್ದಾಳೆ. ಊಟ ಆರಂಭವಾಯಿತು. ಪಕ್ಕದ ಟೇಬಲ್‌ನಲ್ಲಿ ಯಾರೋ ಕ್ಯಾವಿಯರ್ ತರಿಸಿಕೊಂಡರು. 'ನಮಗೂ ತರಿಸು' ಎಂದರು ಮೂರ್ತಿಗಳು. ಅವಳ ಕಣ್ಣಲ್ಲಿ ನೀರು ತುಂಬಿ ಬಂತು. ಇವರು ಅವಳಿಗೆ ಸಾಂತ್ವನ ಹೇಳಿದರು. ಏನು ಸಮಾಚಾರ ಎಂದು ಕೇಳಿದರು. ಅಯ್ಯೋ, ನಿಮಗೆ ಕ್ಯಾವಿಯರ್ ಕೊಡಿಸಲಾಗದಲ್ಲಾ ಎಂದು ವ್ಯಥಿಸುತ್ತಿದ್ದೇನೆ, ಎಂದಳು. ಏಕೆ ಕೊಡಿಸಲಾಗದು ಎಂದುದಕ್ಕೆ "ಎಲ್ಲವನ್ನೂ ಇವರೇ ತಿಂದುಬಿಡುತ್ತಾರೆ, ನಮ್ಮಂಥವರಿಗೆ ಅದು ಸಿಗುವುದಿಲ್ಲ" ಎಂದಳಂತೆ. "ಇವರೇ" ಎಂದರೆ ಕಮ್ಯುನಿಸ್ಟರು ಮತ್ತು ಸರ್ಕಾರಿ ಅಧಿಕಾರಿಗಳು. ಸರಿ, ಅನಂತಮೂರ್ತಿಯವರಿಗೆ "ಅಸಮಾನತೆಯ ಸಂಸ್ಕೃತಿ, ಕಮ್ಯುನಿಸ್ಟರು ಸಾಮಾನ್ಯ ಜನರನ್ನು ವಂಚಿಸಿ ಸೌಲಭ್ಯಗಳನ್ನೆಲ್ಲಾ ಅವರಲ್ಲೇ ಹಂಚಿಕೊಂಡಿರುವುದು" ತಿಳಿದುಹೋಯಿತು. ಅವರಿಗೆ ತಿಳಿಯದಿದ್ದುದು ಏನೆಂದರೆ ಅವರು ಹೋಗಿದ್ದ ರೆಸ್ಟೋರೆಂಟಿನಲ್ಲಿ ಟೇಬಲ್ ಕಾದಿರಿಸುವಾಗ 'ವಿಶೇಷ ತಿನಿಸುಗಳು' ಏನು ಬೇಕೆಂದು ಮೊದಲೇ ಬುಕ್ ಮಾಡಿರಬೇಕು, ಎಂಬುದು. ಮಾನ್ಯ ಮೂರ್ತಿಯವರನ್ನು ನನ್ನ ಒಂದೆರಡು ಭಾಷಣಗಳಲ್ಲಿ ಕಟುವಾಗಿ ಟೀಕಿಸಿ ಅವರ ತಿಳಿವಳಿಕೆ ಮೂರ್ಖತನದ್ದು ಎಂದು ಹೇಳಿದೆ. ಅದು ಬಹುಶಃ ಅವರ ಕಿವಿಗೆ ಬಿದ್ದಿರಲಾರದು.

ಇನ್ನೊಂದು ಪ್ರಸಂಗದಲ್ಲಿ ಮಾನ್ಯರು ನನ್ನ ಪ್ರಾಮಾಣಿಕತೆಯನ್ನು

ಪ್ರಶ್ನಿಸುವಂತಹ ಮಾತನ್ನಾಡಿದ್ದರು. ಅದು ೧೯೮೪ರಲ್ಲಿ. ಆ ವರ್ಷದ ಹೆಸರಿನ ಒಂದು ಕೃತಿ ಜಾರ್ಜ್ ಆರ್‌ವೆಲ್ ಬರೆದಿದ್ದಾನೆ. ಆ ವರ್ಷ ಒಂದು ಗೋಷ್ಠಿ ಏರ್ಪಡಿಸಿದ್ದರು. ನಾನು ಭಾಷಣಕಾರ ಮತ್ತು ಮಾನ್ಯ ಮೂರ್ತಿಗಳು ಅಧ್ಯಕ್ಷರು. ಆರ್‌ವೆಲ್‌ನನ್ನು ಮೂದಲಿಸಿ ಅವನ ಅನೇಕ ಪ್ರಮೇಯಗಳು ಅಯಥಾರ್ಥವೆಂದು ವಾದ ಮಂಡಿಸಿದ್ದೆ. ಪ್ರಶ್ನೋತ್ತರ ಸಮಯದಲ್ಲಿ ನನ್ನ ವಿರೋಧವಾಗಿ ಉದ್ವೇಗದ ಮಾತುಗಳು ಬಂದಿದ್ದವು, ನಾನು ಅಷ್ಟೇ ಉದ್ವೇಗದಿಂದ ಟೀಕಾಕಾರರನ್ನು ಹೀಯಾಳಿಸಿದ್ದೆ. ಸಾಮಾನ್ಯ ನಿರೀಕ್ಷೆ ಇದ್ದುದು ಮೂರ್ತಿಯವರು ನನ್ನನ್ನು ವಿರೋಧಿಸಿ ಆರ್ವೆಲ್‌ನನ್ನು ಸಮರ್ಥಿಸುತ್ತಾರೆ, ಎಂದು. ಅವರ ಚಿಂತನಾಕ್ರಮಕ್ಕೆ ಅದು ಸಹಜವಾಗಿರುತ್ತಿತ್ತು. ಅಧ್ಯಕ್ಷರಾಗಿ ಅವರು ನನ್ನನ್ನು ವಿರೋಧಿಸಲಿಲ್ಲ, ಬದಲಾಗಿ ನಾನು ಹೇಳಿದ್ದುದು ಅಷ್ಟೇನೂ ಪ್ರಶ್ನಾರ್ಹವಲ್ಲವೆಂಬಂತೆ ಮಾತನಾಡಿದರು. ನಾನೂ ಸೇರಿದಂತೆ ಅನೇಕರು ಇದರಿಂದ ಆಶ್ಚರ್ಯಪಟ್ಟರು. ಸಭೆಯ ನಂತರ ಕೆಲವು ಸ್ನೇಹಿತರೊಂದಿಗೆ ಮೂರ್ತಿಯವರು ಹೆಜ್ಜೆ ಹಾಕುತ್ತಿದ್ದಾಗ ಅವರನ್ನು ಶ್ರೀ. ರಾಮಚಂದ್ರ ದೇವ ತರಾಟೆಗೆ ತೆಗೆದುಕೊಂಡರೆಂದು ಶ್ರೀ. ಜಿ. ಕೆ. ಗೋವಿಂದರಾವ್ ನನಗೆ ತಿಳಿಸಿದ್ದರು. "ನಿಮ್ಮ ನಿಜವಾದ ಅಭಿಪ್ರಾಯ ತಿಳಿಸದೆ ಜಿ. ಆರ್. ಹೇಳಿದ್ದಕ್ಕೆ ತಲೆದೂಗಿದ್ದೀರಿ. ಇದು ಶುದ್ಧ ಅಪ್ರಾಮಾಣಿಕತೆ" ಎಂದರು ರಾಮಚಂದ್ರ ದೇವ. ಅದಕ್ಕೆ ಮೂರ್ತಿಯವರ ಪ್ರತಿಕ್ರಿಯೆ : "ನೋಡಿ, ರಾಮಕೃಷ್ಣ ನನ್ನ ಪರವಾಗಿ ಮೈಸೂರು ವಿಶ್ವವಿದ್ಯಾಲಯದ ಉಪಕುಲಪತಿಗಳೊಡನೆ ಚರ್ಚೆಗಿಳಿದಿದ್ದಾರೆ, ಅಂತಹ ಸಂದರ್ಭದಲ್ಲಿ ಅವರಿಗೆ ಎದುರಾಡಲು ನನ್ನ ಮನಸ್ಸು ಒಪ್ಪಲಿಲ್ಲ." ಅಂದರೆ, ರಾಮಕೃಷ್ಣನನ್ನು ಟೀಕಿಸಿದರೆ ಆತ ಮೂರ್ತಿಯವರ ವಿರುದ್ಧವಾಗಿ ಉಪಕುಲಪತಿಯೊಡನೆ ಶಾಮೀಲಾಗಿಬಿಡುತ್ತಾನೆ, ಎಂಬುದು ಅವರ ಇಂಗಿತ. ಇದು ತೀರಾ ಕ್ಷುದ್ರ ಭಾವನೆ, ಏಕೆಂದರೆ ಅದಕ್ಕೆ ನಾಲ್ಕೈದು ದಿವಸ ಮುಂಚೆ ನಾನು ಮೈಸೂರಿನಲ್ಲಿ ಧರಣಿ ಪ್ರತಿಭಟನೆಯಲ್ಲಿ ಭಾಗವಹಿಸಿ ಬಂದಿದ್ದೆ. ಆಗ್ಗೆ ರಾಜ್ಯ ವಿಶ್ವವಿದ್ಯಾಲಯ ಮತ್ತು ಕಾಲೇಜು ಅಧ್ಯಾಪಕ ಸಂಘಗಳ ಒಕ್ಕೂಟದ ಅಧ್ಯಕ್ಷ ನಾನಾಗಿದ್ದೆ. ಒಕ್ಕೂಟದ ಕಾರ್ಯಕರ್ತನಾಗಿ ನಾನು ಮೂರ್ತಿಯವರ ವಿರೋಧವಾಗಿ ನಿಲ್ಲುವ ಸಾಧ್ಯತೆಯೇ ಇರಲಿಲ್ಲ. ಅವರ ಸ್ವತಂತ್ರ ಅಭಿಪ್ರಾಯಗಳೇನೇ ಇರಲಿ, ಅವರು ನಮ್ಮ ಒಕ್ಕೂಟದ ಸದಸ್ಯರು ಮತ್ತು ವಿ.ವಿ. ಅವರಿಗೆ ಕಿರುಕುಳ ಕೊಡುತ್ತಿದೆ. ಅವರಿಗೆ ಷೋ-ಕಾಸ್ ನೋಟೀಸ್ ಕೊಡಲಾಗಿತ್ತು ಮತ್ತು ಮೂರ್ತಿಯವರು ದಿಟ್ಟತನದಿಂದ ಅದನ್ನು ಬಹಿರಂಗಗೊಳಿಸಿ ಹೋರಾಟಕ್ಕಿಳಿದಿದ್ದರು. ಒಕ್ಕೂಟ ಅವರ ಪರವಾಗಿ ನಿಂತಿತ್ತು. ಮೂರ್ತಿಯವರು ಆರ್‌ವೆಲ್ ಸಮರ್ಥಕರಾಗಿಬಿಟ್ಟರೆ ನಾವು ಅವರ ಕೈ ಬಿಡುತ್ತಿದ್ದೆವೆ ? ನಮ್ಮ ಒಕ್ಕೂಟ ಮತ್ತು ಅದರ ಕಾರ್ಯಕರ್ತರು ಅಷ್ಟು ಅಪ್ರಾಮಾಣಿಕರೆ ? ಮೂರ್ತಿಯವರು ನನ್ನ ನಡತೆ ಸಂಶಯಾತ್ಮಕವೆಂದು ಬಗೆದರಲ್ಲಾ ಅದು ನನ್ನ ಬಗೆಗೆ ಅವರು ಮಾಡಿದ ಅಪಚಾರ. ಸ್ವಂತದ ಫಲಪ್ರಾಪ್ತಿಗೆ ಮಾನ್ಯ ಮೂರ್ತಿಯವರು ಎಂಥದೇ ಹಾದಿ ಹಿಡಿಯಲಿ, ಯಾವುದೇ ಅಭಿಪ್ರಾಯ ಹೊಂದಿರಲಿ, ಒಕ್ಕೂಟದ ಕಾರ್ಯಕರ್ತನಾಗಿ ನಾನು ನಮ್ಮದೇ ಸದಸ್ಯನನ್ನು ಬಿಟ್ಟುಕೊಡುವ ಪ್ರಶ್ನೆಯೇ ಇರಲಿಲ್ಲ. ಮೂರ್ತಿಯವರಂತಹ ಉದಾತ್ತ ವ್ಯಕ್ತಿತ್ವದವರು ಇಂತಹ ಸಂಶಯ ಹೊಂದಿದ್ದುದೇ ಅವರ ಕುಬ್ಜತನಕ್ಕೆ ಪುರಾವೆಯಾಗಿಬಿಡುವ ಅಪಾಯವಿದೆ.

ಇನ್ನೊಂದು ಪ್ರಸಂಗವು ಅವರ ಈ ಮುಖವನ್ನು ಹೆಚ್ಚು ಸ್ಪಷ್ಟಗೊಳಿಸಿತು. ಬೆಂಗಳೂರಿನ ಪುರಭವನದಲ್ಲಿ ಒಂದು ಸಾರ್ವಜನಿಕ ಸಭೆ. ಆಯೋಜಕರು ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ. ಕೇರಳದ ಮುಖ್ಯಮಂತ್ರಿ ಶ್ರೀ. ಇ. ಕೆ. ನಾಯನಾರ್ ವೇದಿಕೆಯಲ್ಲಿದ್ದಾರೆ. ಟೌನ್ ಹಾಲ್ ತುಂಬಿಹೋಗಿದೆ. ನಾನು ಮತ್ತು ಅನಂತಮೂರ್ತಿ ಭಾಷಣಕಾರರಲ್ಲಿ ಇಬ್ಬರು. ಮೊದಲು ನಾಯನಾರ್, ನಂತರ ಮೂರ್ತಿಯವರು, ಆಮೇಲೆ ನಾನು ಮಾತನಾಡಿದೆವು. ಮೂರ್ತಿಯವರು ತಾವು ಉಪಕುಲಪತಿಯಾಗಿದ್ದಾಗಿನ ತಮ್ಮ ಅನುಭವಗಳನ್ನು ಮೆಲುಕುಹಾಕಿದರು. ಕೊಟ್ಟಯಂನ ಮಹಾತ್ಮ ಗಾಂಧಿ ವಿಶ್ವವಿದ್ಯಾನಿಲಯದಲ್ಲಿ ತಾವು ಕುಲಪತಿಗಳಾಗಿದ್ದಾಗ ಕೇರಳದ ಸರ್ಕಾರ ಅವರ ಸ್ವಾಯತ್ತತೆಗೆ ಎಂದೂ ಭಂಗ ತರಲಿಲ್ಲ, ಪೂರ್ಣ ಸಹಕಾರ ನೀಡಿತು, ಇದು ಶ್ಲಾಘನೆಗೆ ಅರ್ಹವಾದ್ದು, ವಿದ್ಯಾಸಂಸ್ಥೆಗಳಿಗೆ ಅಂತಹ ಬೆಂಬಲ ಅಗತ್ಯ, ಇತ್ಯಾದಿ ವಿಷಯಗಳನ್ನು ದೃಷ್ಟಾಂತಗಳನ್ನು ನೀಡಿ ಮೂರ್ತಿಯವರು ಮಾತನಾಡಿದರು. ನಾಯನಾರ್ ಬಹಳ ಸಂತೃಪ್ತರಾಗಿದ್ದರು. ನಾಲ್ಕೈದು ತಿಂಗಳ ನಂತರ ಮುಂದೊಂದು ದಿನ ಮತ್ತೆ ಮೂರ್ತಿಯವರು ಮತ್ತು ನಾನು ಒಂದು ಸಭೆಯಲ್ಲಿ ಭಾಷಣಕಾರರು. ನಾಯನಾರ್ ಅಂಥವರಾರೂ ಇರಲಿಲ್ಲ. ಮೂರ್ತಿಯವರು ಪ್ಲೇಟ್ ಬದಲಾಯಿಸಿ ಹಾಡಿದರು : ಕೇರಳದ ಕಮ್ಯುನಿಸ್ಟ್ ಸರ್ಕಾರ ತಮಗೆ ಸ್ವತಂತ್ರವಾಗಿ ಕಾರ್ಯ ನಿರ್ವಹಿಸಲು ಬಿಡಲಿಲ್ಲ, ಕಮ್ಯುನಿಸ್ಟರ ಸ್ವಭಾವವೇ ಅದು, ತಮಗೆ ಅಂದಿನ ಇಬ್ಬಂದಿಯ ವಾತಾವರಣವನ್ನು ಮರೆಯಲಾಗುವುದಿಲ್ಲ, ಇತ್ಯಾದಿ. ಅಂದು ಸಹ ಸಭೆಯಲ್ಲಿ ನಾನು ಅವರನ್ನು ವಿರೋಧಿಸಿ ಏನನ್ನೂ ಹೇಳಲಿಲ್ಲ. ಆದರೆ ಇಂದಿಗೂ ಒಂದು ದ್ವಂದ್ವವು ನನ್ನನ್ನು ಕಾಡುತ್ತದೆ : ಮೂರ್ತಿಯವರು ಹೀಗೇಕೆ, ಎಂದು; ನಾಯನಾರ್ ಇದ್ದಾಗ ಅವರನ್ನು ಹೊಗಳಿದ್ದು ಬೇರೇನೋ ನಿರೀಕ್ಷೆಗಳಿಂದಾಗಿಯೆ, ಎಂದು. ಇಷ್ಟು ದೊಡ್ಡವರ ಮಾಪನ ಮಾಡಲು ನಮ್ಮಂತಹ ಕಿರಿಯರು ಮುನ್ನುಗ್ಗಬಾರದೇನೊ !




ಮಾನ್ಯ ಮೂರ್ತಿಯವರು ನನ್ನನ್ನು ಯಾವಾಗಲೂ ಆತ್ಮೀಯವಾಗಿಯೇ ಮಾತನಾಡಿಸುತ್ತಿದ್ದರು. ಒಮ್ಮೆ ಮಾತ್ರ ಕೋಪಗೊಂಡು ನನ್ನ ಪಂಚೆ ಮತ್ತು ನನ್ನ ಕಮ್ಯುನಿಸ್ಟ್ ನಿಷ್ಠೆಯನ್ನು ನೆನಪಿಸಿಕೊಂಡಿದ್ದರೋ ಏನೋ ಎನಿಸುತ್ತದೆ. ಇತ್ತೀಚೆಗೆ ಶ್ರೀ. ಮೂಡ್ನಾಕೂಡು ಚಿನ್ನಸ್ವಾಮಿಯವರು "ಮೂರ್ತಿಯವರು ಶ್ರೀ. ಬಿ. ಬಸವಲಿಂಗಪ್ಪನವರ 'ಬೂಸಾ ಸಾಹಿತ್ಯ ಪ್ರಕರಣ'ದ ಸಂದರ್ಭದಲ್ಲಿ ದಲಿತ ಚಳುವಳಿಗೆ ಒಂದು ಪ್ರಣಾಳಿಕೆಯನ್ನು ರಚಿಸಿಕೊಟ್ಟರು" ಎಂದು ಸ್ಮರಿಸಿಕೊಂಡಿದ್ದಾರೆ. ಅದು ಅನಂತಮೂರ್ತಿಯವರ ನೈಜ ವ್ಯಕ್ತಿತ್ವ. ಬೇರೆಯವು ಅಂದಂದಿನ ಆಭಾಸಗಳು, ಅಷ್ಟೆ. ತಮ್ಮ ಮತಧರ್ಮದ ಆಚರಣೆಗಳನ್ನು ಇರಿಸಿಕೊಂಡೇ ನಿಷ್ಠಾವಂತ ಜಾತ್ಯತೀತ ಭಾವನೆಗಳ ಕೇಂದ್ರವಾಗಿ ಮೂರ್ತಿಯವರು ಇರುತ್ತಿದ್ದರು. ನಮ್ಮ ದೇಶದ ಪರಂಪರೆಯ ದೊಡ್ಡ ಪ್ರತೀಕವಾಗಲು ಅವರಿಗೆ ಅದರಿಂದ ಸಾಧ್ಯವಾಯಿತು. "ಮೋದಿಯ ರಾಜ್ಯದಲ್ಲಿ ನಾನು ಜೀವಿಸಲಾರೆ" ಎಂಬ ಅವರ ಮಾತನ್ನು ವಾಚ್ಯವಾಗಿ ತೆಗೆದುಕೊಂಡು ಅವರನ್ನು ತೆಗಳಿದ್ದು ನಮ್ಮ ಸಮಕಾಲೀನ ಪ್ರಜ್ಞಾವಂತಿಕೆಯ ಕೊರತೆಯನ್ನು ಎತ್ತಿತೋರಿಸುತ್ತದೆ. ಅನಂತಮೂರ್ತಿ ಒಬ್ಬ ಸಾಹಿತಿ. ಅವರ ಅಭಿವ್ಯಕ್ತಿಯು ಕಾವ್ಯಮಯವೋ ಆಲಂಕಾರಿಕವೋ ಆಗಿರಬೇಕಾದ್ದು ಸ್ವಾಭಾವಿಕ. ಅದನ್ನು ಹಾಗೆ ಗ್ರಹಿಸದೆ ಬಾಯಿಗೆ ಬಂದಂತೆ ಮಾತನಾಡಿದ ನಮ್ಮ ಸಮಾಜದ ಒಂದು ವಿಭಾಗವು ಕಾವ್ಯ ಮತ್ತು ಪುರಾಣಗಳ ಗಂಧವನ್ನೆಂದೂ ಸರಿಯಾದ ರೀತಿಯಲ್ಲಿ ಆಘ್ರಾಣಿಸಿಲ್ಲ. ಆ ವಿಭಾಗಕ್ಕೆ ಆಚರಣೆ, ದ್ವೇಷ, ಜಿದ್ದು, ಜಡ್ಡುತನ, ಇವೆಲ್ಲಾ ಗೊತ್ತೇ ವಿನಾ ಜೀವನದ ಸೂಕ್ಷ್ಮಗಳು ತಿಳಿಯಲಾರವು. ಡಾ॥ ಕಲ್ಬುರ್ಗಿ ಮತ್ತು ಡಾ॥ ಅನಂತಮೂರ್ತಿ ಇಬ್ಬರೂ ಒಂದು 'ಮೂತ್ರ ವಿಸರ್ಜನಾ ದೋಷ'ದಲ್ಲಿ ಸಿಲುಕಿದ್ದು ಸಹ ಸಂವೇದನಾರಹಿತ ಜನವಿಭಾಗದ ಮಂದಬುದ್ಧಿಯಿಂದಾಗಿಯೇ. ಆ ಸಂಬಂಧದ ಒಂದು ಟಿ.ವಿ. ಕಾರ್ಯಕ್ರಮದಲ್ಲಿ ಒಬ್ಬ ದೊಡ್ಡ ಜ್ಯೋತಿಷಿ ಆಡಿದ್ದ ಮಾತು ನೋಡಿ : "ಆ ಅನಂತಮೂರ್ತಿ ಬಾಯಿಗೆ ಬಂದ ಹಾಗೆ ಮಾತನಾಡುತ್ತಿರುವಾಗ ನಾವು ತಿಕ ಮುಚ್ಚಿಕೊಂಡು ಕೂತಿರಬೇಕೊ ?" ಅಂಥವರನ್ನು ಕಂಡು ರೋಸಿಹೋದ ಮೂರ್ತಿಗಳು "ನಮ್ಮ ರಾಜ್ಯದ ಜನ ಪ್ರಜ್ಞೆಯನ್ನು ಕಳೆದುಕೊಂಡುಬಿಡುತ್ತಿದ್ದಾರೆ, ಅಂಥವರ

ಜೊತೆ ಮಾತನಾಡುವುದು ನಿರರ್ಥಕವಾಗುತ್ತಿದೆ" ಎಂದು ನೊಂದು ನುಡಿದರು. ಮೂರ್ತಿಯವರ ಅಂತರಂಗವನ್ನು ಗ್ರಹಿಸಲಾರದೆ ಹೋದವರ ಮನೋಭೂಮಿಕೆಯೇ ಬೇರೆ ತೆರನಾದ್ದು. ಅವರ ಶ್ರದ್ಧೆ ಎಷ್ಟು ಹುಸಿಯಾದುದೆಂದರೆ ಒಂದು ವಿಶ್ಲೇಷಣೆ ನೀಡಿದರೆ ಅದು ಅವರ 'ಮನಸ್ಸನ್ನು ನೋಯಿಸುತ್ತದೆ.' ಶ್ರದ್ಧೆ ಗಟ್ಟಿಯಾಗಿದ್ದರೆ ಮನಸ್ಸು ಗಟ್ಟಿಯಾಗಿರುತ್ತದೆ, ಆದರೆ ಕೆಲವರ ಶ್ರದ್ಧೆ ಮೇಲ್ಮೈಯಿಂದ ಒಳಗೆ ಹೋಗುವುದಿಲ್ಲ. ಆದ್ದರಿಂದ ಅವರು ಮೊಕದ್ದಮೆಗಳನ್ನು ದಾಖಲಿಸಲು ತುದಿಗಾಲಲ್ಲಿ ನಿಂತಿರುತ್ತಾರೆ. ಸಾಕ್ರೆಟೀಸ್‌ಗೆ ಹೆಮ್ಲಾಕ್ ಕುಡಿಸಿದ ಮುಂಚಿನ ದಿನ ಕಾರಾಗೃಹದಲ್ಲಿದ್ದ ಅವನನ್ನು ಹೊರಗೊಯ್ಯಲು ಶಿಷ್ಯ ಫ್ಲೈಡೋ ಸಂಚು ರೂಪಿಸಲು ಸಿದ್ಧನಿದ್ದ, ಆದರೆ ಸಾಕ್ರೆಟೀಸ್ ನಿರಾಕರಿಸಿ ಅಲ್ಲಿಯೇ ಉಳಿದ. ಶಿಷ್ಯನಿಗೆ ಹೇಳಿದ : "ಮೃತ್ಯುದೇವತೆಗೆ ಒಂದು ಹುಂಜವನ್ನು ಬಲಿಕೊಡು", ಎಂದು. ಅಂದರೆ, ಜೀವಿಸುವುದಕ್ಕಿಂತಲೂ ಸಾವು ಶ್ರೇಷ್ಠವಾಗಿಬಿಡುವಂತಹ ಸನ್ನಿವೇಶವು ಏಥೆನ್ಸಿನಲ್ಲಿತ್ತು. ಅಂಥವರ ನಡುವಿನಿಂದ ದೂರವಾಗುವುದನ್ನು ಕರುಣಿಸಿರುವ ಮೃತ್ಯುದೇವತೆಗೆ ಸಾಕ್ರೆಟೀಸ್ ವಂದನಾಪೂರ್ವಕ ಬಲಿ ಕೊಡಲು ಸಿದ್ಧನಿದ್ದಾನೆ. ನಮ್ಮ ಸಮಾಜದ ಒಂದು ವಿಭಾಗವು ಅಸಂಸ್ಕೃತ ಚಿಂತನೆ ಮತ್ತು ಕಾರ್ಯಾಚರಣೆಯನ್ನು ಮೀರಲಾಗದೆ ಹೋಗಿ ನಮ್ಮ ಹಲವು ಶತಮಾನಗಳ ಸಾಂಸ್ಕೃತಿಕ ಪರಂಪರೆಗೆ ಮಸಿ ಬಳಿಯಿತು.

ಜಾತಿಯಲ್ಲಿ ಸೃಜನಾತ್ಮಕ ಅಂಶಗಳಿವೆಯೆಂದು ಮೂರ್ತಿಯವರು ವಾದಿಸಿದ್ದರು. ಅವರ ಸ್ವಂತದ ಅನುಭವವು ಸಾಹಿತ್ಯಸೃಷ್ಟಿಗೆ ಪ್ರೇರಕವಾದುದರಿಂದ ಅವರು ಹಾಗೆ ಹೇಳಿದ್ದಿರಬೇಕು, ಆದರೆ ಅದನ್ನು ಸಾರ್ವತ್ರೀಕರಿಸಿ ಹೇಳಿದ್ದು ಆಭಾಸವನ್ನುಂಟು ಮಾಡಿತು. ಬೆತ್ತಲೆ ಸೇವೆಗೆ ಎಷ್ಟೇ ಸಾಂಸ್ಕೃತಿಕ ಸಮರ್ಥನೆ ನೀಡಿದರೂ ಅದು ಅಂಗೀಕಾರಕ್ಕೆ ಸರ್ವಥಾ ಅನರ್ಹವೆಂಬ ಪ್ರಾಥಮಿಕ ತಿಳಿವಳಿಕೆಯನ್ನು ಮೂರ್ತಿಯವರು ನಿರಾಕರಿಸಿದರು ಮತ್ತು ಆ ಸೇವೆಯಲ್ಲಿ ತೊಡಗುವ "ಸ್ವಾತಂತ್ರ್ಯ"ವನ್ನು ಮೊಟಕುಗೊಳಿಸಲು ಯಾರಿಗೂ ಹಕ್ಕಿಲ್ಲವೆಂದು ಪ್ರತಿಪಾದಿಸಿದರು. ಅವರ ಈ ಧೋರಣೆ ನಿಷ್ಫಲವಾಗಿದ್ದು ಸಂತೋಷದ ಸಂಗತಿ. ಮೂಲಭೂತವಾಗಿ ಸಂಸ್ಕೃತಿ ಯಾವುದು, ಸ್ವಯಂ ನಾವೇ ಸೃಷ್ಟಿಸಿಕೊಂಡಿರುವುದು ಯಾವುದು, ಹೇರಲ್ಪಟ್ಟಿರುವುದು ಯಾವುದು, ಇವುಗಳ ಪರಿಗಣನೆ ಇಲ್ಲದೆ ಮತ್ತು ಅವು ಯಾವ ಸನ್ನಿವೇಶದಲ್ಲಿ ಆವಿಷ್ಕಾರಗೊಂಡವು ಎಂಬುದನ್ನು ವಿವೇಚಿಸಿಕೊಳ್ಳದೆ ಸಂಸ್ಕೃತಿಯ ವ್ಯಾಖ್ಯಾನ ಮಾಡುವುದು ಅಚಾರಿತ್ರಿಕ. ಅಲ್ಲದೆ, ಯಾವುದೂ ಸ್ಥಗಿತವಾಗಿ ನಿಲ್ಲಬೇಕೆಂಬ ನಿಯಮವಿಲ್ಲ. ಎಂದೋ ಪ್ರಸ್ತುತವಾದ್ದು ಸದಾ ಪ್ರಸ್ತುತವೆಂಬ ಮೌಢ್ಯಕ್ಕೆ ಗುರಿಯಾದರೆ ಕ್ರೂರ ಅಸ್ಪೃಶ್ಯತೆಯನ್ನು ಸಹ ಸಮರ್ಥಿಸಿಬಿಡಬಹುದು. ಅನಂತಮೂರ್ತಿಯವರ ಚಿಂತನೆಯಲ್ಲಿ ಅಪಗತಿಗೆ ಇಂಥವು ಉದಾಹರಣೆಗಳು. ಅತ್ಯಂತ ಪ್ರಮುಖವಾದ ಸಾಮಾಜಿಕ-ಆರ್ಥಿಕ ಸಂಗತಿಗಳನ್ನು ಕುರಿತಂತೆ ಮೂರ್ತಿಯವರು ಎಂದೂ ಅಪಗತಿಗಳನ್ನು ಒಳಗು ಮಾಡಿಕೊಳ್ಳಲಿಲ್ಲವೆಂಬುದು ಗಮನಾರ್ಹ. ಅವರು ಝಾನ್ ಪಾಲ್ ಸಾರ್ತ್ರ್‌ನ ಚಿಂತನೆ ಮತ್ತು ಅವನ ಅಸ್ತಿತ್ವವಾದವನ್ನು ಮಾನ್ಯಮಾಡಿದ್ದವರು. ಸಾರ್ತ್ರ್‌ನ ಮೂಲದ್ರವ್ಯ ಸಿದ್ಧಾಂತ (ಅಂದರೆ, ಇಂಗ್ಲಿಷ್‌ನಲ್ಲಿ 'ಆಂಟಾಲಜಿ') ಅವರಿಗೆ ಒಪ್ಪಿಗೆಯಾಗಿದ್ದಿರಬೇಕು. ಬ್ರಹ್ಮವು ಸತ್ಯ, ಜಗತ್ತು ಮಿಥ್ಯೆ, ಎಂಬುದು ಅದ್ವೈತದರ್ಶನದ ಮೂಲದ್ರವ್ಯ ಸಿದ್ಧಾಂತ. ಆದಿಯಲ್ಲಿ 'ಸತ್' ಎಂಬುದೊಂದೇ ಇದ್ದಿತು (ಛಾಂದೋಗ್ಯ ಉಪನಿಷತ್ತು : ಸದೇವ ಸೋಮ್ಯ ಇದಮಗ್ರ ಆಸೀತ್) ಎಂಬುದು ಸಾಂಖ್ಯದ 'ಆಂಟಾಲಜಿ'. "ಬೀಯಿಂಗ್-ಇನ್-ಇಟ್‌ಸೆಲ್ಫ್" ಮತ್ತು "ಬೀಯಿಂಗ್-ಫಾರ್-ಇಟ್‌ಸೆಲ್ಫ್" ಎಂಬುದು ಸಾರ್ತ್ರ್‌ನ 'ಆಂಟಾಲಜಿ.' ಅವು ಸ್ಥೂಲವಾಗಿ ಪರಿಸರ ಮತ್ತು ಪ್ರಜ್ಞೆಗಳನ್ನು ಸೂಚಿಸುತ್ತವೆ. ಇದರ ಮುಂದುವರಿದ ಸಿದ್ಧಾಂತವು 'ಸ್ವಾತಂತ್ರ್ಯ'ದ ಪರಿಕಲ್ಪನೆಗೆ ಇಂಬುಕೊಡುತ್ತದೆ. ಸಾರ್ತ್ರ್ ದೃಷ್ಟಿಯಲ್ಲಿ ಸ್ವಾತಂತ್ರ್ಯವು ಯಾವಾಗಲೂ ಇದ್ದೇ ಇದೆ, ಅದನ್ನು ಪಡೆಯುವ ಅಗತ್ಯವಿಲ್ಲ. ಯಾರಾದರೂ ತನಗೆ ಅದಿಲ್ಲವೆಂದುಕೊಂಡರೆ ಅದು 'ವಿಶ್ವಾಸಘಾತುಕವಾದ್ದು' (ಬ್ಯಾಡ್ ಫೇಯ್ತ್) ಎನಿಸಿಕೊಳ್ಳುತ್ತದೆ. ಅಂದರೆ, ಮೂಲಭೂತವಾದ್ದು ಪ್ರಜ್ಞೆ; ಅದು ಜ್ಞಾತೃ. ಅದರಿಂದ ಜ್ಞೇಯವಾದ ಪರಿಸರವು ತಿಳಿಯುತ್ತದೆ. ಒಟ್ಟಿನಲ್ಲಿ, ಸ್ವಾತಂತ್ರ್ಯ ಅನುಭವಿಸಲು (ಗಳಿಸಲು ಅಲ್ಲ) ಅದಕ್ಕೆ ತಕ್ಕುದಾದ ಪ್ರಜ್ಞೆಯನ್ನು ಹೊಂದಬೇಕು. ಇಂತಹ ಸಿದ್ಧಾಂತವನ್ನು ಪ್ರತಿಪಾದಿಸಿದ ಸಾರ್ತ್ರ್ ಮಾಡಿದ್ದೇನು ? ಪ್ರತಿಯೊಂದು ಸ್ವಾತಂತ್ರ್ಯ ಹೋರಾಟದಲ್ಲೂ ನೇರವಾಗಿ ಭಾಗಿಯಾಗುವುದು. ಅಂದರೆ, ಅವನು ತನ್ನ ಸಿದ್ಧಾಂತವನ್ನು ಮೀರಿ ಬೆಳೆದ; ಅದರಿಂದ ಅವನು ಖ್ಯಾತನಾದ, ಮುಖ್ಯನಾದ, ಮಾನವ ಮೌಲ್ಯಗಳನ್ನು ಎತ್ತಿಹಿಡಿಯುವ ಮಹತ್ವದ ಚಿಂತಕ-ಹೋರಾಟಗಾರನಾದ. ಆಲ್ಜೀರಿಯಾ ವಿಮೋಚನಾ ಹೋರಾಟಕ್ಕೆ ನೇರ ಬೆಂಬಲ ನೀಡಿ ಫ್ರಾನ್ಸಿನ ಅನೇಕರ ಕೋಪಕ್ಕೆ ಗುರಿಯಾದ ಧೀರ ಸಾರ್ತ್ರ್. ಆಲ್ಜೀರಿಯಾ ಜನರಿಗೆ ಹೇಗೂ ಸ್ವಾತಂತ್ರ್ಯ ಇದ್ದೇ ಇದೆ, ಇಲ್ಲವೆಂದುಕೊಂಡರೆ ಅದಕ್ಕೆ ಅವರ ವಿಶ್ವಾಸಘಾತುಕತನ ಕಾರಣವೆಂದು ಹೇಳಿ ಅವನು ಕೈಕಟ್ಟಿ ಕೂಡಲಿಲ್ಲ. 'ಆಂಟಾಲಜಿ' ಚಿಂತನೆಯ ಮೂಲಕ ಅರಸಿಕೊಂಡ ತತ್ತ್ವ; ಆದರೆ ಕ್ರಿಯೆಯು ಜನತೆಯ ನಡುವೆ ನಿಂತಾಗಿನ ಪರಿಣಾಮ. ಜನಪರ ಚಿಂತನೆ, ವಸ್ತುನಿಷ್ಠ ಜ್ಞಾನದ ಆಧಾರ, ಸಮಗ್ರ ಸಾಮರಸ್ಯದ ಜೀವನ, ಇವನ್ನು ಮೂಲಾಧಾರವಾಗಿ ಹೊಂದಿದ್ದುದು ಮೂರ್ತಿಯವರ ಬಹುಮುಖೀ ಚಟುವಟಿಕೆಗಳ ಸಾರ್ಥಕ್ಯ ಎನ್ನಬಹುದು. ಆಸೆಗಳು ಬೇಕಾದಷ್ಟಿರುತ್ತವೆ (ಸುಲಭವಾಗಿ ಮನೆ ಪಡೆಯಬೇಕು, ಬಂಧುಗಳಿಗೆ ಉದ್ಯೋಗ ಗಳಿಸಿಕೊಡಬೇಕು, ಲಂಡನ್ನಿನಿಂದ ಬೂಕರ್ ಬಹುಮಾನ ತಂದರೆ ಕನ್ನಡಕ್ಕೆ ಘನತೆ ಹೆಚ್ಚುತ್ತದೆ, ಇತ್ಯಾದಿ). ಆದರೆ ಬಹುಮಟ್ಟಿಗೆ ಅವು ವೈಯ್ಯಕ್ತಿಕವಾದವು; ಆಶಯಗಳು ಕಡಿಮೆಯಿದ್ದರೂ ಆದೀತು (ಪ್ರಜಾಪ್ರಭುತ್ವ, ಜಾತ್ಯತೀತತೆ, ಸಮಾನತೆ ಮತ್ತು ಸಮಾನಾವಕಾಶಗಳು, ಪರಸ್ಪರ ಗೌರವ ಮತ್ತು ಬಂಧುತ್ವ, ಸರ್ವತೋಮುಖಿಯಾದ ಆಸಕ್ತಿಗಳು, ಇತ್ಯಾದಿ), ಆದರೆ ಅವೇ ವಂದ್ಯಾರ್ಹವಾದವು. ಮಾನ್ಯ ಅನಂತಮೂರ್ತಿಯವರ ವ್ಯಕ್ತಿತ್ವದ ಸೊಬಗನ್ನು ಇವುಗಳ ಮೂಲಕ ಕಂಡುಕೊಳ್ಳಬೇಕು.

ಕಾರ್ಲ್ ಮಾರ್ಕ್ಸ್‌ನನ್ನು ತಮ್ಮ ತಾರುಣ್ಯದಲ್ಲೇ ಮೂರ್ತಿಯವರು ತೊರೆದರಂತೆ. ಅವನು ಮತಧರ್ಮವನ್ನು ಲಕ್ಷೀಕರಿಸುವಾಗ ಹೇಳುತ್ತಾನೆ, ಅದು ದಮನಕ್ಕೆ ಒಳಗಾದವರ ನಿಟ್ಟುಸಿರು, ಹೃದಯರಹಿತ ವ್ಯವಹಾರಗಳ ನಡುವಿನ ಹೃದಯವಂತಿಕೆ ಅದು, ಅಲ್ಲದೆ ಜನರಿಗೆ ಒಂದು ಅಫೀಮು, ಎಂದು. ಮೂರ್ತಿಯವರು ಅವರ ಅನೇಕ ಅಭಿಮಾನಿಗಳಿಗೆ ಅಫೀಮಾಗಿದ್ದರು, ಅಂದರೆ ಕ್ಷಣಕಾಲದ ರಂಜನೆ ನೀಡಿದರು, ವಾಸ್ತವದಿಂದ ದೂರಕ್ಕೆ ರವಾನಿಸಿದರು, ಧ್ರುವಾಣಿ ಪರಿತ್ಯಜ್ಯ ಅಧ್ರುವಾಣ್ಯೇವ ಸೇವತೇ ಎಂದೆನಿಸಿದರು. ಆದರೆ ನಮ್ಮ ರಾಜ್ಯಕ್ಕೆ ಸಮಕಾಲೀನ ಸಂದರ್ಭದ ಹತಾಶೆಯ ನಡುವೆ ಅವರು ಒಂದು ಭರವಸೆಯಾಗಿದ್ದರು, ಕ್ಷುದ್ರ ನಡತೆಯ ನಡುವೆ ಉಜ್ವಲ ಪ್ರತೀಕವಾಗಿದ್ದರು. ಆ ರೀತಿಯಲ್ಲಿ ಅವರು ಚಿರಂತನರು.

ಅವರು ತಮ್ಮ ದೇಹವನ್ನು ದಾನ ಮಾಡಿದ್ದರೆ ಅವರ ಗಾಂಭೀರ್ಯಕ್ಕೆ ಮೆರುಗು ಉಂಟಾಗುತ್ತಿತ್ತು. ಕಟ್ಟಿಗೆಯಾದರೇನು ಕರ್ಪೂರವಾದರೇನು, ಗಂಧದ ಕೊರಡಾದರೇನು ಆಲದ ತುಂಡಾದರೇನು, ಕಲಾಗ್ರಾಮವಾದರೇನು, ಹೆಬ್ಬಾಳದ ಚಿತಾಗಾರವಾದರೇನು, ಇವೆಲ್ಲಾ ವ್ಯಾಮೋಹದ ವಿಷಯಗಳು. ಅವರ ಬ್ರಾಹ್ಮಣ್ಯದಲ್ಲಿ ಪುನರ್ಜನ್ಮವಿದ್ದರೆ ಅವರು ಲಂಡನ್ನಿನಲ್ಲಿ ಬೇಕಾದರೂ ಹುಟ್ಟಲಿ, ಸ್ಟಾಕ್‌ಹೋಂನಲ್ಲಿ ಬೇಕಾದರೂ ಹುಟ್ಟಲಿ, ಅಡ್ಡಿಯಿಲ್ಲ. ಆದರೆ ಜೀವಂತವಾಗಿದ್ದಾಗ ಅವರು ನಮ್ಮ ರಾಜ್ಯದಲ್ಲಿದ್ದರು, ಚೈತನ್ಯ ತುಂಬಿದರು. ಅದಕ್ಕೆ ನಾವು ಋಣಿಗಳು. ಅವರಿಗೆ ಪ್ರೀತ್ಯಾದರಗಳ ನಮನ.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೮ನೇ ಕ್ರಾಸ್, ಕಾವೇರಿನಗರ, ಬನಶಂಕರಿ
೩ನೇ ಹಂತ, ಬೆಂಗಳೂರು – ೫೬೦ ೦೮೫

## ಮಮತೆ

ಎಲ್ಲಾ ತಪ್ಪುಗಳಿಗೂ
ಕ್ಷಮಾಪಣೆ
ನೀಡುವ
ಏಕೈಕ
ನ್ಯಾಯಾಲಯ –
ತಾಯಿಯ ಹೃದಯ

**ಡಾ॥ ವಿ. ಪುಗಳೇಂದಿ**
ಬಳ್ಳಾರಿ




ಕೃತಿ : **ಅರಿವು ತೊರೆ** (ಕಟ್ಟುಪದ ಸಂಕಲನ)
ಲೇಖಕರು : **ಬೇಲೂರು ರಘುನಂದನ್**
ಬೆಲೆ : ರೂ. ೭೦– ೦೦  ಪುಟಗಳು : xvi+೧೦೦=೧೧೬
ಪ್ರಕಾಶಕರು : **ಸಪ್ನ ಬುಕ್ ಹೌಸ್ (ಪ್ರೈ.) ಲಿ.**
ನಂ. ೧೧, ೩ನೇ ಮುಖ್ಯರಸ್ತೆ, ಗಾಂಧಿನಗರ, ಬೆಂಗಳೂರು – ೫೬೦ ೦೦೯




# ಕಟ್ಟುಪದಗಳು–೨ ಆಧುನಿಕೋತ್ತರ ಕಾಲದಲ್ಲಿ ಆಧುನಿಕತೆಯ ಸಂವೇದನೆಗಳು

**ಬಿ. ಯು. ಸುಮಾ**

*ಅರಮನೆ ಕೊಟ್ಟರೂ ಬೇಡ ಗುರುಮನೆ ಕೊಟ್ಟರೂ ಬೇಡ*
*ಮದಕ್ಕೆ ಮಧು ಮೋಹಿನಿಯರ ಸುಮ್ಮನೆ ಕೊಟ್ಟರೂ ಬೇಡ*
*ಅಧಿಕಾರದ ಗದ್ದುಗೆಯೂ ಬೇಡ ತೂತಾಗುವ ಸಂಪತ್ತೂ ಬೇಡ*
*ಹುಡಿಯಾಗುವ ಕೊಂಬು ಕೋಡಿಗೆ ಹಾರ ಸನ್ಮಾನಗಳೂ ಬೇಡ*
*ಪ್ರಕೃತಿಯನು ನೇಯುವ ಕಾವ್ಯ ದೇವಿ ಸರಸತಿಗೆ ಅರ್ಚಿಸಿದ*
*ಹಸುರು ಮಂತ್ರವ ಎನ್ನ ಗುರು ಕರೆದು ಪ್ರೀತಿಯಲಿ ಕೊಟ್ಟರೆ*
*ಬೇಡವೆನ್ನಲಾರೆ ಶ್ವೇತಪ್ರಿಯ ಗುರುವೆ...*

ಇತ್ತೀಚಿನ ವರ್ಷಗಳಲ್ಲಿ ಕನ್ನಡದ ಹೊಸ ತಲೆಮಾರಿನ ಕವಿಗಳು ಅನೇಕ ರೀತಿಯ ಹೊಸ ಪ್ರಯೋಗಗಳನ್ನು ಮಾಡುತ್ತಿದ್ದಾರೆ. ಮೇಲೆ ಉಲ್ಲೇಖಿಸಿದ ಸಾಲುಗಳು ಬೇಲೂರು ರಘುನಂದನ್ ಅವರ 'ಕಟ್ಟುಪದ'ಗಳಲ್ಲೊಂದು. ಈ ಕವಿ 'ವಚನ' ಪ್ರಕಾರವನ್ನು 'ಕಟ್ಟುಪದ' ಎಂಬ ಹೆಸರಿನಲ್ಲಿ ಪುನರ್‌ಸೃಷ್ಟಿಸುವ ಕೆಲಸಕ್ಕೆ ಕೈ ಹಾಕಿದ್ದಾರೆ. ಈಗಾಗಲೇ ಕನ್ನಡದಲ್ಲಿ ಆಧುನಿಕ ವಚನಗಳನ್ನು ಬರೆದವರ ಒಂದು ಸಣ್ಣ ಪರಂಪರೆಯೇ ಇದೆ. ಕುಮಾರ ಕಕ್ಕಯ್ಯ ಪೋಳ, ಚೆನ್ನಣ್ಣ ವಾಲೀಕಾರ, ಸಿದ್ಧಯ್ಯ ಪುರಾಣಿಕ, ಕಮಲಾ ಹಂಪನಾ... ಹೀಗೆ.

ಇವರ ಕವನ ಸಂಕಲನಗಳು ಬೇರೆ ಮತ್ತು 'ಕಟ್ಟುಪದ' ಎಂಬ ವಚನಗಳು ಬೇರೆ. ನೂರು ಕಟ್ಟುಪದಗಳನ್ನು ಒಂದು ಸಂಕಲನವಾಗಿ ಪ್ರಕಟಿಸುವ ರಘುನಂದನ್, ಹೊರತಂದಿರುವ 'ಕಟ್ಟುಪದ–೨' ಎಂಬುದು ಮತ್ತೊಂದು ನೂರು ಪದಗಳ ಸಂಕಲನವಾಗಿದೆ.

ಆಧುನಿಕ ಕನ್ನಡದಲ್ಲಿ ವಚನಗಳನ್ನು ಬರೆದವರ ಒಂದು ಪರಂಪರೆಯೇ ಇದೆ ಎಂದು ಹೇಳಿದೆ; ವಚನಗಳನ್ನು ಅಭಿವ್ಯಕ್ತಿಗಾಗಿ ಬಳಸಿಕೊಂಡವರೆಲ್ಲಾ ಸಾಮಾಜಿಕ ಸಮಸ್ಯೆಗಳನ್ನೇ ಈ ಪ್ರಕಾರದ ಮೂಲಕ ನಿರೂಪಿಸಿದ್ದಾರೆ. ಬೇಲೂರು ರಘುನಂದನ್ ಅವರ ಕಟ್ಟುಪದಗಳು ಕೂಡ ಇದೇ ಹಾದಿಯಲ್ಲಿ ಮುಂದುವರಿಯುತ್ತವೆ. ನಮ್ಮ ಕಾಲದ ಅನೇಕ ಸಾಮಾಜಿಕ ಸಮಸ್ಯೆಗಳನ್ನು 'ಕಟ್ಟುಪದ'ಗಳಲ್ಲಿ ಕಟ್ಟುವ ಕವಿ, ಅಕ್ಷರಶಃ ಅದರ ಒಂದು ದೊಡ್ಡ ಕ್ಯಾನ್ವಾಸ್‌ಅನ್ನು ನಮ್ಮೆದುರು ಸೃಷ್ಟಿಸುತ್ತಾ ಹೋಗುತ್ತಾರೆ. ತಳಸ್ತರದ ಸಮಸ್ಯೆಗಳು, ರೇಜಿಗೆಗಳು, ಮಿತಿಗಳು; ಪರಿಸರದ ಮೇಲಾಗುತ್ತಿರುವ ಹಲ್ಲೆ, ಅವಕಾಶವಂಚಿತ ದುಡಿಯುವ ವರ್ಗದ ಪಾಡು, ಬ್ರಾಹ್ಮಣೀಯ ಬದುಕಿನ ವಿಧಾನಗಳ ವಿಡಂಬನೆ, ಹೆಣ್ಣು ಭ್ರೂಣಹತ್ಯೆಯ ಅಮಾನವೀಯತೆ, ಪ್ರೀತಿ ಇಲ್ಲದ ಕೌಟುಂಬಿಕ ಸಂಬಂಧಗಳು, ಪ್ರೇಮದ ಶಿಥಿಲತೆ, ಅಭಿವೃದ್ಧಿ ಪ್ರಕ್ರಿಯೆಯ ಅರ್ಥಹೀನತೆ, ವರದಕ್ಷಿಣೆ ಪದ್ಧತಿಯ ಕ್ರೌರ್ಯ, ಐಷಾರಾಮಿ ಬದುಕಿನ ಡೌಲು, ಪಡಿಯಚ್ಚುಗಳಾಗಿಬಿಟ್ಟ ಸಾಮಾಜಿಕ ಸಂಬಂಧಗಳು, ಕೋಮು ಗಲಭೆ, ಸಲಿಂಗ ಕಾಮ... ಇದರ ಜೊತೆಗೆ ಮಾಧ್ಯಮಗಳಲ್ಲಿ ಬರುವ ಸುದ್ದಿಗಳು – ಎಂದರೆ, ಮೈಮೇಲೆ ಮಲ ಸುರಿದುಕೊಂಡು ಪ್ರತಿಭಟಿಸುವ ಅಸ್ಪೃಶ್ಯರು... ಹೀಗೆ ಕಟ್ಟುಪದಗಳಲ್ಲಿ ಎಲ್ಲವನ್ನು, ಯಾವುದನ್ನು ಬೇಕಾದರೂ ಹಿಡಿಯುವಂತೆ ಈ ಪ್ರಕಾರವನ್ನು ಕವಿ ಬಳಸಿಕೊಳ್ಳುತ್ತಾರೆ.

ಕಟ್ಟುಪದಗಳಲ್ಲಿ ನೋವು ಮತ್ತು ವಿಷಾದಗಳು ಸ್ಥಾಯಿಭಾವಗಳಾಗಿವೆ. ಸಾಕಷ್ಟು ವ್ಯಂಗ್ಯ ಮತ್ತು ವಿಡಂಬನೆಗಳು ಕಂಡುಬಂದರೂ ಅವು ಕೊನೆಯಾಗುವುದು ನೋವು ಮತ್ತು ವಿಷಾದದಲ್ಲಿಯೇ. ಸಮಕಾಲೀನ ಸಾಮಾಜಿಕ ರಚನೆಗಳು, ಅಧಿಕಾರದ

**ಕವಿಯ ಹೆಸರನ್ನು ಹೇಳದೆ, ಈ ಸಂಕಲನದಲ್ಲಿರುವ ಕೆಲವು ಪದಗಳನ್ನು (೧೦೩,೧೦೪,೧೦೫,೧೧೪...) ಆಯ್ದು ಓದುಗರಿಗೆ ಕೊಟ್ಟು , "ಇವುಗಳನ್ನು ಯಾರು ರಚಿಸಿರಬಹುದು ?" ಎನ್ನುವ ಪ್ರಶ್ನೆಯನ್ನೇನಾದರೂ ಹಾಕಿದರೆ, "ಒಬ್ಬ ಕವಯತ್ರಿ" ಎನ್ನುವ ಉತ್ತರ ಬರುವುದರಲ್ಲಿ ಯಾವ ಸಂದೇಹವೂ ಇಲ್ಲ. ಇತ್ತೀಚಿನ ಸ್ತ್ರೀವಾದಿ ಚಿಂತನೆಗಳು ಪಿತೃಪ್ರಾಧಾನ್ಯತೆಯ ಅಸಮಾನತೆ ಮತ್ತು ಕ್ರೌರ್ಯ ಇಲ್ಲದ ಸ್ವಾಸ್ಥ್ಯ ಸಮಾಜ ರೂಪುಗೊಳ್ಳಬೇಕೆಂದರೆ, ಪುರುಷತ್ವ ಮತ್ತು ಸ್ತ್ರೀತ್ವದ ಚೌಕಟ್ಟುಗಳಾಚೆಗೆ ವ್ಯಕ್ತಿತ್ವಗಳು ವಿಸ್ತರಿಸುವುದರ ಅಗತ್ಯವನ್ನು ಕುರಿತು ಮಾತನಾಡುತ್ತವೆ. ಈ ದೃಷ್ಟಿಯಿಂದ ರಘುನಂದನ್ ಹೆಣ್ಣಿನ ಸಂವೇದನೆಗಳನ್ನು ಇಷ್ಟು ಚೆನ್ನಾಗಿ ಅರ್ಥಮಾಡಿಕೊಂಡು, ಹೆಣ್ಣೊಬ್ಬಳಂತೆಯೇ ಅಭಿವ್ಯಕ್ತಿಸುತ್ತಾರೆನ್ನುವುದು ಮುಖ್ಯವಾದ ಸಂಗತಿಯಾಗುತ್ತದೆ.**

ಕಾವ್ಯಲೋಕ



# ಮನೆ ಮತ್ತು ಹುಚ್ಚು

**ಮ**ನೆಗೆ ಬರುವಾಗಲೂ
ಹೋಗುವಾಗಲೂ
ಹುಚ್ಚು ಹಿಡಿದ ಒಲೆಗಳ ಭಾರಗಳು
ತೂಗಿಕೊಂಡಿರುತ್ತವೆ ಗೋಡೆಯಲ್ಲಿ.
ಈ ಭೂಮಿಯಲ್ಲಿ
ಹುಚ್ಚಿಲ್ಲದ ಮನೆಗಳಿಲ್ಲ.
ಮನೆಯೊಳಗೆ
ಅಮ್ಮನಿಗೆ ಮಾತ್ರ ಹುಚ್ಚು ಹಿಡಿಯಬಾರದು.
ಅಮ್ಮನಿಗೆ ಹುಚ್ಚು ಹಿಡಿದರೆ
ಮನೆ ತುಂಬ ಹುಚ್ಚು ಹಿಡಿಯುತ್ತದೆ.
ಗೋಡೆಗಳು ಬಿರುಕಿಡುತ್ತವೆ.
ಒಲೆಯ ಬೆಂಕಿ ಕೂಗಿಕೊಳ್ಳುತ್ತಾ
ಹೊತ್ತಿ ಉರಿಯುತ್ತದೆ.
ಎಷ್ಟು ಗುಡಿಸಿದರೂ
ಅಂಗಳದಲ್ಲಿ ಹೊರಳಾಡುತ್ತವೆ ತರಗೆಲೆಗಳು.
ಮನೆಯೊಳಗೆ
ಅಮ್ಮನಿಗೆ ಮಾತ್ರ ಹುಚ್ಚು ಹಿಡಿಯಬಾರದು.

ಮಲಯಾಳಂ ಮೂಲ : **ಅರ್ಷಾದ್ ಬತೇರಿ**
ಕನ್ನಡಕ್ಕೆ : **ಕಾಜೂರು ಸತೀಶ್**
ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕರಿಕೆ ಕಾಲೋನಿ
ಮಡಿಕೇರಿ ತಾಲೂಕು – ೫೭೧ ೨೪೭

## ಅಭಿನಂದನೆ

ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ, ೨೦೧೪ನೇ ಸಾಲಿನ 'ಶಾಂತಲಾ ಸಾಹಿತ್ಯ ಪುರಸ್ಕಾರ' ಪ್ರಶಸ್ತಿಯನ್ನು ಹಿರಿಯ ಲೇಖಕಿ, ನಾಡೋಜ ಸಾರಾ ಅಬೂಬಕ್ಕರ್ ಅವರಿಗೆ ನೀಡಿ ಗೌರವಿಸಿದೆ. ಪ್ರಶಸ್ತಿ ಪುರಸ್ಕೃತ ಲೇಖಕಿಗೆ ನವಕರ್ನಾಟಕ ಹಾಗೂ 'ಹೊಸತು' ಪತ್ರಿಕಾ ಬಳಗದ ಅಭಿನಂದನೆಗಳು.

ಅಮಾನವೀಯತೆ, ಪಿತೃಪ್ರಾಧಾನ್ಯತೆಯ ಕ್ರೌರ್ಯ, ಜೊಳ್ಳಾಗುತ್ತಿರುವ ಮನುಷ್ಯ ಸಂಬಂಧಗಳು. ಎಲ್ಲವೂ ಕವಿಯನ್ನು ಚಿಂತೆಗೀಡುಮಾಡುತ್ತವೆ, ಅಸಹಾಯಕ ನನ್ನಾಗಿಸುತ್ತವೆ. ಕವಿಗೆ ತನ್ನೆದುರಿಗಿರುವ ಸಮಸ್ಯೆ ಏನೆಂದು ತಿಳಿದಿದೆ, ಆದರೆ ಅದನ್ನು ಸರಿಪಡಿಸುವ ದಾರಿ ತಿಳಿದಿಲ್ಲ. ಹಾಗೆಂದು ಸುಮ್ಮನೆ ಕೂರುವುದು ಕೂಡ ಸಾಧ್ಯವಿಲ್ಲ. ಈ ದ್ವಂದ್ವ ಮತ್ತು ಒತ್ತಡದಿಂದ ಭಾರವಾದ ಒಂದು ಸಾಮಾಜಿಕ ಹೊರೆಯನ್ನು ಹೊತ್ತುಕೊಂಡು ಒದ್ದಾಡುವ ಕವಿ ಈ ಪರಿಸರ ಮತ್ತು ವ್ಯವಸ್ಥೆಯೊಳಗೆ ತನ್ನನ್ನು ತಾನು ಗುರುತಿಸಿಕೊಳ್ಳಲಾರದೆ ಹೊಸ ನೆಲೆಗಳಿಗಾಗಿ ತಡಕಾಡುತ್ತಾರೆ. 'ಹೊಸ ಮನುಷ್ಯ'ನಾಗಿ 'ಆಗುವ' ಅತ್ಯಂತ ಕಷ್ಟದ ಒಂದು ಪ್ರಕ್ರಿಯೆಗೆ ತನ್ನನ್ನು ತೆತ್ತುಕೊಂಡು, ಅದು ದ್ರವೀಕರಣಗೊಳ್ಳುತ್ತಾ ಹೋಗುವುದಕ್ಕೂ ಸಾಕ್ಷಿಯಾಗುತ್ತಾರೆ. ಆದ್ದರಿಂದ ಕಟ್ಟುಪದಗಳಲ್ಲಿ ನೋವು ಮತ್ತು ವಿಷಾದ ಗಾಢವಾಗಿ ಆವರಿಸಿಕೊಳ್ಳುತ್ತವೆ. ರಘುನಂದನ್ ಅವರ ಈ ಸಮಸ್ಯೆ, ಆಧುನಿಕೋತ್ತರ ಕಾಲದ ಸಂವೇದನಾಶೀಲರಾದ ಪ್ರತಿಯೊಬ್ಬರ ಸಮಸ್ಯೆಯೂ ಹೌದು. ಅಧಿಕಾರದ ನೆಲೆಗಳು ಭ್ರಷ್ಟವಾಗಿ, ಹಕ್ಕುಗಳ ಹೋರಾಟ ನಿಷ್ಕ್ರಿಯವಾಗುತ್ತಿರುವ ಈ ಸಂದರ್ಭದಲ್ಲಿ ಈ ಶೋಧನೆ ಅರ್ಥಪೂರ್ಣವಾದುದು.

ವರ್ತಮಾನದ ತನ್ನ ಸಮಸ್ಯೆಗಳಿಗೆ ಗತವೂ ಸಾಕಷ್ಟು ಕಾಣಿಕೆ ಸಲ್ಲಿಸಿರುವುದನ್ನು ಕವಿ ಗುರುತಿಸುತ್ತಾರೆ. 'ಚರಿತೆಗಳು ಚಿರತೆಗಳಿದ್ದಂತೆ ಭಯಪಡಿಸಿದ್ದೇ ಪಡಿಸಿದ್ದು... ತೀರದ ದಾಹ, ಇಂಗದ ಹಸಿವು...' ಚರಿತ್ರೆ ಎಂದರೇನೇ ಅಧಿಕಾರ. ಎಲ್ಲಾ ಕಾಲದಲ್ಲೂ 'ಅಧಿಕಾರ' ಮಾತ್ರ ಸಕ್ರಿಯವಾಗಿರುವುದು ಕವಿಯ ಗಮನಕ್ಕೆ ಬಂದಿದೆ. ವರ್ತಮಾನ ಮತ್ತು ಗತದಲ್ಲಿರುವ ಸಾಮ್ಯತೆಯಿಂದಾಗಿ ಚರಿತ್ರೆ ಸ್ಥಗಿತವಾದಂತೆ ಕವಿಗೆ ಕಾಣುತ್ತದೆ. ಆಧುನಿಕ ಕಾಲದ ಒಂದು ಮುಖ್ಯ ಗ್ರಹೀತವಾದ 'ಚರಿತ್ರೆಯ ಊರ್ಧ್ವಮುಖಿ ಚಲನೆಯ' ಕಲ್ಪನೆಯನ್ನೇ ಈ ಪದಗಳು ನಿರಾಕರಿಸುತ್ತವೆ; ಏಕೆಂದರೆ, ಅಧಿಕಾರ ಮತ್ತು ಯಜಮಾನಿಕೆಯ ಶಕ್ತಿಗಳು ಎಲ್ಲಾ ಸಾಮಾಜಿಕ ಸ್ತರ ಮತ್ತು ವಲಯಗಳನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಂಡಿರುವುದರಿಂದ ಚರಿತ್ರೆಯ ಯಾವುದೇ ಕಾಲವಾದರೂ, ಕವಿಗೆ ಅವು ಒಂದೇ ರೀತಿ ಕಾಣುತ್ತವೆ. ಈ ಶಕ್ತಿಗಳ ಉಪೋತ್ಪನ್ನವಾದ ಪಿತೃಪ್ರಾಧಾನ್ಯತೆ ಮತ್ತು ಅದರ ಮೌಲ್ಯಗಳು ಸಮಾಜವನ್ನು ಮತ್ತಷ್ಟು ಕುರೂಪಗೊಳಿಸಿರುವುದು ಕವಿಯ ಆತಂಕಕ್ಕೆ ಕಾರಣವಾಗುತ್ತದೆ. ಇದರಿಂದಾಗಿ ಗಂಡು–ಹೆಣ್ಣಿನ ಪ್ರೇಮ, ಗಂಡ–ಹೆಂಡತಿಯ ಸಂಬಂಧ ಅರ್ಥ ಕಳೆದುಕೊಂಡುಬಿಟ್ಟಿವೆ. ಅಧಿಕಾರ ಮತ್ತು ಸ್ವಾರ್ಥಗಳಿಲ್ಲದ ಸಾಮಾಜಿಕ ಸಂಬಂಧಗಳು ಸಾಧ್ಯವಾಗುವುದು ಹೇಗೆ ಎನ್ನುವುದೇ ಕವಿಯ ದೊಡ್ಡ ಕಾಳಜಿಯಾಗಿದೆ. ಆದರೆ, ಅದು ಸಾಧ್ಯವಾಗದೆ ಇರುವುದರಿಂದ ಲೋಕ ಕುರೂಪವಾಗಿ ಕಾಣುತ್ತದೆ.

ಸಾಮಾಜಿಕ ಸಂಬಂಧಗಳ ಬಗ್ಗೆ ಮಾತನಾಡುವ ಕಟ್ಟುಪದಗಳು ಪಿತೃಪ್ರಾಧಾನ್ಯತೆಯ ಅಧಿಕಾರದ ಹಿಂದಿರುವ ಅರ್ಥಹೀನತೆಯನ್ನು, ದುರ್ಬಲತೆಯನ್ನು ಹೇಳುತ್ತವೆ. ಇಂಥ ಪದಗಳಲ್ಲಿ ಚಿತ್ರಿತನಾಗುವ ಗಂಡು, ತನ್ನ ಗಂಡಸುತನವನ್ನು ಧಿಮಾಕಿನಿಂದ ಮೆರೆಸುವ ನಿಷ್ಕ್ರಿಯ; ಅರ್ಥಪೂರ್ಣವಾದ ಏನನ್ನೂ ಸೃಷ್ಟಿಸಲಾರದ ದುರ್ಬಲ. ಹಾಗೆಂದ ಮಾತ್ರಕ್ಕೆ ಇಲ್ಲಿನ ಹೆಣ್ಣುಗಳೇನು ವೈಭವೀಕರಿಸಲ್ಪಡುವುದಿಲ್ಲ. ಆಕೆ ಕೂಡ ಬಲಿಪಶುವೇ.

ಗಂಡ–ಹೆಂಡತಿಯ ಸಂಬಂಧಗಳು ಮಾತ್ರವಲ್ಲದೆ, ಉಳಿದ ಸಾಮಾಜಿಕ ಸಂಬಂಧಗಳು ಕೂಡ ಹೀಗೇ ವಿಕಾರವಾಗಿರುವವೇ. ಇದರಿಂದ ಸಾಮಾಜಿಕ ಚಲನೆಯೇ ಕುಂಠಿತವಾಗಿಬಿಟ್ಟಿದೆ. ಇಂಥ ಸಂಬಂಧಗಳ ಜೊತೆಗೆ ಜಾತಿ ವ್ಯವಸ್ಥೆಯೂ ಸೇರಿ ಕುಂಠಿತವಾದ ಚಲನೆ ತೆವಳಲಾರಂಭಿಸುತ್ತದೆ. ಜಾತಿ ಮತ್ತು ಬಂಡವಾಳಶಾಹಿ

ವ್ಯವಸ್ಥೆ ಎರಡೂ ಸೇರಿ ಉಂಟುಮಾಡುವ ಹೆಚ್ಚಿನ ಶ್ರಮಕ್ಕೆ ಕಡಿಮೆ ವೇತನದಂಥ ಅತಾರ್ಕಿಕ ನಿಯಮಗಳು ಸಾಮಾಜಿಕ ವ್ಯವಸ್ಥೆಯನ್ನು ಅಸಮತೋಲನಗೊಳಿಸುತ್ತಿರುವುದು ಕವಿಯನ್ನು ಚಿಂತೆಗೀಡುಮಾಡಿದೆ. ಶ್ರೇಣೀಕರಣ ಮತ್ತು ಜಾತೀಯತೆಯನ್ನು ಸ್ಥಿರಗೊಳಿಸುವುದಕ್ಕೆ ಜ್ಯೋತಿಶ್ಶಾಸ್ತ್ರ ಪೂರಕವಾಗಿರುವುದು, ಮಾಧ್ಯಮಗಳು ಅದನ್ನು ಮಾರಾಟ ಮಾಡುವ ರೀತಿ – ಎಲ್ಲವೂ ಒಂದಕ್ಕೊಂದು ಸರಪಳಿಯಂತೆ ಸೇರಿಕೊಂಡು, ಸಾಮಾಜಿಕ ವ್ಯವಸ್ಥೆಯಲ್ಲಿ ಭೇದಿಸಲಾಗದ ಹಲವಾರು ಸುತ್ತುಗಳ ಕೋಟೆಗಳಾಗಿ ಪರಿಣಮಿಸಿರುವುದರಿಂದ, ಕಟ್ಟುಪದಗಳು ಇಂಥ ಸ್ಥಿತಿಯನ್ನು ನಿಷ್ಠುರವಾಗಿ ವಿಮರ್ಶಿಸುತ್ತಾ ಮ್ಲಾನತೆಗೆ ಜಾರುತ್ತವೆ.




ಗಂಗೆ ಶುದ್ಧಿ ಬೇಗ ಆಗಲಿ. ನಂಗೆ ವಾಸನೆ ಜಾಸ್ತಿಯಾಗಿದೆ ... ಉಮಾ...

* * *

ಹೀಗೆ ಎಲ್ಲವನ್ನೂ ನಿಷ್ಠುರವಾಗಿ ವಿಮರ್ಶಿಸುವ ಕಟ್ಟುಪದಗಳ ಸಾಧ್ಯತೆಗಳೇನು ? ಎಂಬ ಪ್ರಶ್ನೆ ಹುಟ್ಟುತ್ತದೆ. ಶುದ್ಧ ಸೌಂದರ್ಯಮೀಮಾಂಸೆಯ ವ್ಯಾಖ್ಯಾನಗಳ ಚೌಕಟ್ಟಿನಲ್ಲಿ ಕಟ್ಟುಪದಗಳನ್ನು ಹಿಡಿದಿಡಲು ಆಗುವುದಿಲ್ಲ. ಆಧುನಿಕ ಕಾವ್ಯ ಪರಂಪರೆಯಲ್ಲಿ ನವೋದಯ ಮತ್ತು ನವ್ಯ ಸೌಂದರ್ಯಮೀಮಾಂಸೆಯ ವ್ಯಾಖ್ಯಾನಗಳನ್ನು ಗಂಭೀರವಾಗಿ ಪರಿಗಣಿಸಿದ್ದವು. ಇದರಾಚೆಗೆ ಬರುವುದೆಂದರೆ, ಕಟ್ಟುಪದಗಳು ಸಾರ್ವಜನಿಕ ಸಂಸ್ಕೃತಿಯೊಳಗೆ ತಮ್ಮನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸುತ್ತಿವೆ ಎಂದು ಅರ್ಥ. ಇದು ಸಂಸ್ಕೃತಿಯಲ್ಲಿ ಶ್ರೇಣೀಕರಣವನ್ನು ಸೃಷ್ಟಿಸುವ, ಆ ಮೂಲಕ ಯಾಜಮಾನೀಯ ವರ್ಗದ ಸಾಂಸ್ಕೃತಿಕ ಹುನ್ನಾರಗಳಿಗೆ ಕಥನಗಳು ಬಲಿಯಾಗದಂತೆ ಉಳಿಸುತ್ತವೆ.

ಕಟ್ಟುಪದಗಳು ವಿಭಿನ್ನ ರೀತಿಯ ತಂತ್ರಗಳ ಮೂಲಕ ವಸ್ತುವನ್ನು ಹಿಡಿಯಲು ಪ್ರಯತ್ನಿಸುತ್ತವೆ. ಕೆಲವೊಮ್ಮೆ ಬಿ. ಕೆ. ಎಸ್. ವರ್ಮಾ ಅವರ ಚಿತ್ರಕಲೆಯ ತಂತ್ರವನ್ನು (ಪದ ಸಂಖ್ಯೆ ೧೩೮) ಬಳಸಿಕೊಂಡಂತೆ ಕಾಣುತ್ತದೆ. ಇಂಥ ಕಟ್ಟುಪದಗಳಲ್ಲಿ ರೂಪಕಗಳು ಚಿತ್ರಗಳಾಗಿ ಪರಿವರ್ತಿತವಾಗುತ್ತವೆ. ಇನ್ನೂ ಕೆಲವು ಪದಗಳಲ್ಲಿ ಮಾಂತ್ರಿಕ ವಾಸ್ತವತೆಯ ತಂತ್ರ ಬಳಕೆಯಾಗುತ್ತದೆ (ಪದ ಸಂಖ್ಯೆ ೧೪೬). ಮಾಂತ್ರಿಕ ವಾಸ್ತವತೆ ಹುಟ್ಟುವುದೇ ಸಾಮಾಜಿಕ ವ್ಯವಸ್ಥೆಯಲ್ಲಿ ಉಂಟಾಗುವ ಅರಾಜಕತೆಯನ್ನು ನಿರೂಪಿಸಲು ಹಾಗೂ ಈ ವ್ಯವಸ್ಥೆಗೊಂದು ಕ್ರಮಬದ್ಧತೆಯನ್ನು ಕಟ್ಟಿಕೊಡುವ ಸುಪ್ತ ಆಶಯವನ್ನು ಮಾಂತ್ರಿಕ ವಾಸ್ತವತೆ ಒಳಗೊಂಡಿರುತ್ತದೆ. ರಘುನಂದನ್ ಅವರ ಕಟ್ಟುಪದಗಳು ಕೂಡ ಅ–ಕ್ರಮವಾದ ಸಾಮಾಜಿಕ ವ್ಯವಸ್ಥೆಯ ಬಗ್ಗೆ ಮಾತನಾಡುತ್ತಿದ್ದರೂ ಆಳದಲ್ಲಿ ಅವು ಸ–ಕ್ರಮವಾಗಬೇಕೆಂಬ ಆಶಯ ಗಾಢವಾಗಿ ತುಡಿಯುತ್ತದೆ. ಕೆಲವು ಕಟ್ಟುಪದಗಳಲ್ಲಿರುವ ಬಹುಮುಖಿ ಧ್ವನಿಗಳು (೧೦೭,೧೧೧) ಅರ್ಥದ ಸಾಧ್ಯತೆಯನ್ನು ವಿಸ್ತರಿಸುತ್ತವೆ; ಇವು ಕವಿ ಆಯ್ಕೆಮಾಡಿಕೊಂಡಿರುವ ಪ್ರಕಾರ ಮತ್ತು ಆಶಯದ ಗೆಲುವಿಗೆ ನೆರವಾಗುತ್ತವೆ.

ಕವಿಯ ಹೆಸರನ್ನು ಹೇಳದೆ, ಈ ಸಂಕಲನದಲ್ಲಿರುವ ಕೆಲವು ಪದಗಳನ್ನು (೧೦೩,೧೦೪,೧೦೫,೧೧೪...) ಆಯ್ದು ಓದುಗರಿಗೆ ಕೊಟ್ಟು, "ಇವುಗಳನ್ನು ಯಾರು ರಚಿಸಿರಬಹುದು ?" ಎನ್ನುವ ಪ್ರಶ್ನೆಯನ್ನೇನಾದರೂ ಹಾಕಿದರೆ, "ಒಬ್ಬ ಕವಯತ್ರಿ" ಎನ್ನುವ ಉತ್ತರ ಬರುವುದರಲ್ಲಿ ಯಾವ ಸಂದೇಹವೂ ಇಲ್ಲ. ಇತ್ತೀಚಿನ ಸ್ತ್ರೀವಾದಿ ಚಿಂತನೆಗಳು ಪಿತೃಪ್ರಾಧಾನ್ಯತೆಯ ಅಸಮಾನತೆ ಮತ್ತು ಕ್ರೌರ್ಯ ಇಲ್ಲದ ಸ್ವಾಸ್ಥ್ಯ ಸಮಾಜ ರೂಪುಗೊಳ್ಳಬೇಕೆಂದರೆ, ಪುರುಷತ್ವ ಮತ್ತು ಸ್ತ್ರೀತ್ವದ ಚೌಕಟ್ಟುಗಳಾಚೆಗೆ ವ್ಯಕ್ತಿತ್ವಗಳು ವಿಸ್ತರಿಸುವುದರ ಅಗತ್ಯವನ್ನು ಕುರಿತು ಮಾತನಾಡುತ್ತವೆ. ಈ ದೃಷ್ಟಿಯಿಂದ ರಘುನಂದನ್ ಹೆಣ್ಣಿನ ಸಂವೇದನೆಗಳನ್ನು ಇಷ್ಟು ಚೆನ್ನಾಗಿ ಅರ್ಥಮಾಡಿಕೊಂಡು, ಹೆಣ್ಣೊಬ್ಬಳಂತೆಯೇ ಅಭಿವ್ಯಕ್ತಿಸುತ್ತಾರೆನ್ನುವುದು ಮುಖ್ಯವಾದ ಸಂಗತಿಯಾಗುತ್ತದೆ.

ಇಷ್ಟು ಸಾಧ್ಯತೆಗಳಿರುವ ಕಟ್ಟುಪದಗಳಲ್ಲಿ ಅನೇಕ ಸಮಸ್ಯೆಗಳೂ ಇವೆ... ಕೆಲವು ತಾತ್ವಿಕವಾದವು, ಕೆಲವು ತಾಂತ್ರಿಕವಾದವು. ಈ ಲೇಖನದಲ್ಲಿ ಈಗಾಗಲೇ ಪ್ರಸ್ತಾಪಿಸಿದಂತೆ, ಕಟ್ಟುಪದಗಳು ಆಧುನಿಕೋತ್ತರ ಸಾಮಾಜಿಕ ಪರಿಸರದ ಪಲ್ಲಟಗಳನ್ನು, ವಿದ್ಯಮಾನಗಳನ್ನು ವಸ್ತುವಾಗಿಸಿಕೊಂಡಿವೆ. ಆದರೆ, ಈ ವಿಷಯಗಳನ್ನು ನೋಡುವ ದೃಷ್ಟಿಕೋನ ಮಾತ್ರ ಆಧುನಿಕ ರೀತಿಯದು. ಉದಾಹರಣೆ :

*ಕಳೆ ಕಟ್ಟುವುದು ಕನಕದಿಂದಲ್ಲ,*
*ಗುಣ ಇದ್ದರೆ ಕುರೂಪದಲ್ಲೂ ಹೊಳಪು... (೧೦೩)*

ಆಧುನಿಕ ದೃಷ್ಟಿಕೋನದಿಂದ ನೋಡಿದಾಗ ಉದಾರವಾದಿ ರಾಜಕಾರಣದ ಬಲೆಯೊಳಗೆ ಸಿಲುಕಿಕೊಳ್ಳುವ ಅಪಾಯ ಇರುತ್ತದೆ. ಹೀಗಾಗಿ ನೂರಾರು ಸಾಮಾಜಿಕ ಸಮಸ್ಯೆಗಳ ಬಗ್ಗೆ ಮಾತನಾಡುವ ಕವಿ, ಆ ಸಮಸ್ಯೆಗಳಿಗೆ ಉತ್ತರ ದೊರಕದೆ ಒದ್ದಾಡುತ್ತಾರೆ. ಉತ್ತರ ದೊರಕದಿರುವುದಕ್ಕೂ ಈ ಉದಾರವಾದಿ ನಿಲುವೇ ಕಾರಣವಾಗುತ್ತದೆ. ಹೇಗೆಂದರೆ, ಆಧುನಿಕ ಮನಃಸ್ಥಿತಿ ಪ್ರತಿಯೊಂದು ವಿಷಯವನ್ನೂ ದ್ವಿಮಾನ ವೈರುಧ್ಯದಲ್ಲಿ ಗ್ರಹಿಸುತ್ತದೆ. ಆಗ ಯಾವುದೇ ವಿಷಯದ ಬಹುತ್ವದ ರಾಜಕಾರಣ ಗ್ರಹಿಕೆಗೆ ಸಿಲುಕದೆ ನುಣುಚಿ ಕೊಳ್ಳುತ್ತದೆ. ಆದ್ದರಿಂದ ಉತ್ತರ ದೊರಕದೆ ಗೊಂದಲ ಎನಿಸುತ್ತದೆ. ೧೨ನೇ ಶತಮಾನದ ಶ್ರೇಷ್ಠ ವಚನಗಳು ಭಿನ್ನತೆಯ ಕಲ್ಪನೆಯನ್ನು ಸಾರಾಸಗಟಾಗಿ ನಿರಾಕರಿಸಿದ್ದರಿಂದಲೇ ಅವುಗಳ ಸಾಧ್ಯತೆ ಇಂದಿಗೂ ವಿಸ್ತರಿಸುತ್ತಲೇ ಇದೆ. ಆಧುನಿಕ ದೃಷ್ಟಿಕೋನದಿಂದ ವಸ್ತುವನ್ನು ನೋಡಿದಾಗ, ಯಾವ ಯಾಜಮಾನೀಯ ರಚನೆಗಳನ್ನು ಕವಿ ನಿರಾಕರಿಸುತ್ತಾರೋ, ಅದರೊಳಗೆ ಬಂಧಿತವಾಗುವ ದುರಂತ ಎದುರಾಗುತ್ತದೆ. ಉದಾಹರಣೆಗೆ ಒಂದು ನೆಲೆಯಲ್ಲಿ ಇಲ್ಲಿನ ಕಟ್ಟುಪದಗಳು ಸಲಿಂಗಕಾಮವನ್ನು, ಅಡುಗೆಮನೆ ಮಾಯವಾಗುವುದನ್ನು ವಿಡಂಬನೆ ಮಾಡುತ್ತವೆ; ಇನ್ನೊಂದು ನೆಲೆಯಲ್ಲಿ ಪಿತೃಪ್ರಾಧಾನ್ಯತೆಯನ್ನು ಪ್ರಶ್ನಿಸುತ್ತವೆ. ಸಲಿಂಗಕಾಮ ತಪ್ಪು ಎನ್ನುವುದು, ಹೆಣ್ಣನ್ನು ಅಡುಗೆ ಮನೆಗೆ ಗಂಟುಹಾಕುವುದು – ಎರಡೂ ಪುರುಷಾಧಿಕಾರದ ರಾಜಕೀಯವಾದ ರಚನೆಗಳೇ ಆಗಿವೆ. ಅಡುಗೆ ಮನೆ ಇರುವುದರಿಂದಲೇ ಅಪಾರವಾದ ಸಾಮರ್ಥ್ಯ ಇರುವ ಅನೇಕ ಹೆಣ್ಣುಮಕ್ಕಳು ಚರಿತ್ರೆಯಲ್ಲಿ ಹೇಳಹೆಸರಿಲ್ಲದಂತೆ ಕಳೆದುಹೋಗಿದ್ದಾರೆ ಎನ್ನುವುದು ಸ್ತ್ರೀವಾದಿ ಚಿಂತನೆಯ ಒಂದು ಮುಖ್ಯ ವಾದವಾಗಿದೆ. ಕವಿಯ ಈ ನಿಲುವು ಮಹಿಳಾ ವಿರೋಧಿ ಧೋರಣೆಯಾಗುವ ಅಪಾಯವಿದೆ (೧೭೦). ಈ ದೃಷ್ಟಿಕೋನದಿಂದ ಇವು ನಗರದ ಮಧ್ಯಮ ವರ್ಗದ ಕವಿತೆಗಳಾಗಿವೆ. ಎಂದರೆ ಮಧ್ಯಮ ವರ್ಗವು ಶಿಕ್ಷಣ ಪಡೆದು, ಉದ್ಯೋಗ ಇರುವ ಜವಾಬ್ದಾರಿಯುತ ವರ್ಗವಾಗಿದ್ದರೂ, ತಮಗೆ ಅರಿವಿಲ್ಲದಂತೆಯೇ ಯಾಜಮಾನೀಯ ರಚನೆಗಳ ಬುನಾದಿಯನ್ನು ಭದ್ರವಾಗಿಸುವುದರಲ್ಲಿ ಸಕ್ರಿಯವಾಗಿಬಿಡುತ್ತವೆ. ಈ ಪ್ರಕ್ರಿಯೆ ಜೀವವಿರೋಧಿಯಾಗಿ ಬಿಡುವ ಅಪಾಯವನ್ನು ಒಳಗೊಂಡಿರುತ್ತದೆ.

ಬಹಳಷ್ಟು ಕಟ್ಟುಪದಗಳಲ್ಲಿ ಚಿಂತನೆ ಹೆಚ್ಚಾಗಿ 'ಪದ' ಕಡಿಮೆಯಾಗಿಬಿಟ್ಟಿದೆ. ವಚನಗಳು ಭಾಷೆಯ ಅನಂತ ಸಾಧ್ಯತೆಯನ್ನು ಸೂರೆಮಾಡಿದ್ದವು. ಕಟ್ಟುಪದಗಳು ಭಾಷೆಯನ್ನು ಈ ರೀತಿ ದುಡಿಸಿಕೊಳ್ಳಲು ಪ್ರಾರಂಭಿಸಿದಾಗ ಮಾತ್ರ, ಕವಿಯ ಉದ್ದೇಶ, ಎಂದರೆ ಕಟ್ಟುಪದಗಳು 'ಅಸ್ತ್ರ'ವಾಗಬೇಕೆನ್ನುವ ಉದ್ದೇಶ ಈಡೇರುತ್ತದೆ.

ಇಷ್ಟೆಲ್ಲಾ ಮಿತಿಗಳ ನಡುವೆಯೂ ಕಟ್ಟುಪದಗಳು ಯಾಕೆ ಮುಖ್ಯವಾಗುತ್ತವೆ ಎಂದರೆ, ಕವಿ ಕನಸು ಕಾಣುತ್ತಿರುವ ಸಹ್ಯವಾದ, ಸೌಹಾರ್ದವಾದ ಸಾಮಾಜಿಕ ಕ್ರಮವೊಂದರ ಕಾರಣಕ್ಕಾಗಿ. 'ವಚನ' ಎಂಬ ಪ್ರಕಾರವನ್ನು ಕವಿ ಆಯ್ಕೆ ಮಾಡಿಕೊಂಡಿರುವುದರ ಹಿಂದೆ ಕೂಡ ಸಮಾಜವನ್ನು ಪುನರ್‌ರಚಿಸುವ ಆಶಯವೇ ಪ್ರಧಾನವಾಗಿ ಕೆಲಸ ಮಾಡುತ್ತದೆ. ಅದನ್ನು 'ಕಟ್ಟುಪದ' ಎಂದು ಕರೆದಿರುವುದರ ಹಿನ್ನೆಲೆಯಲ್ಲೂ ಈ ಅಂಶ ಸ್ಪಷ್ಟವಾಗುತ್ತದೆ. ಆದರೆ ಯಾವ ತಾತ್ವಿಕ ನೆಲೆಗಟ್ಟಿನ ಮೇಲೆ ಸಮಾಜವನ್ನು ಪುನರ್‌ರಚಿಸಬೇಕೆಂಬುದರ ಬಗ್ಗೆ ಕವಿಗೆ ಸ್ಪಷ್ಟತೆ ಇಲ್ಲ. ಇದಕ್ಕೆ ಹೆಚ್ಚು ದೂರ ಹೋಗಬೇಕಾಗಿಲ್ಲ. ಕನ್ನಡದ ಪರಂಪರೆಯಲ್ಲೇ ಇರುವ ತಾತ್ವಿಕ ನೆಲೆಗಳನ್ನು ಹುಡುಕಿಕೊಂಡರೆ, ಕಟ್ಟುಪದಗಳಿಗೆ ಹೆಚ್ಚು ಪ್ರಸ್ತುತತೆ ಮತ್ತು ಅರ್ಥವಂತಿಕೆ ಪ್ರಾಪ್ತವಾಗುತ್ತದೆ. ಇನ್ನೂ ಸಣ್ಣ ವಯಸ್ಸಿನವರಾದ ಕವಿ, ಬಹಳ ಬೇಗ ಇಂಥ ನೆಲೆಗಳನ್ನು ಕಂಡುಕೊಳ್ಳುತ್ತಾರೆ ಎಂದು ನಿರೀಕ್ಷಿಸಬಹುದಾಗಿದೆ.

**ಬಿ. ಯು. ಸುಮಾ**
ಸಹಪ್ರಾಧ್ಯಾಪಕಿ, ಕನ್ನಡ ಸ್ನಾತಕೋತ್ತರ ಕೇಂದ್ರ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು,
ವಿಜಯನಗರ, ಬೆಂಗಳೂರು – ೫೬೦ ೦೪೦



# ಕೆಲ ದೃಷ್ಟಾಂತ ಕತೆಗಳು

ಖಲೀಲ್ ಗಿಬ್ರಾನ್
ಕನ್ನಡಕ್ಕೆ : ಡಾ॥ ಎಚ್. ಎಸ್. ಅನುಪಮಾ

೧

## ಯುದ್ಧ ಮತ್ತು ಪುಟ್ಟ ರಾಜ್ಯಗಳು

ಒಮ್ಮೆ ಒಂದು ಕುರಿ ಮತ್ತು ಕುರಿಮರಿ ಮೇಯುತ್ತಿರುವ ಒಂದು ಹುಲ್ಲುಗಾವಲಿನ ಮೇಲೆ, ಆಗಸದಲ್ಲೊಂದು ಹದ್ದು ಸುತ್ತುವರಿಯತೊಡಗಿತು. ಹಸಿದು ಕುರಿಮರಿಯನ್ನೇ ನೋಡುತ್ತ ಚಕ್ರಾಕಾರ ತಿರುಗತೊಡಗಿತು. ಇನ್ನೇನು ಅದು ಕೆಳಗಿಳಿದು ಬೇಟೆಯನ್ನು ಹಿಡಿಯಬೇಕು, ಅಷ್ಟರಲ್ಲಿ ಇನ್ನೊಂದು ಹದ್ದು ಕಾಣಿಸಿಕೊಂಡಿತು. ಅದು ಹಸಿದು ಕುರಿ ಮತ್ತು ಕುರಿಮರಿಯತ್ತಲೇ ಗುರಿಯಿಟ್ಟು ಹಾರತೊಡಗಿತು. ಎರಡೂ ಪ್ರತಿಸ್ಪರ್ಧಿ ಎದುರಾಳಿಗಳು ಸಿಳ್ಳು ಹಾಕುತ್ತ, ಭಯಾನಕವಾಗಿ ಕಿರುಚುತ್ತ ಆಗಸದಲ್ಲಿ ಕಾದಾಡ ತೊಡಗಿದವು.

ಕುರಿ ಮೇಲೆ ನೋಡಿತು. ಅದಕ್ಕೆ ತುಂಬ ಆಶ್ಚರ್ಯ ವಾಯಿತು. ತನ್ನ ಮರಿಯತ್ತ ತಿರುಗಿ ಹೇಳಿತು,

'ಮಗೂ, ಎಂಥ ವಿಚಿತ್ರ! ಈ ಎರಡೂ ಮಹಾನ್ ಪಕ್ಷಿಗಳು ಒಂದರೊಡನೊಂದು ಸೆಣಸುತ್ತಿವೆ. ವಿಶಾಲ ಆಗಸ ಅವರಿಬ್ಬರೂ ಹಿಡಿಸುವಷ್ಟು ದೊಡ್ಡದಿಲ್ಲವೇ? ನನ್ನ ಮರಿಯೇ, ಪ್ರಾರ್ಥಿಸು, ದೇವರು ಈ ಇಬ್ಬರು ರೆಕ್ಕೆಗಳಿರುವ ಸೋದರರ ನಡುವೆ ಬೇಗ ಶಾಂತಿ ಹುಟ್ಟುವಂತೆ ಮಾಡಲಿ.'

ಕುರಿಮರಿ ಹೃತ್ಪೂರ್ವಕವಾಗಿ ಪ್ರಾರ್ಥಿಸತೊಡಗಿತು.

*(ದಿ ಫೋರ್ ರನ್ನರ್)*

೨

## ಕಪ್ಪೆಗಳು

ಒಂದು ಬೇಸಿಗೆಯ ರಾತ್ರಿ, ಕಪ್ಪೆಯೊಂದು ತನ್ನ ಸಂಗಾತಿಗೆ ಹೇಳಿತು: 'ಆ ಜನ, ತೀರದಲ್ಲಿ ಬದುಕುವವರು, ನಮ್ಮ ಇರುಳ ಹಾಡುಗಳಿಂದ ತೊಂದರೆಗೊಳಗಾಗುತ್ತಾರೇನೋ ಅನಿಸುತ್ತಿದೆ.'

ಸಂಗಾತಿ ಉತ್ತರಿಸಿತು : 'ಇರಬಹುದು, ಆದರೆ ಹಗಲು ಹೊತ್ತು ತಮ್ಮ ಮಾತುಗಳಿಂದ ಅವರು ನಮ್ಮ ಮೌನ ಹಾಳುಮಾಡುವುದಿಲ್ಲವೆ?'

ಕಪ್ಪೆ ಹೇಳಿತು : 'ಮರೆಯಬೇಡ, ನಾವು ರಾತ್ರಿ ಅತಿಯೆನಿಸುವಷ್ಟು ಹಾಡುತ್ತೇವೆ.'

ಸಂಗಾತಿ ಉತ್ತರಿಸಿತು, 'ಹಗಲು ಹೊತ್ತು ಅವರು ಅತಿಯೆನಿಸುವಷ್ಟು ಹರಟೆ ಹೊಡೆಯುತ್ತಾರೆ, ಕಿರುಚುತ್ತಾರೆ ಎನ್ನುವುದನ್ನೂ ನಾವು ಮರೆಯದಿರೋಣ.'

ಕಪ್ಪೆಯೆಂದಿತು, 'ಆ ಮಂಡರಗಪ್ಪೆ ಬಗ್ಗೆ ಏನು ಹೇಳುತ್ತೀ, ಸುತ್ತಮುತ್ತಲ ಇಡೀ ಪ್ರದೇಶವನ್ನೇ ತನ್ನ ಗೊಗ್ಗರು ಮಂಡ ದನಿಯಲ್ಲಿ ಕಲಕಿಬಿಡುವುದಲ್ಲ?'

ಅದರ ಸಂಗಾತಿ ಹೇಳಿತು : 'ಏ, ಸುಮ್ಮನಿರು, ಆ ರಾಜಕಾರಣಿ, ವಿಜ್ಞಾನಿ ಮತ್ತು ಪೂಜಾರಿ ತೀರಕ್ಕೆ ಬಂದು ಗದ್ದಲದ, ಲಯವಿಲ್ಲದ ತಮ್ಮ ಮಾತುಗಳಿಂದ ವಾತಾವರಣವನ್ನೇ ಕೆಡಿಸುವುದಿಲ್ಲವೆ?'

ಕಪ್ಪೆ ಹೇಳಿತು, 'ಸರಿ, ನಾವು ಈ ಮನುಷ್ಯರಿಗಿಂತ ಉತ್ತಮರಾಗೋಣ. ರಾತ್ರಿ ಹೊತ್ತು ಶಾಂತವಾಗಿರೋಣ. ಚಂದ್ರ ನಮ್ಮ ಲಯಕ್ಕೆ, ತಾರೆಗಳು ನಮ್ಮ ದನಿಯ ಮಾಧುರ್ಯಕ್ಕೆ ಹೆಜ್ಜೆ ಹಾಕಲು ಬಯಸಿದರೂ ಹಾಡುಗಳನ್ನು ನಮ್ಮೆದೆಯಲ್ಲೇ ಇಟ್ಟುಕೊಳ್ಳೋಣ. ಕೊನೆಯ ಪಕ್ಷ ಒಂದೆರಡು ಅಥವಾ ಮೂರು ರಾತ್ರಿಗಳ ಮಟ್ಟಿಗಾದರೂ ಮೌನವಾಗಿರೋಣ.'

ಅದರ ಸಂಗಾತಿ ಹೇಳಿತು : 'ಒಳ್ಳೆಯದು, ಒಪ್ಪಿದೆ. ನಿನ್ನ ಉದಾರ ಹೃದಯದ ಆಲೋಚನೆಯು ಏನನ್ನು ಹೊತ್ತು ತರುವುದೋ ನೋಡೇ ಬಿಡೋಣ.'

ಆ ರಾತ್ರಿ ಕಪ್ಪೆಗಳು ಮೌನವಾಗಿದ್ದವು. ಮರು ರಾತ್ರಿಯೂ ಮೌನವಾಗಿದ್ದವು. ಮೂರನೆಯ ರಾತ್ರಿಯೂ ಮೌನವಾಗಿದ್ದವು.

ಈ ಸಂಗತಿಗಳನ್ನು ಒಂದಕ್ಕೊಂದು ತಳುಕು ಹಾಕುವುದು ಕಷ್ಟ, ಆದರೆ ಆ ಕೊಳದ ತೀರದಲ್ಲಿ ವಾಸಿಸಿದ್ದ ಗಯ್ಯಾಳಿ ಹೆಂಗಸು ಮೂರನೇ ರಾತ್ರಿಯ ನಂತರ ಬೆಳಗಿನ ತಿಂಡಿ ತಿನ್ನುವಾಗ ತನ್ನ ಗಂಡನಿಗೆ ಕೂಗಿ ಹೇಳಿದಳು : 'ಮೂರು ರಾತ್ರಿಯಾಯಿತು ಗೊತ್ತೆ? ನಾನು ನಿದ್ದೆ ಮಾಡಲಿಲ್ಲ. ಕಪ್ಪೆಗಳ ವಟಗುಡುವಿಕೆ ಕಿವಿ ತುಂಬಿದರೆ ನಾನು ಸುರಕ್ಷಿತ ಎನಿಸುತ್ತಿತ್ತು. ಆದರೆ ಹಾಳಾದವಕ್ಕೆ ಏನಾಯಿತೋ, ಮೂರು ರಾತ್ರಿಯಾಯಿತು, ಸದ್ದೇ ಇಲ್ಲ. ನಿದ್ದೆಯಿಲ್ಲದೆ ಹೆಚ್ಚುಕಮ್ಮಿ ಹುಚ್ಚು ಹಿಡಿದ ಹಾಗಾಗಿದೆ.'

ಕಪ್ಪೆ ತನ್ನ ಸಂಗಾತಿಯೆಡೆಗೆ ತಿರುಗಿ ಕಣ್ಣು ಮಿಟುಕಿಸಿ ಹೇಳಿತು : 'ನಾವೂ ಮೂರು ರಾತ್ರಿಗಳಿಂದ ಮೌನದಿಂದಿದ್ದು ಹೆಚ್ಚುಕಮ್ಮಿ ಹುಚ್ಚರಾದೆವು, ಅಲ್ಲವೇ?'

ಸಂಗಾತಿಯೆಂದಿತು : 'ರಾತ್ರಿಯ ಮೌನ ಭಾರವಾಗಿ ಎದೆಯ ಮೇಲೆ ಹೇರಿದಂತಿತ್ತು. ನನಗೀಗ ಅನಿಸುತ್ತಿದೆ, ತಮ್ಮ ಖಾಲಿತನವನ್ನು ಸದ್ದುಗಳಿಂದ ತುಂಬಿಕೊಳ್ಳುವವರ ಸಲುವಾಗಿ ನಾವು ಹಾಡದೇ, ಸದ್ದು ಮಾಡದೇ ಇರುವ ಅವಶ್ಯಕತೆ ಇಲ್ಲ...'

ಅಂದು ರಾತ್ರಿ ಚಂದ್ರ ಬಂದಿದ್ದು ವ್ಯರ್ಥವಾಗಲಿಲ್ಲ, ಕಪ್ಪೆಗಳ ಹಾಡಿನ ಲಯಕ್ಕೆ ಹೆಜ್ಜೆ ಹಾಕಿದ. ತಾರೆಗಳು ಮೂಡಿದ್ದು ವ್ಯರ್ಥವಾಗಲಿಲ್ಲ, ದನಿಯ ಮಾಧುರ್ಯಕ್ಕೆ ಮನಸೋತವು.

*(ದಿ ವಾಂಡರರ್)*

೩

## ಇಬ್ಬರು ರಾಜಕುಮಾರಿಯರು

ಶವಾಕಿಸ್ ಪಟ್ಟಣದಲ್ಲಿ ಒಬ್ಬ ರಾಜಕುಮಾರನಿದ್ದ. ಅವನೆಂದರೆ ಎಲ್ಲರಿಗೂ ಇಷ್ಟ. ಗಂಡು, ಹೆಣ್ಣು, ಮಕ್ಕಳು, ಮುದುಕರು ಎಲ್ಲರಿಗೂ. ಬಯಲ ಪ್ರಾಣಿಗಳೂ ಸಹಿತ ಅವನನ್ನು ಪ್ರೀತಿಸುತ್ತಿದ್ದವು.

ಆದರೆ ಜನ ಮಾತನಾಡಿಕೊಳ್ಳುತ್ತಿದ್ದರು; ಅವನ ಹೆಂಡತಿ, ರಾಜಕುಮಾರಿಗೆ ಮಾತ್ರ ಅವನ ಮೇಲೆ ಪ್ರೀತಿಯಿಲ್ಲ, ಅಷ್ಟೇ ಅಲ್ಲ, ಅವಳಿಗೆ ಅವನ ಮೇಲೆ ದ್ವೇಷ ಇದೆ ಎಂದು.

ಒಮ್ಮೆ ಪಕ್ಕದ ರಾಜ್ಯದ ರಾಜಕುಮಾರಿ ಈ ರಾಜ್ಯದ ಭೇಟಿಗೆ ಬಂದಳು. ಇಬ್ಬರೂ ರಾಜಕುಮಾರಿಯರು ಪರಸ್ಪರ ಮಾತನಾಡಿಕೊಳ್ಳ ತೊಡಗಿದರು. ಅವರ ಮಾತು ತಮ್ಮ ಗಂಡಂದಿರ ಕಡೆಗೆ ಹೊರಳಿತು.

ಶವಾಕಿಸ್‌ನ ರಾಜಕುಮಾರಿ ಮತ್ತೊಬ್ಬಳಿಗೆ



ಹೇಳಿದಳು, 'ನಿನ್ನ ಕಂಡರೆ ನನಗೆ ಹೊಟ್ಟೆಉರಿ ಆಗುತ್ತಿದೆ. ಮದುವೆಯಾಗಿ ಇಷ್ಟು ವರ್ಷ ಕಳೆದ ಮೇಲೂ ನಿನ್ನ ಗಂಡನೊಡನೆ ಎಷ್ಟು ಖುಷಿಯಿಂದ ಇದ್ದೀ. ನನಗೆ ನನ್ನ ಗಂಡನ್ನ ಕಂಡರೆ ಆಗುವುದಿಲ್ಲ. ಅವನು ನನಗಷ್ಟೇ ಸೇರಿದವನಲ್ಲ. ನಾನಂತೂ ಅತ್ಯಂತ ಅಸುಖಿ ಹೆಣ್ಣು ಅನಿಸುತ್ತದೆ.'

ಮತ್ತೊಬ್ಬ ರಾಜಕುಮಾರಿ ಇವಳೆಡೆ ದಿಟ್ಟಿಸಿ ಹೇಳಿದಳು, 'ನಿಜ ಎಂದರೆ ನೀನು ನಿನ್ನ ಗಂಡನ್ನ ಪ್ರೀತಿಸುತ್ತೀ. ಅವನಿಗಾಗಿ ಇನ್ನೂ ಮುಗಿದುಹೋಗದ ತೀವ್ರ ಭಾವನೆಗಳು ನಿನ್ನ ಬಳಿ ಇವೆ. ಹೆಣ್ಣಿಗೆ ತೀವ್ರ ಭಾವನೆಗಳು ಎಂದರೆ ಉದ್ಯಾನವನಕ್ಕೆ ಕಾರಂಜಿಯಿದ್ದ ಹಾಗೆ. ಆದರೆ ನನ್ನ ಮತ್ತು ನನ್ನ ಗಂಡನ ಸ್ಥಿತಿ ನೋಡು : ನಾವು ಒಬ್ಬರನ್ನೊಬ್ಬರು ಮೌನವಾಗಿ ಸಹಿಸಿಕೊಂಡಿದ್ದೇವೆ. ಅದನ್ನೇ ನೀವೆಲ್ಲ ಸಂತೋಷ, ಸುಖ ಎಂದು ಪರಿಗಣಿಸಿದ್ದೀರಿ.'

*(ದಿ ವಾಂಡರರ್)*

## ೪
## ಮಹದಾಸೆ

ನನ್ನಣ್ಣ ಪರ್ವತ. ನನ್ನಕ್ಕ ಕಡಲು. ಇವರಿಬ್ಬರ ನಡುವೆ ನಾನಿಲ್ಲಿ ಕುಳಿತಿದ್ದೇನೆ.

ಏಕಾಂಗಿಯಾಗಿರುವಾಗ ನಾವು ಮೂವರೂ ಒಂದೇ. ನಮ್ಮನ್ನು ಬಂಧಿಸುವ ಪ್ರೀತಿ ಆಳವೂ, ದೃಢವೂ, ವಿಚಿತ್ರವೂ ಆಗಿದೆ. ಅಲ್ಲಲ್ಲ, ಆ ಪ್ರೀತಿ ನನ್ನಕ್ಕ ಕಡಲಿಗಿಂತ ಆಳ. ನನ್ನಣ್ಣ ಪರ್ವತನ ಶಕ್ತಿಗಿಂತ ಶಕ್ತಿಯುತ. ಮತ್ತು ನನ್ನ ಅನೂಹ್ಯ ಹುಚ್ಚುತನಕ್ಕಿಂತ ಹುಚ್ಚುಚ್ಚು.

ನಾವು ಒಬ್ಬರನ್ನೊಬ್ಬರು ನೋಡಿಕೊಂಡ ಆ ಆದಿಮ ಬೆಳಕು ಹರಿದು ಯುಗಗಳೇ ಸರಿದವು. ಹುಟ್ಟು, ಪರಿಪೂರ್ಣ ಬದುಕು, ಸಾವು ಎಲ್ಲವನ್ನೂ ನೋಡಿದ್ದೇವಾದರೂ ನಾವಿನ್ನೂ ಕುತೂಹಲಿಗಳು. ಎಳೆಯರು.

ಎಳೆಯರು, ಕುತೂಹಲಿಗಳು; ಆದರೂ ಸಂಗಾತಿಗಳಿಲ್ಲದವರು. ಯಾರಿಂದಲೂ ಸಂಧಿಸಲ್ಪಡದವರು. ಮುಟ್ಟುವವರಿಲ್ಲದೆ ದುಃಖಿಗಳಾಗಿ ಬಿದ್ದರೂ ಸಂತೈಕೆ ಕಾಣದವರು. ಆಸೆ ಮತ್ತು ತೀವ್ರ ಕಾಮನೆಗಳನ್ನು ನಿಗ್ರಹಿಸಿಕೊಂಡಿದ್ದರೂ ಯಾವ ಸುಖವಿದೆ? ನನ್ನಕ್ಕನ ಹಾಸಿಗೆಯನ್ನು ಬೆಚ್ಚಗಾಗಿಸಬಲ್ಲ ಉರಿವ ದೇವರು ಯಾವಾಗ ಬರುತ್ತಾನೆ? ನನ್ನಣ್ಣನ ದಾಹದ ಉರಿಯನ್ನು ಯಾವ ಮಳೆದೇವತೆ ತಣಿಸುತ್ತಾಳೆ? ನನ್ನ ಹೃದಯವನ್ನು ಆಳುವ ಆ ಅವಳು ಯಾರು?

ರಾತ್ರಿಯ ನೀರವತೆಯಲ್ಲಿ ನನ್ನಕ್ಕ ತನಗೆ ಗೊತ್ತಿಲ್ಲದ ತನ್ನ ಉರಿದೇವರ ಹೆಸರನ್ನು ಕನವರಿಸುತ್ತಾಳೆ. ನನ್ನಣ್ಣ ದೂರದಲ್ಲೆಲ್ಲೋ ಇರುವ ತಂಪುದೇವತೆಯ ಕರೆಯುತ್ತಾನೆ. ಆದರೆ ನಾನು ನನ್ನ ನಿದ್ರೆಯಲ್ಲಿ ಯಾರನ್ನು ಕರೆಯುವೆನೋ, ನನಗೆ ಗೊತ್ತಿಲ್ಲ.

ನಾನಿಲ್ಲಿ ಕುಳಿತಿದ್ದೇನೆ. ನನ್ನಣ್ಣ ಪರ್ವತ, ನನ್ನಕ್ಕ ಕಡಲು, ಇವರಿಬ್ಬರ ನಟ್ಟನಡುವೆ. ನಾವು ಮೂವರೂ ಏಕಾಂಗಿತನದಲ್ಲಿ ಒಂದೇ. ನಮ್ಮನ್ನು ಹಿಡಿದಿಟ್ಟ ಆ ಪ್ರೇಮವಾದರೋ ಆಳ, ಸದೃಢ ಮತ್ತು ವಿಚಿತ್ರ.

## ೫
## ವಂಶ

ಇಶಾನಾ ಸಾಮ್ರಾಜ್ಯದ ರಾಣಿ ಹೆರಿಗೆ ನೋವನನುಭವಿಸುತ್ತಿದ್ದಳು. ರಾಜ ಮತ್ತು ಆ ರಾಜ್ಯದ ಪ್ರಭಾವಿ ವ್ಯಕ್ತಿಗಳೆಲ್ಲ ಉಸಿರು ಬಿಗಿ ಹಿಡಿದು ಆಸ್ಥಾನದಲ್ಲಿ ಕಾಯುತ್ತಿದ್ದರು.

ಅವಸರದಲ್ಲಿ ಒಬ್ಬ ದೂತ ಓಡೋಡುತ್ತ ಬಂದು, ರಾಜನಿಗೆ ನಮಸ್ಕರಿಸಿ ಹೇಳಿದ : 'ಮಹಾರಾಜಾ, ನಾನು ನಿನಗೊಂದು ಸಂತೋಷದ ಸುದ್ದಿ ತಂದಿದ್ದೇನೆ. ನಿನ್ನ ರಾಜ್ಯಕ್ಕೆ, ರಾಜ್ಯದ ಗುಲಾಮರಿಗೂ ಇದು ಅತ್ಯಂತ ಸಂತೋಷದ ಸುದ್ದಿ. ದುಷ್ಟ ಮಿಹ್ರಾಬ್, ನಿನ್ನ ಆಜನ್ಮ ಶತ್ರು, ತೀರಿಕೊಂಡಿದ್ದಾನೆ.'

ರಾಜ ಮತ್ತಿತರ ಗಣ್ಯ ವ್ಯಕ್ತಿಗಳು ಈ ಸುದ್ದಿ ಕೇಳಿದ್ದೇ ಎದ್ದು ನಿಂತು ಸಂತೋಷದಿಂದ ಕೂಗಿದರು. ಏಕೆಂದರೆ ಶಕ್ತಿಶಾಲಿ ಮಿಹ್ರಾಬ್, ಇನ್ನಷ್ಟು ವರ್ಷ ಬದುಕುಳಿದಿದ್ದರೆ, ಇಶಾನಾ ರಾಜ್ಯವನ್ನು ಖಂಡಿತ ಆಕ್ರಮಿಸುತ್ತಿದ್ದ ಹಾಗೂ ಅದರ ಪ್ರಜೆಗಳನ್ನು ಸೆರೆ ಹಿಡಿಯುತ್ತಿದ್ದ.

ಅದೇ ಹೊತ್ತಿಗೆ ಆಸ್ಥಾನ ವೈದ್ಯರೂ ಆಸ್ಥಾನ ಪ್ರವೇಶಿಸಿದರು. ಆತನ ಹಿಂದೆ ಅಂತಃಪುರದ ದಾದಿಯರೂ ಪ್ರವೇಶಿಸಿದರು. ವೈದ್ಯ ರಾಜನಿಗೆ ನಮಸ್ಕರಿಸಿ ಹೇಳಿದ : 'ನನ್ನ ದೊರೆ ದೀರ್ಘಾಯುವಾಗಲಿ. ಅಗಣಿತ ತಲೆಮಾರುಗಳು ಅವನ ವಂಶವನ್ನು ಮುಂದುವರಿಸುತ್ತ ಇಶಾನಾ ಸಾಮ್ರಾಜ್ಯವನ್ನು ಆಳುತ್ತ ಹೋಗಲಿ. ರಾಜನೇ, ನಿನಗೆ ಈ ಹೊತ್ತು ಒಬ್ಬ ಮಗ, ನಿನ್ನ ಸಿಂಹಾಸನಕ್ಕೆ ಉತ್ತರಾಧಿಕಾರಿಯಾಗುವವ ಹುಟ್ಟಿದ್ದಾನೆ.'

ಈಗ ಮಾತ್ರ ರಾಜನ ಆತ್ಮ ಹರ್ಷಾತಿರೇಕದಿಂದ ನಲಿನಲಿದಾಡಿತು. ಯಾವ ಕ್ಷಣದಲ್ಲಿ ಅವನ ಪರಮ ಶತ್ರು ಮರಣ ಹೊಂದಿದನೋ ಅದೇ ಕ್ಷಣದಲ್ಲಿ ರಾಜನ ವಂಶೋದ್ಧಾರಕನೂ ಜನಿಸಿದ್ದ.

ಇಶಾನಾ ಪಟ್ಟಣದಲ್ಲಿ ಒಬ್ಬ ಸಂತ, ಪ್ರವಾದಿ ವಾಸವಾಗಿದ್ದ. ಆತ ತರುಣ, ನಿರ್ಭಿಡೆಯವ. ಅದೇ ರಾತ್ರಿ ಆ ಪ್ರವಾದಿಯನ್ನು ತನ್ನ ಬಳಿ ಕರೆತರುವಂತೆ ರಾಜ ಆಜ್ಞೆ ಮಾಡಿದ. ಅವನನ್ನು ಕರೆತಂದಾಗ ರಾಜ ಹೇಳಿದ, 'ಕಾಲಜ್ಞಾನಿ ಪ್ರವಾದಿಯೇ, ಇವತ್ತು ಹುಟ್ಟಿದ ನನ್ನ ಮಗನ ಭವಿಷ್ಯ ಏನು, ಹೇಳು.'

ಪ್ರವಾದಿ ಕೊಂಚವೂ ಹಿಂಜರಿಕೆಯಿಲ್ಲದೆ ಹೇಳಿದ : 'ಕೇಳು ರಾಜನೇ, ಇವತ್ತು ಹುಟ್ಟಿದ ನಿನ್ನ ಮಗನ ಭವಿಷ್ಯ ಇದು. ನಿನ್ನೆ ಸತ್ತ ನಿನ್ನ ಪರಮ ಶತ್ರು ಮಿಹ್ರಾಬನ ಆತ್ಮ, ದಿನವಿಡೀ ಗಾಳಿಯಲ್ಲೇ ಸುತ್ತಿತು. ತಾನು ಪ್ರವೇಶಿಸಲು ಒಂದು ದೇಹವನ್ನು ಹುಡುಕಿತು. ಕೊನೆಗೆ ಅದೇ ಹೊತ್ತಿಗೆ ಹುಟ್ಟಿದ ನಿನ್ನ ಮಗನ ದೇಹವನ್ನು ಪ್ರವೇಶಿಸಿತು.'

ರಾಜ ಆಕ್ರೋಶಗೊಂಡ. ಆ ಕ್ಷಣವೇ ಕತ್ತಿ ಹಿರಿದು ಸಂತನ ತಲೆ ಹಾರಿಸಿದ.

ಅವತ್ತಿನಿಂದ ಇವತ್ತಿನವರೆಗೂ ಎಲ್ಲ ರಾಜ್ಯಗಳ ಜ್ಞಾನಿಗಳು ಹೇಳುತ್ತಲೇ ಇದ್ದಾರೆ,

### ಬೇಕು – ಬೇಡ

ನೆತ್ತರು ಹರಿಯುತ್ತಿದೆ ಅಲ್ಲಿ ಷಿಯಾ ಸುನ್ನಿಗಳ ನಡುವೆ
ನಾ ಶ್ರೇಷ್ಠ, ನೀ ಕನಿಷ್ಠ ಎಂಬುದವರ ಲೆಕ್ಕಾಚಾರ
ಬದುಕುಳಿಯಲು ಸುನ್ನಿಯೂ ಬೇಡ, ಷಿಯಾನೂ ಬೇಡ
ಬೇಕು ಗಾಳಿ, ನೀರು, ಬೆಳಕು, ಅನ್ನ ಆಹಾರ !

**ಆನಂದ ಎನ್. ಎಲ್**
ಉಪನ್ಯಾಸಕರು, ಸಿ.ಎಂ.ಆರ್. ಕಾಲೇಜು
ಕಲ್ಯಾಣ ನಗರ, ಬೆಂಗಳೂರು

'ಎಂದಿನಿಂದ ಹೇಳ್ತಾನೇ ಬಂದಿದೇವೆ, ನಮ್ಮ ರಾಜ್ಯ ತನ್ನ ಶತ್ರುವಿನಿಂದ ಆಳಲ್ಪಡುತ್ತಾ ಇದೆ.'

೬

## ಜ್ಞಾನ–ಅರೆಬರೆ ಜ್ಞಾನ

ನದಿಯ ದಂಡೆಯಲ್ಲಿ ತೇಲುತ್ತಿದ್ದ ಮರದ ದಿಮ್ಮಿಯ ಮೇಲೆ ನಾಲ್ಕು ಕಪ್ಪೆಗಳು ಕುಳಿತು ಕೊಂಡವು. ಇದ್ದಕ್ಕಿದ್ದಂತೆ ಏರಿದ ಪ್ರವಾಹಕ್ಕೆ ಆ ಮರದ ದಿಮ್ಮಿ ಕೊಚ್ಚಿಕೊಂಡು ಹೋಗತೊಡಗಿತು. ಆ ಕಪ್ಪೆಗಳು ಈ ಮೊದಲು ಎಂದೂ ಆ ರೀತಿ, ಅಷ್ಟು ವೇಗವಾಗಿ ನೀರ ಮೇಲೆ ತೇಲಿರಲಿಲ್ಲ. ತೇಲುವ ಆ ಆನಂದದಲ್ಲಿ, ಸಂಭ್ರಮದಲ್ಲಿ ಅವು ಮುಳುಗಿ ಹೋದವು.

ಮೊದಲ ಕಪ್ಪೆ ಹೇಳಿತು : 'ಈ ಮರದ ದಿಮ್ಮಿ ನಿಜಕ್ಕೂ ಅದ್ಭುತ. ಇದು ಜೀವವಿದೆಯೇನೋ ಎನ್ನುವಂತೆ ಚಲಿಸುತ್ತಿದೆ. ಈ ಮೊದಲು ಯಾವ ದಿಮ್ಮಿಯೂ ಹೀಗೆ ಚಲಿಸುವುದನ್ನು ನಾನು ನೋಡಿರಲಿಲ್ಲ.'

ನಂತರ ಎರಡನೆಯ ಕಪ್ಪೆ ಮಾತನಾಡಿತು : 'ಇಲ್ಲ ಗೆಳೆಯಾ, ಈ ಮರದ ದಿಮ್ಮಿ ಉಳಿದ ದಿಮ್ಮಿಗಳಂತೆಯೇ ಇದೆ, ಏನೂ ವಿಶೇಷವಿಲ್ಲ. ಅದು ಚಲಿಸುತ್ತಿಲ್ಲ. ನದಿ ಕಡಲಿನ ಕಡೆಗೆ ನಡೆಯುತ್ತಿದೆ ಮತ್ತು ಅದು ಮರದ ದಿಮ್ಮಿಯನ್ನೂ, ನಮ್ಮನ್ನೂ ಕೊಂಡೊಯ್ಯುತ್ತಿದೆ.'

ಮೂರನೆಯ ಕಪ್ಪೆ ಮಾತನಾಡಿತು : 'ಮರದ ದಿಮ್ಮಿಯೂ ಚಲಿಸುತ್ತಿಲ್ಲ, ನದಿಯೂ ಚಲಿಸುತ್ತಿಲ್ಲ. ಚಲನೆ ನಮ್ಮ ಆಲೋಚನೆಯಲ್ಲಿದೆ. ಏಕೆಂದರೆ ನಮ್ಮ ಆಲೋಚನೆಗೆ ಬರದ ಯಾವುದೂ ಚಲಿಸುವುದಿಲ್ಲ.'

ಆ ಮೂರೂ ಕಪ್ಪೆಗಳು ನಿಜವಾಗಿ ಚಲಿಸುತ್ತಿರುವುದು ಯಾವುದು ಎಂಬ ಬಗ್ಗೆ ವಾದವಿವಾದ ಮಾಡುತ್ತ ಜಗಳಕ್ಕಿಳಿದವು. ಜಗಳ ಜೋರು ಜೋರಾಯಿತು, ದೊಡ್ಡ ದನಿಯದಾಯಿತು. ಆದರೆ ವಿವಾದ ಇತ್ಯರ್ಥವಾಗಲಿಲ್ಲ.

ಅವು ಮೂರೂ ನಾಲ್ಕನೆಯ ಕಪ್ಪೆಯ ಕಡೆ ತಿರುಗಿದವು. ಅದು ಇದುವರೆಗೂ ಇವರ ವಾದಗಳನ್ನೆಲ್ಲ ಕೇಳುತ್ತ ಮೌನವಾಗಿ, ಶಾಂತಿಯಿಂದ ಕೂತಿತ್ತು. ಅದರ ಅಭಿಪ್ರಾಯವೇನೆಂದು ಮೂರೂ ಕಪ್ಪೆಗಳು ಕೇಳಿದವು.

ನಾಲ್ಕನೆಯ ಕಪ್ಪೆ ಹೇಳಿತು: 'ನೀವೆಲ್ಲ ಹೇಳಿದ್ದೂ ಸರಿ. ನಿಮ್ಮಲ್ಲಿ ಯಾರೂ ತಪ್ಪು ಹೇಳಿಲ್ಲ. ಚಲನೆ ಮರದ ದಿಮ್ಮಿಯಲ್ಲಿದೆ, ನದಿಯಲ್ಲಿದೆ ಹಾಗೂ ನಮ್ಮ ಆಲೋಚನೆಯಲ್ಲಿದೆ.'

ಮೂರೂ ಕಪ್ಪೆಗಳಿಗೆ ತುಂಬ ಸಿಟ್ಟು ಬಂತು. ಅವರ್‍ಯಾರಿಗೂ ತನ್ನದು ಮಾತ್ರ ಏಕಮೇವ ಸತ್ಯವಲ್ಲ ಎನ್ನುವ ಸತ್ಯ ಬೇಡವಾಗಿತ್ತು. ಉಳಿದಿಬ್ಬರು ಹೇಳಿದ್ದು ಪೂರ್ಣವಾಗಿ ತಪ್ಪಲ್ಲ ಎಂಬ ಮಾತು ಕೇಳಲೂ ಅವರು ಸಿದ್ಧರಿರಲಿಲ್ಲ.

ಆಗೊಂದು ವಿಚಿತ್ರ ನಡೆಯಿತು. ಆ ಮೂರೂ ಕಪ್ಪೆಗಳು ಒಟ್ಟಾಗಿ ನಾಲ್ಕನೆಯದನ್ನು ಮರದ ದಿಮ್ಮಿಯಿಂದ ಕೆಳಗೆ, ನದಿಗೆ ದೂಡಿಬಿಟ್ಟವು.




೭

## ಅಚ್ಚ ಬಿಳಿಯ ಹಾಳೆ ಹೇಳಿತು

ಅಚ್ಚ ಬಿಳಿಯ ಹಾಳೆ ಹೇಳಿತು : 'ನಾನು ಸೃಷ್ಟಿಯಾದಾಗ ಶುಭ್ರವಾಗಿದ್ದೆ. ಎಂದೆಂದೂ ಶುಭ್ರವಾಗೇ ಉಳಿಯುವೆ. ನನ್ನನ್ನು ಸುಟ್ಟು ಬೂದಿ ಮಾಡಿದರೂ ಚಿಂತೆಯಿಲ್ಲ, ಕಪ್ಪು ಕತ್ತಲು ನನ್ನ ಮುಟ್ಟಲು ಬಿಡುವುದಿಲ್ಲ, ಮಲಿನವಾದದ್ದನ್ನು ಬಳಿ ಬರಲು ಬಿಡುವುದಿಲ್ಲ.'

ಬಿಳಿಯ ಹಾಳೆ ಹೇಳಿದ್ದು ಮಸಿ ಕುಡಿಕೆಗೆ ಕೇಳಿಸಿತು. ತನ್ನ ಕಪ್ಪು ಹೃದಯದುಂಬಿ ಅದು ನಕ್ಕಿತು. ಆದರೆ ಬಿಳಿ ಹಾಳೆಯ ಬಳಿ ಹೋಗುವ ಧೈರ್ಯ ಮಾಡಲಿಲ್ಲ. ಬಣ್ಣಬಣ್ಣದ ಪೆನ್ಸಿಲ್‌ಗಳೂ ಈ ಮಾತು ಕೇಳಿದವು. ಅವೂ ಅದರ ಬಳಿ ಹೋಗಲಿಲ್ಲ.

ಹಿಮದಷ್ಟು ಶುಭ್ರವಾದ ಹಾಳೆ ಶುಭ್ರವಾಗಿ, ಪವಿತ್ರವಾಗಿಯೇ ಉಳಿಯಿತು – ಶುಭ್ರ, ಪವಿತ್ರ ಮತ್ತು ಖಾಲಿ.

೮

## ದೇವರ ಅರಸುತ್ತ...

ಇಬ್ಬರು ಕಣಿವೆ ದಾರೀಲಿ ನಡೀತಾ ಇದ್ರು. ಒಬ್ಬ ಒಂದು ಪರ್ವತದ ಕಡೆ ಬೊಟ್ಟು ಮಾಡಿ ತೋರಿಸಿ ಹೇಳಿದ : 'ಅಲ್ಲೊಂದು ಆಶ್ರಮ ಕಾಣ್ತಾ ಇದೆಯಲ್ಲ ನಿಂಗೆ ? ಅಲ್ಲೊಬ್ಬ ಇದಾನೆ. ತುಂಬ ಹಿಂದೇನೇ ಈ ಪ್ರಪಂಚದ ಸಂಬಂಧ ಕಡಿದುಕೊಂಡಿದಾನೆ. ಅವನಿಗೆ ಈ ನೆಲದ ಮೇಲಿನ ಯಾವ್ದೂ ಕಾಣಲ್ಲ, ದೇವರನ್ನಷ್ಟೆ ಹುಡುಕ್ತ ಇದಾನೆ.'

ಮತ್ತೊಬ್ಬ ಹೇಳಿದ : 'ಅವ್ನು ತನ್ನ ಆಶ್ರಮ ಬಿಡೋತಂಕ ದೇವರು ಕಾಣಸಲ್ಲ. ಆ ಆಶ್ರಮದ ಏಕಾಂತ ಬಿಟ್ಟು ಈ ಜಗತ್ತಿಗೆ ಬಂದು ನಮ್ಮ ಸುಖ ದುಃಖ ಹಂಚ್ಕೋಬೇಕು. ಮದುವೆ ಮನೇಲಿ ಕುಣಿಯೋರ ಜೊತೆ ಸೇರಿ ತಾನೂ ಕುಣೀಬೇಕು. ಸತ್ತವರ ಮನೆಯೋರು ಶವಪೆಟ್ಟಿಗೆ ಮುಂದೆ ಅಳೋವಾಗ ಅವ್ರ ಜೊತೆ ತಾನೂ ಅಳಬೇಕು.'

ಮೊದಲನೆಯವನಿಗೆ ಇವ ಹೇಳಿದ್ದು ಸರಿ ಅಂತೇನೋ ಅನಿಸ್ತು. ಆದ್ರೂ ತನ್ನ ಮನಸಲ್ಲಿರೋದನ್ನ ತೋರಿಸದೇ ಹೇಳಿದ : 'ನೀ ಹೇಳಿದ್ದೆಲ್ಲವನ್ನ ಒಪ್ತೀನಿ ನಾನು. ಆದ್ರೂ ಆ ಋಷಿ ಒಳ್ಳೆಯೋನು ಅಂತನೇ ಅನಿಸ್ತಿದೆ ನಂಗೆ. ಒಬ್ಬ ಒಳ್ಳೇ ಮನುಷ್ಯ ತನ್ನ ಇಲ್ಲದಿರುವಿಕೆಯಿಂದ ಒಳ್ಳೇದು ಮಾಡೋದು ಇಲ್ಲಿರುವ ಇಷ್ಟೊಂದು ಜನರ ತೋರುಗಾಣಿಕೆಯ ಒಳ್ಳೇತನಕ್ಕಿಂತ ಒಳ್ಳೇದು ಅನಿಸಲ್ವೆ ನಿನಗೆ ?'

*(ದಿ ವಾಂಡರರ್)*

೯

## ನದಿ

ಕದಿಶಾ ಕಣಿವೆಯಲ್ಲಿ ಮಹಾನದಿಗಳು ಹರಿಯುತ್ತವೆ. ಅಲ್ಲಿ ಎರಡು ತೊರೆಗಳು ಪರಸ್ಪರ ಭೇಟಿಯಾಗಿ ಮಾತಾಡತೊಡಗಿದವು.

ಒಂದು ತೊರೆ ಕೇಳಿತು : 'ಹೇಗೆ ಬಂದೆ ? ನಿನ್ನ ಪಯಣ ಹೇಗಿತ್ತು ?'

ಮತ್ತೊಂದು ಉತ್ತರಿಸಿತು : 'ಓಹ್, ಏನು ಹೇಳುವುದು ? ನನ್ನ ದಾರಿ ತುಂಬ ಅಡಚಣೆ, ಆತಂಕದಿಂದ ತುಂಬಿತ್ತು. ಏತದ ಗಾಲಿ ಮುರಿದು ಹೋಯಿತು. ಕಾಲುವೆ ತೋಡಿ ನನ್ನನ್ನು ತನ್ನ ತೋಟಕ್ಕೆ ಹರಿಸುತ್ತಿದ್ದ ಆ ದೊಡ್ಡ ರೈತ ತೀರಿಕೊಂಡ. ಸುಮ್ಮನೆ ಬಿಸಿಲಿಗೆ ಮೈ ಕಾಯಿಸುತ್ತ ಕೂತ ಸೋಮಾರಿಗಳು ಗುಡ್ಡೆ ಹಾಕಿದ ಕಸ, ತಿಪ್ಪೆಯನ್ನೆಲ್ಲ ದಾಟಿ ಬಂದೆ. ನನ್ನದಿರಲಿ, ನಿನ್ನ ದಾರಿ ಹೇಗಿತ್ತು ?'

ಇನ್ನೊಂದು ತೊರೆ ಉತ್ತರಿಸಿತು : 'ನನ್ನ ದಾರಿ ಬೇರೆ ರೀತಿಯದಾಗಿತ್ತು. ನಾಜೂಕು ಮರಗಳ, ಪರಿಮಳದ ಹೂವುಗಳ ಪರ್ವತದಿಂದ ಇಳಿದು ಬಂದೆ. ಜನ ಬೆಳ್ಳಿ ಲೋಟಗಳಲ್ಲಿ ನನ್ನ ತುಂಬಿ ತುಂಬಿ ಕುಡಿದರು. ಎಳೆಯ ಕಂದಮ್ಮಗಳು ತಮ್ಮ ನಸುಕೆಂಪು ಅಂಗಾಲುಗಳನ್ನು ನನ್ನ ದಡದ ನೀರಲ್ಲಿ ಆಡಿಸುತ್ತ ಖುಷಿಪಟ್ಟರು. ಅಲ್ಲಿ ನಗು, ಖುಷಿಯ ಹಾಡು ತುಂಬಿತ್ತು. ನಿನ್ನ ದಾರಿ ಮಾತ್ರ ಹಾಗಿತ್ತು ಎಂದೆ ಅಲ್ಲವೆ ? ಛೇ !'

ಅದೇ ಹೊತ್ತಿಗೆ ನದಿಯು ಗಟ್ಟಿದನಿಯಲ್ಲಿ ಕೂಗಿ ಹೇಳಿತು : 'ಬರ್‍ರಿ ಬರ್‍ರಿ. ನಾವೆಲ್ಲ ಕಡಲ ಕಡೆ ಹೋಗುವ ಬನ್ನಿ. ಮಾತಾಡಿದ್ದು ಸಾಕು, ನಂಜೊತೆ ಬನ್ನಿ. ಎಲ್ಲ ಬಂದು ನನ್ನಲ್ಲಿ ಒಂದಾದರೆ ನಿಮ್ಮ ತಿರುಗಾಟದ ಸುಖದುಃಖ ಮರೆತುಬಿಡ್ತೀರಿ. ಬರ್‍ರಿ ಬರ್‍ರಿ, ನಾನು–ನೀವು ನಮ್ಮ ಎಲ್ಲ ದಾರಿಗಳ ಮರೆತು ನಮ್ಮಮ್ಮ ಕಡಲಮ್ಮನ ಎದೆಯ ಸೇರೋಣ.'

*(ದಿ ವಾಂಡರರ್)*

---

**ಖಲೀಲ್ ಗಿಬ್ರಾನ್**
ಕನ್ನಡಕ್ಕೆ : **ಡಾ॥ ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ
ಕಾವಲಕ್ಕಿ ಅಂಚೆ – ೫೮೧ ೩೬೧
ಹೊನ್ನಾವರ ತಾಲ್ಲೂಕು
ಉತ್ತರ ಕನ್ನಡ ಜಿಲ್ಲೆ






# ಯುವಶಿಲ್ಪಿ ದಾನಯ್ಯ

**ಚಾ**ಲುಕ್ಯ ಶಿಲ್ಪಕಲೆಗೆ ಪ್ರಸಿದ್ಧವಾಗಿರುವ ಬಾದಾಮಿ ಆರ್. ಎಂ. ಹಡಪದರಂತಹ ಚಿತ್ರಕಲಾವಿದರು, ಎನ್. ಎಚ್. ಕುಲಕರ್ಣಿಯವರಂತಹ ಶಿಲ್ಪಕಲಾವಿದರಿಗೆ ಜನ್ಮ ನೀಡಿದೆ. ಇವರ ಪರಂಪರೆಗೆ ಸೇರುವ ಮತ್ತೋರ್ವ ಶಿಲ್ಪಿ ಬಾದಾಮಿಯ ದಾನಯ್ಯ ಚೌಕಿಮಠರು.

ಈ ಯುವ ಶಿಲ್ಪಿಯ ಉಳಿಯ ಮೊನೆಯಿಂದ ಮನಸ್ಸಿಗೆ ಮುದ ನೀಡುವಂತಹ ನೂರಾರು ಶಿಲ್ಪಗಳು ಅರಳಿವೆ. ಮುಖ್ಯವಾಗಿ ಶಿಲೆ, ಮರ, ಮೃತ್ತಿಕೆ (ಮಣ್ಣು) ಮಾಧ್ಯಮಗಳಲ್ಲಿ ಸುಂದರವಾದ / ಅರ್ಥಪೂರ್ಣವಾದ ಶಿಲ್ಪಕಲಾಕೃತಿಗಳು ಇವರಿಂದ ಮೂಡಿಬಂದಿವೆ.



– ಕಾರ್ಕಳದಲ್ಲಿ ಮೂರು ವರ್ಷ ಸಾಂಪ್ರದಾಯಿಕ ಶಿಲ್ಪಕಲೆಯಲ್ಲಿ ತರಬೇತಿ ಹೊಂದಿದ ಇವರು ಹಂಪಿ ಕನ್ನಡ ವಿಶ್ವವಿದ್ಯಾಲಯದ ಬಾದಾಮಿ–ಬನಶಂಕರಿ ಶಾಖೆಯಲ್ಲಿ ಶಿಲ್ಪಕಲೆಯಲ್ಲಿ ಬಿ.ವಿ.ಎ. ಪದವಿ ಹೊಂದಿರುವವರು.

ದಾನಯ್ಯರು ಗ್ವಾಲಿಯರ್, ಕಾಶ್ಮೀರ, ಬೆಂಗಳೂರು, ಹಂಪಿ, ಕುಪ್ಪಳಿ ಮೊದಲಾದೆಡೆಗಳಲ್ಲಿ ನಡೆದ ರಾಜ್ಯ ಮತ್ತು ರಾಷ್ಟ್ರೀಯ ಕಲಾ ಶಿಬಿರಗಳಲ್ಲಿ ಆಹ್ವಾನಿತರಾಗಿ ಶಿಲ್ಪಕಲಾಕೃತಿಗಳನ್ನು ರಚಿಸಿ ಕಲಾಭಿಜ್ಞರ ಗಮನ ಸೆಳೆದಿರುವವರು.

ಸದ್ಯ ಬಾದಾಮಿಯಲ್ಲೇ ನೆಲೆಸಿ ಕಲಾಸೃಷ್ಟಿಯಲ್ಲಿ ಕ್ರಿಯಾಶೀಲರಾಗಿದ್ದಾರೆ.

*ಡಾ|| ಶಿವಾನಂದ ಎಚ್. ಬಂಟನೂರ*
ದೃಶ್ಯಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ




Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

